# ನವ್ಯ ಕಥನ ಸಾಹಿತ್ಯದಲ್ಲಿ ಮಹಿಳೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ
ಅಧ್ಯಯನ ಪ್ರಬಂಧ)



ಸಂಶೋಧಕರು

ಎಲ್.ರೂಪ ಪ್ರಿಯದರ್ಶಿನಿ

ಖಾಯಂ ನೋಂದಣಿ ಸಂಖ್ಯೆ : **KRSM – 00148**

ಮಾರ್ಗದರ್ಶಕರು

ಡಾ.ಎಚ್.ಪಿ.ಗೀತಾ
ಸಹ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮದರ್ಜೆಕಾಲೇಜು
ಕುವೆಂಪುನಗರ
ಮೈಸೂರು.



ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ (ರಿ), ಮಂಡ್ಯ
೨೦೧೫

745

# ನವ್ಯ ಕಥನ ಸಾಹಿತ್ಯದಲ್ಲಿ ಮಹಿಳೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಅಧ್ಯಯನ ಪ್ರಬಂಧ)



ಸಂಶೋಧಕರು

**ಎಲ್.ರೂಪ ಪ್ರಿಯದರ್ಶಿನಿ**

**ಖಾಯಂ ನೋಂದಣಿ ಸಂಖ್ಯೆ : KRSM – 00148**

ಮಾರ್ಗದರ್ಶಕರು

**ಡಾ.ಎಚ್.ಪಿ.ಗೀತಾ**

ಸಹ ಪ್ರಾಧ್ಯಾಪಕರು

ಸರ್ಕಾರಿ ಪ್ರಥಮದರ್ಜೆಕಾಲೇಜು

ಕುವೆಂಪುನಗರ

ಮೈಸೂರು.



ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

ಕರ್ನಾಟಕ ಸಂಘ (ರಿ), ಮಂಡ್ಯ

೨೦೧೫

# <u>ಸಂಶೋಧಕರ ಪ್ರಮಾಣ ಪತ್ರ</u>

**'ನವ್ಯ ಕಥನ ಸಾಹಿತ್ಯದಲ್ಲಿ ಮಹಿಳೆ'** ಎಂಬ ಶೀರ್ಷಿಕೆಯ ಮಹಾ ಪ್ರಬಂಧವನ್ನು ಪಿಎಚ್.ಡಿ., ಪದವಿಗಾಗಿ ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ, ಕರ್ನಾಟಕ ಸಂಘ (ರಿ.), ಮಂಡ್ಯ. ಈ ಸಂಸ್ಥೆ ಮೂಲಕ ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಸಲ್ಲಿಸಲು **ಡಾ. ಎಚ್.ಪಿ.ಗೀತಾ** ಅವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪ್ರಸ್ತುತ ಪ್ರಬಂಧವನ್ನು ಮತ್ತು ಇದರ ಯಾವುದೇ ಭಾಗವನ್ನು ಈ ಹಿಂದೆ ಯಾವುದೇ ಪದವಿಗಾಗಲೀ ಅಥವಾ ಇತರೆ ಯಾವುದೇ ಉದ್ದೇಶಕ್ಕಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಮಂಡ್ಯ
ದಿನಾಂಕ: ೧೭.೧೨.೨೦೧೫

**ಎಲ್.ರೂಪಪ್ರಿಯದರ್ಶಿನಿ**
**ಸಂಶೋಧಕರು**
**ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ**
**ಕರ್ನಾಟಕ ಸಂಘ (ರಿ.), ಮಂಡ್ಯ.**

# ಮಾರ್ಗದರ್ಶಕರ ಪತ್ರ

ಶ್ರೀಮತಿ ಎಲ್.ರೂಪಪ್ರಿಯದರ್ಶಿನಿ ಇವರು **'ನವ್ಯ ಕಥನ ಸಾಹಿತ್ಯದಲ್ಲಿ ಮಹಿಳೆ'** ಎಂಬ ಶೀರ್ಷಿಕೆಯ ಮಹಾ ಪ್ರಬಂಧವನ್ನು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಎಚ್.ಡಿ., ಪದವಿಗಾಗಿ ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ, ಕರ್ನಾಟಕ ಸಂಘ(ರಿ.), ಮಂಡ್ಯ. ಈ ಸಂಸ್ಥೆಯ ಮೂಲಕ ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಮತ್ತು ಇದರ ಯಾವುದೇ ಭಾಗವನ್ನು ಈ ಹಿಂದೆ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಗೀತಾ ಎಚ್.ಪಿ.

**ಡಾ. ಎಚ್.ಪಿ.ಗೀತಾ**
**ಸಹ ಪ್ರಾಧ್ಯಾಪಕರು**
**ಸರ್ಕಾರಿ ಪ್ರಥಮ ದರ್ಜೆ ಕಾಲೇಜು**
**ಕುವೆಂಪುನಗರ, ಮೈಸೂರು.**

**ಸ್ಥಳ : ಮಂಡ್ಯ**
**ದಿನಾಂಕ: ೧೭.೧೨.೨೦೧೫**

# ಪರಿವಿಡಿ

# ಅಧ್ಯಾಯ – ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ೧.೦ ಪೀಠಿಕೆ :

ಇಂದು ಮಹಿಳೆ ತನ್ನನ್ನು ತಾನು ಆಧುನಿಕ ವಿಚಾರಧಾರೆಗೆ ತೆರೆದುಕೊಂಡು ಎಲ್ಲಾ ಕ್ಷೇತ್ರಗಳಲ್ಲೂ ಪುರುಷರಿಗೆ ಸರಿಸಮಾನವಾಗಿ ನಿಂತು ವಿಶಿಷ್ಟ ಸಾಧನೆಯನ್ನು ಮಾಡುತ್ತಿದ್ದಾಳೆ. ಆದರೂ ಅವಳ ಮೇಲಾಗುತ್ತಿರುವ ಶೋಷಣೆ ನಿಂತಿಲ್ಲ. ವೇದಗಳ ಕಾಲದಿಂದಲೂ ಮಹಿಳೆಯನ್ನು ನಾನಾ ರೀತಿಯಲ್ಲಿ ಸಮಾಜವು ಶೋಷಿಸುತ್ತಲೇ ಬಂದಿದೆ. ಇಂದು ನಾವು ೨೧ನೇ ಶತಮಾನದಲ್ಲಿ ಇದ್ದರೂ, ಆಧುನಿಕತೆಗೆ ನಮ್ಮನ್ನು ನಾವು ಒಡ್ಡಿಕೊಂಡರೂ ಮಹಿಳೆಯರ ಶೋಷಣೆಯ ಬಗೆಗೆ ನಮ್ಮ ಸಾಂಪ್ರದಾಯಿಕ ಮನಸ್ಥಿತಿ ಬದಲಾಗಿಲ್ಲ. ಸಂಪ್ರದಾಯ, ಕಂದಾಚಾರಗಳ ಹೆಸರಿನಲ್ಲಿ ಮಹಿಳೆಯನ್ನು ೨೧ನೇ ಶತಮಾನದ ಆಧುನಿಕ ಸಮಾಜವು ಬಂಧಿಸಿಡುವ ಕೆಲಸವನ್ನು ಮಾಡುತ್ತಲೇ ಬಂದಿದೆ. ಸಮಾಜದ ಜನರು ಇಂದು ಹೆಚ್ಚು ಶಿಕ್ಷಿತರಾಗುತ್ತಿದ್ದರೂ ಮಹಿಳೆಯನ್ನು ಪುರುಷ ನಡೆಸಿಕೊಳ್ಳುವ ರೀತಿ ಮಾತ್ರ ಬದಲಾಗಿಲ್ಲ. ಆಧುನಿಕ ಸಮಾಜದಲ್ಲಿ ಪ್ರತಿನಿತ್ಯ ಹೊಸ ಹೊಸ ಸಮಸ್ಯೆಗಳ ಸುಳಿಗೆ ಮಹಿಳೆ ಒಳಗಾಗುತ್ತಲೇ ಇದ್ದಾಳೆ. ಅಂದು ಅವಿದ್ಯಾವಂತ ಮಹಿಳೆಯರನ್ನು ಶೋಷಣೆ ಮಾಡುತ್ತಿದ್ದ ಪುರುಷ ಕೇಂದ್ರ ಸಮಾಜವು ಇಂದು ಅವರ ಜೊತೆಯಲ್ಲಿ ವಿದ್ಯಾವಂತ ಮಹಿಳೆಯರನ್ನು ಸಹ ಶೋಷಣೆಗೆ ಒಳಪಡಿಸುತ್ತಿದೆ.

ಸಮಾಜದ ಪ್ರತಿಬಿಂಬವಾದ ಸಾಹಿತ್ಯದಲ್ಲೂ ಇವಳ ಸ್ಥಿತಿ ಬೇರೆಯಾಗಿಲ್ಲ. ಹಳೆಗನ್ನಡ ಸಾಹಿತ್ಯದ ಮಹಾಕಾವ್ಯಗಳಲ್ಲಿ ಸೌಂದರ್ಯದ ಖನಿಯಾಗಿ ಮಹಿಳೆ ಕಾಣಿಸಿಕೊಂಡಳು. ಮಹಿಳೆಯರ ಸೌಂದರ್ಯದ ವರ್ಣನೆಯಲ್ಲಿ ಮೈಮರೆತಿದ್ದವರಿಗೆ ನವೋದಯ ಕಾಲಘಟ್ಟದ ಕವಿಗಳು ಆಕೆಗೊಂದು ಮನಸ್ಸಿದೆ ಎಂದು ಗುರುತಿಸಿದರು. ಈ ಕಾಲಘಟ್ಟದ ಸಾಹಿತ್ಯದಲ್ಲಿ ಮಹಿಳೆಯ ಪ್ರೇಮ ತುಂಬಿದ ಮುಗ್ಧ ಕಣ್ಣುಗಳಿಗೆ ಸ್ಥಾನ ದೊರಕಿತೇ ಹೊರತು ಆಕೆಯ ಬದುಕಿನ ನೋವುಗಳಲ್ಲ. ಮಹಿಳೆಯನ್ನು ಕುರಿತಂತೆ ಹೊಸ ಚಿಂತನೆ ಹಳೆಗನ್ನಡ ಸಾಹಿತ್ಯದಲ್ಲಿ ಸಾಧ್ಯವಾಗದಿದ್ದ ಸಂದರ್ಭದಲ್ಲಿ ನವೋದಯ ಕವಿಗಳು ಮಹಿಳೆಯ ಮನಸ್ಸನ್ನು ಓದಲು ಪ್ರಯತ್ನಿಸದಿದ್ದರೂ ಆಕೆಗೊಂದು ಮನಸ್ಸಿದೆ ಎಂಬುದನ್ನು ಗುರುತಿಸಿದರು. ಮುಂದೆ ಪ್ರಗತಿಶೀಲ ಕಾಲಘಟ್ಟದಲ್ಲಿ ಅ.ನ.ಕೃ. ಬಸವರಾಜ ಕಟ್ಟೀಮನಿ, ಅನುಪಮ ನಿರಂಜನ, ತ್ರಿವೇಣಿ,

ತ.ರಾ.ಸು. ಮೊದಲಾದ ಸಾಹಿತಿಗಳು ಮಹಿಳೆಯನ್ನೇ ಕೇಂದ್ರವಾಗಿಟ್ಟುಕೊಂಡು ಮಹಿಳೆಗೆ ಸಂಬಂಧಿಸಿದ ಸಮಸ್ಯೆಗಳನ್ನು ಅನಾವರಣಗೊಳಿಸಿದರು. ಆದರೆ ಇಲ್ಲಿ ಮಹಿಳೆಯ ಸಮಸ್ಯೆಯ ದಾಖಲಾತಿಯಷ್ಟೆ ಆಯಿತೆ ಹೊರತು ಮಹಿಳೆಗೆ ತನ್ನ ಸಮಸ್ಯೆ ವಿರುದ್ಧ ಪ್ರತಿಭಟಿಸುವ ಧ್ವನಿಯನ್ನು ಈ ಸಾಹಿತಿಗಳು ನೀಡಲಿಲ್ಲ.

**೧.೧ ಅಧ್ಯಯನದ ಉದ್ದೇಶ :**

ಪ್ರಗತಿಶೀಲ ಕಾಲಘಟ್ಟದ ನಂತರ ಇಂಗ್ಲೆಂಡಿನ 'Modern Poetry' ನೇತಾರದ ಟಿ.ಎಸ್.ಎಲಿಯೆಟ್ ನಿಂದ ಪ್ರೇರಣೆಗೊಂಡು ನವ್ಯ ಸಾಹಿತ್ಯವು ಆಧುನಿಕ ಕನ್ನಡ ಸಾಹಿತ್ಯಕ್ಕೆ ಅಡಿ ಇಟ್ಟಿತು. "ಹತ್ತೊಂಬತ್ತನೆಯ ಶತಮಾನದ ಆಂಗ್ಲ ಕವಿಗಳಾದ ವರ್ಡ್ಸ್‌ವರ್ತ್, ಷೆಲ್ಲಿ, ಕೀಟ್ಸ್ ಮುಂತಾದ ರೋಮ್ಯಾಂಟಿಕ್ ಕವಿಗಳಿಂದ ಪ್ರೇರಿತವಾದ ನಮ್ಮ ಆಧುನಿಕ ಕನ್ನಡ ಕಾವ್ಯ ಆ ಸಂಪ್ರದಾಯದಲ್ಲಿ ತಾನು ಮಾಡಬಹುದಾದಷ್ಟು ಕೆಲಸವನ್ನು ಮಾಡಿ ಮುಗಿಸಿದೆ. ಆ ಸಂಪ್ರದಾಯದ ಸತ್ವ ಈಗ ತೀರಿದೆ. ಅದಕ್ಕೆ ಅವನತಿ ಬಂದಿದೆ. ಅದರ ದೋಷಗಳೆಲ್ಲ ಈಗ ಎದ್ದು ಕಾಣಿಸುತ್ತಿದೆ. ನೆಲದ ಮೇಲೆ ಕಾಲೂರಿ ನಿಂತು ನಕ್ಷತ್ರವನ್ನು ತುಡುಕುತ್ತಿದ್ದುದು, ಈಗ ನೆಲಬಿಟ್ಟು ಮೇಲೇರಿ ವೇದಾಂತದ ಮಂಜಿನಲ್ಲಿ ಮರೆಯಾಗಿ ಹೋಗುತ್ತಿದೆ. ಶಬ್ಧಗಳು ಅರ್ಥದ ಸ್ಥಾನವನ್ನು ಆಕ್ರಮಿಸುತ್ತಿವೆ. ಪ್ರತಿಯೊಂದು ಅನುಭವವೂ ವಾಸ್ತವದಿಂದ ಬಹು ದೂರ ಹೋಗುತ್ತಿವೆ. ಇಂಥ ಕಾಲದಲ್ಲಿ ಕಾವ್ಯಕ್ಕೆ ವಾಸ್ತವದ ರಕ್ತದಾನ ನಡೆಯಬೇಕು. ಕಾವ್ಯದಲ್ಲಿ ಮತ್ತೆ ಮಣ್ಣಿನ ವಾಸನೆ ಹೊಡೆಯಬೇಕು" ಎಂದು ಗೋಪಾಲಕೃಷ್ಣ ಅಡಿಗರು ತಮ್ಮ 'ನಡೆದು ಬಂದ ದಾರಿ' ಕೃತಿಯಲ್ಲಿ ದಾಖಲಿಸಿದರು. ಆ ಮೂಲಕ ಹೊಸ ರೀತಿಯ ಸಾಹಿತ್ಯ ಸೃಷ್ಟಿಗೆ ಸಾಹಿತಿಗಳು ಮುಂದಾಗಬೇಕೆಂಬ ಸಂದೇಶವನ್ನು ನೀಡಿದರು. ಇವರ ಮಾತಿನ ಪ್ರಭಾದಿಂದ ಅಂದಿನ ಸಾಹಿತಿಗಳು ತಮ್ಮ ಹಿಂದಿನ ಸಾಹಿತ್ಯವನ್ನು ಧಿಕ್ಕರಿಸಿ ಹೊಸ ರೀತಿಯ ಸಾಹಿತ್ಯ ಸೃಷ್ಟಿಗೆ ಮುಂದಾದರು. ಭಿನ್ನ, ವಸ್ತು, ತಂತ್ರ, ಆಶಯ, ಭಾಷೆ, ಶೈಲಿ, ಮೊದಲಾದ ಅಂಶಗಳ ಮೂಲಕ ವಿಭಿನ್ನತೆಗಳನ್ನು ಮೈಗೂಡಿಸಿಕೊಂಡ ನವ್ಯ ಸಾಹಿತ್ಯವು ಸುಮಾರು ೧೯೫೦ರ ಹೊತ್ತಿಗೆ ಕನ್ನಡ ಸಾಹಿತ್ಯವನ್ನು ಪ್ರವೇಶಿಸಿತು.

ಸಂಪ್ರದಾಯ, ಕಂದಾಚಾರ ಕಟ್ಟಳೆಗಳಲ್ಲಿ ಮಹಿಳೆಯನ್ನು ಬಂಧಿಸಿಡುವ ಪ್ರಯತ್ನವನ್ನು ಸಮಾಜವು ಬಹು ಹಿಂದಿನಿಂದಲೂ ಸದ್ದಿಲ್ಲದೆ ಮಾಡಿಕೊಂಡು ಬರುತ್ತಲೇ ಇದೆ. ಸಾಹಿತ್ಯದಲ್ಲೂ ಮಹಿಳೆಯ ಸ್ಥಿತಿ ಸಮಾಜದ ವ್ಯವಸ್ಥೆಯಲ್ಲಿರುವಂತೆಯೇ ಇದೆ. ನವ್ಯ ಸಾಹಿತ್ಯದ ಹಿಂದಿನ ಸಾಹಿತ್ಯಗಳಲ್ಲಿ ಬರುವ

ಮಹಿಳೆ ತನ್ನನ್ನು ಬಂಧಿಸಿಟ್ಟ ಸಮಾಜದ ವಿರುದ್ಧ ತನ್ನ ಪ್ರತಿಭಟನೆಯನ್ನು ವ್ಯಕ್ತಪಡಿಸುವುದಿಲ್ಲ. ಆದರೆ ಭಾಷೆ, ವಸ್ತು, ತಂತ್ರ, ಎಲ್ಲದರಲ್ಲೂ ಹೊಸತನವನ್ನು ಮೈಗೂಡಿಸಿಕೊಂಡ ನವ್ಯ ಸಾಹಿತ್ಯದಲ್ಲಿ ಮಹಿಳೆ ಸಮಾಜ ತನ್ನ ಸುತ್ತ ಹಾಕಿರುವ ಮೂಢ ಸಂಪ್ರದಾಯದ ಬೇಲಿಯನ್ನು ದಾಟುವಷ್ಟು ದಿಟ್ಟತನವನ್ನು ಮೈಗೂಡಿಸಿಕೊಂಡಿದ್ದಾಳೆ. ಗಂಡ, ಮನೆ, ಮಕ್ಕಳು, ಎಂದು ತನ್ನ ಅಸ್ತಿತ್ವವನ್ನೇ ಮರೆತಿದ್ದ ಮಹಿಳೆ ನವ್ಯ ಸಾಹಿತ್ಯದಲ್ಲಿ ಸ್ವತಂತ್ರ ವ್ಯಕ್ತಿತ್ವದ ಮೂಲಕ ತನ್ನನ್ನು ತಾನು ಗುರುತಿಸಿಕೊಳ್ಳುವ ಪ್ರಯತ್ನ ಮಾಡುತ್ತಾಳೆ. ನವ್ಯ ಕಥನ ಸಾಹಿತ್ಯದಲ್ಲಿನ ಮಹಿಳೆ ವಿದ್ಯಾವಂತಳಾಗಿದ್ದು, ಸ್ವತಂತ್ರವಾಗಿ ಯೋಚನೆ ಮಾಡುವ ಪ್ರವೃತ್ತಿಯವಳಾಗಿದ್ದಾಳೆ. ಜೊತೆಗೆ ಆಕೆ ಆರ್ಥಿಕವಾಗಿಯೂ ಸಬಲಳಾಗಿದ್ದಾಳೆ. 'ಸೆಕೆಂಡ್ ಸೆಕ್ಸ್' (ದ್ವಿತೀಯ ಲಿಂಗಿ) ಎಂದು ಕರೆಸಿಕೊಳ್ಳುವ ಮಹಿಳೆ ನವ್ಯ ಕಥನ ಸಾಹಿತ್ಯದಲ್ಲಿ ಆಧುನಿಕತೆ ಮತ್ತು ಸ್ವತಂತ್ರದ ಸ್ವರೂಪವಾಗಿದ್ದಾಳೆ. ಪುರುಷನಿಗಿಂತ ಭಿನ್ನವಾದ ಸಂದರ್ಭಗಳಲ್ಲಿ, ಭಿನ್ನವಾದ ಸವಾಲುಗಳನ್ನು ಎದುರಿಸಿ ನಿಲ್ಲುವ ನವ್ಯ ಕಥನ ಸಾಹಿತ್ಯದ ಮಹಿಳೆ ಅಧ್ಯಯನ ನಿರತರಿಗೆ ಅಧ್ಯಯನ ಯೋಗ್ಯಳಾಗಿದ್ದಾಳೆ. ಆಧುನಿಕತೆ, ಸ್ವತಂತ್ರತೆ, ಅಸ್ತಿತ್ವದ ತಹತಹಿಕೆ, ತನ್ನ ಮೇಲಿನ ಶೋಷಣೆ ವಿರುದ್ಧ ಪ್ರತಿಭಟನೆಯ ಧ್ವನಿ ಈ ಮೊದಲಾದ ಅಂಶಗಳನ್ನು ಮೈಗೂಡಿಸಿಕೊಂಡಿರುವ ಮಹಿಳೆಯನ್ನು ನವ್ಯ ಕಥನ ಸಾಹಿತ್ಯ ಸಂದರ್ಭದಲ್ಲಿ ಅಧ್ಯಯನ ಮಾಡುವುದೇ ಈ ಸಂಶೋಧನ ಮಹಾಪ್ರಬಂಧದ ಪ್ರಮುಖ ಉದ್ದೇಶವಾಗಿದೆ.

### ೧.೨ ಅಧ್ಯಯನದ ವ್ಯಾಪ್ತಿ :

ಪಾಶ್ಚಾತ್ಯ ವಿದ್ವಾಂಸರಾದ ಟಿ.ಎಸ್.ಎಲಿಯೆಟ್, ಎಜ್ರಾಪೌಂಡ್, ಕಾಫ್ಕಾ, ಮೊದಲಾದವರ ವಿಚಾರಧಾರೆಗಳಿಗೆ ನಮ್ಮ ವಿದ್ಯಾವಂತ, ವಿಚಾರವಂತ, ಮನಸ್ಸುಗಳು ಪ್ರಭಾವಿತಗೊಂಡು ಅವುಗಳನ್ನು ಕನ್ನಡದ ಪರಿಸರಕ್ಕೆ ತರುವ ಕೆಲಸಕ್ಕೆ ಕೈ ಹಾಕಿದರು. ಹೀಗೆ ರೂಪುಗೊಂಡ ಸಾಹಿತ್ಯವೇ ನವ್ಯ ಸಾಹಿತ್ಯವಾಗಿದೆ. ೧೯೫೦ ರಿಂದ ೧೯೭೦ ರವರೆಗೆ ನವ್ಯ ಸಾಹಿತ್ಯವು ಕಥೆ, ಕಾದಂಬರಿ,ನಾಟಕ, ಕಾವ್ಯ, ವಿಮರ್ಶೆ ಹೀಗೆ ಹಲವು ಪ್ರಕಾರಗಳಲ್ಲಿ ಬೆಳೆದು ಬಂದಿದೆ. ಈ ಕಾಲಾವಧಿಯಲ್ಲಿ ರಚನೆಯಾಗಿರುವ ನವ್ಯ ಸಾಹಿತ್ಯದ ಎಲ್ಲಾ ಪ್ರಕಾರಗಳನ್ನು ಒಟ್ಟಿಗೆ ಏಕಕಾಲಕ್ಕೆ ನನ್ನ ಸಂಶೋಧನೆಯ ಕಾಲ ಮಿತಿಯೊಳಗೆ ಅಧ್ಯಯನ ಮಾಡುವುದು ಅಸಾಧ್ಯ. ಆದ್ದರಿಂದ ನನ್ನ ಅಧ್ಯಯನವನ್ನು ನವ್ಯ ಕಥೆ ಮತ್ತು ಕಾದಂಬರಿಗಳಿಗೆ ಸೀಮಿತಗೊಳಿಸಿ ಕೊಂಡಿದ್ದೇನೆ. ಹಲವಾರು ಲೇಖಕರು ತಮ್ಮ ಕೃತಿಗಳಿಂದ ನವ್ಯ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಇಂತಹ

ಲೇಖಕರ ಕಥೆ, ಕಾದಂಬರಿಗಳು ಅಸಂಖ್ಯಾತವಾಗಿವೆ. ಸಂಶೋಧನೆಯಲ್ಲಿ ನಿರ್ದಿಷ್ಟತೆ ಮತ್ತು ಸ್ಪಷ್ಟತೆಯನ್ನು ಕಾಯ್ದುಕೊಳ್ಳುವ ಉದ್ದೇಶದಿಂದಾಗಿ ನವ್ಯ ಕಾಲಘಟ್ಟದ ಎಲ್ಲಾ ಲೇಖಕರನ್ನು ನನ್ನ ಸಂಶೋಧನ ಅಧ್ಯಯನಕ್ಕೆ ತೆಗೆದುಕೊಳ್ಳುತ್ತಿಲ್ಲ. ಬದಲಿಗೆ ಪ್ರಾತಿನಿಧಿಕವಾಗಿ ಶಾಂತಿನಾಥ ದೇಸಾಯಿ, ಯಶವಂತ ಚಿತ್ತಾಲ, ಯು.ಆರ್.ಅನಂತಮೂರ್ತಿ, ಪಿ.ಲಂಕೇಶ್, ಟಿ.ಜಿ.ರಾಘವ, ಪೂರ್ಣಚಂದ್ರ ತೇಜಸ್ವಿ ಗಿರಿ, ಕುಸುಮಾಕರ ದೇವರಗೆಣ್ಣೂರು ರಾಜಲಕ್ಷ್ಮಿ ಎನ್.ರಾವ್, ವೀಣಾ ಶಾಂತೇಶ್ವರ ಅವರ ಕಥನ ಸಾಹಿತ್ಯವನ್ನು ಅಧ್ಯಯನ ಮಾಡಲಾಗಿದೆ. ನನ್ನ ಸಂಶೋಧನ ಅಧ್ಯಯನ ವರ್ಷಗಳಲ್ಲಿ ಎಲ್ಲಾ ನವ್ಯಲೇಖಕರ, ಎಲ್ಲಾ ಕೃತಿಗಳನ್ನು ಅನುಪಲಬ್ಧತೆಯ ಕಾರಣದಿಂದ ಅಧ್ಯಯನ ಮಾಡುವುದು ಸಾಧ್ಯವಾಗಿಲ್ಲ. ಜೊತೆಗೆ ಅಧ್ಯಯನದಲ್ಲಿ ಗಮನವನ್ನು ಕೇಂದ್ರಿಕರಿಸುವುದು ಕಷ್ಟವಾಗಿ ಅಧ್ಯಯನ ಉದ್ದೇಶ ಮರೆಯಾಗಿ ಬಿಡಬಹುದೆಂಬ ಅಪಾಯವಿರುವುದರಿಂದ ನವ್ಯ ಕಾಲಘಟ್ಟದ ಪ್ರಾತಿನಿಧಿಕ ಲೇಖಕರನ್ನು ಆರಿಸಿಕೊಂಡಂತೆ, ಆ ಲೇಖಕರ ಕೆಲವಷ್ಟೇ ಕೃತಿಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಈ ಹಿಂದೆ ಸ್ಪಷ್ಟಪಡಿಸಿದಂತೆ ಆಧುನಿಕತೆಯ, ಸ್ವತಂತ್ರ ಮನೋಭಾವದ, ಅಸ್ತಿತ್ವದ ತಹತಹಿಕೆ ಇರುವ, ತನ್ನ ಮೇಲಿನ ಶೋಷಣೆ ವಿರುದ್ಧ ಪ್ರತಿಭಟನೆಯ ಧ್ವನಿಯನ್ನು ಹೊರಹಾಕುವ ಮಹಿಳೆ ನವ್ಯ ಕಥನ ಸಾಹಿತ್ಯದಲ್ಲಿ ಕಾಣಸಿಗುತ್ತಾಳೆ. ನವ್ಯ ಕಥನ ಸಾಹಿತ್ಯವು ಮಹಿಳೆಯ ಪರಿಕಲ್ಪನೆಯನ್ನು ಅಭಿವ್ಯಕ್ತಪಡಿಸಿರುವ ರೀತಿಯನ್ನು ಅಧ್ಯಯನ ಮಾಡುವುದೇ ಈ ಸಂಶೋಧನ ಮಹಾಪ್ರಬಂಧದ ಉದ್ದೇಶವಾಗಿರುವುದರಿಂದ ಆ ಉದ್ದೇಶಕ್ಕೆ ಪೂರಕವಾದ ನವ್ಯ ಲೇಖಕರ ಪ್ರಾತಿನಿಧಿಕ ಕಥನ ಸಾಹಿತ್ಯವನ್ನು ಮಾತ್ರ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಸಂಶೋಧನ ಅಧ್ಯಯನದ ಉದ್ದೇಶವು ಸಾಕಾರಗೊಳ್ಳುವಂತೆ ಮಾಡಲು ನವ್ಯ ಕಾಲಘಟ್ಟದ ಲೇಖಕರು, ಸಾಹಿತ್ಯ ಪ್ರಕಾರ, ಕೃತಿಗಳ ವಿಷಯದಲ್ಲಿ ಈ ಮಿತಿಯನ್ನು ಹಾಕಿಕೊಳ್ಳಲಾಗಿದೆ.

**೧.೩ ಅಧ್ಯಯನದ ವೈಧಾನಿಕತೆ :**

ಒಂದು ಸಂಶೋಧನೆಯಂತಹ ಮಹತ್ವದ ಕೆಲಸವನ್ನು ಯಶಸ್ವಿಯಾಗಿ ಮಾಡಿ ಮುಗಿಸಲು ಸಂಶೋಧನೆಯ ಅಧ್ಯಯನದಲ್ಲಿ ಅನುಸರಿಸುವ ವಿಧಾನವನ್ನು ಮೊದಲೇ ನಿಗದಿ ಮಾಡಿಕೊಂಡಿರಬೇಕಾಗುತ್ತದೆ. ಇಲ್ಲವಾದರೆ ಅಧ್ಯಯನದಲ್ಲಿ ಕ್ರಮಬದ್ಧತೆ, ಶಿಸ್ತು ಇಲ್ಲದೆ ಸಂಶೋಧನೆಯ ಉದ್ದೇಶ ಮತ್ತು ಮಹತ್ವವು ನಾಶವಾಗಿ ಬಿಡುವ ಸಂಭವವಿರುತ್ತದೆ. ಇಲ್ಲವೇ ಗೊಂದಲಗಳು ಉಂಟಾಗಿ ಸಂಶೋಧನ ಅಧ್ಯಯನದ

ದಾರಿ ಕಷ್ಟವಾಗಬಹುದು. ಆದ್ದರಿಂದಲೇ ಸಂಶೋಧನೆಯಂತಹ ಮಹತ್ಕಾರ್ಯವು ಕೈಗೂಡಬೇಕಾದರೆ ಅಧ್ಯಯನದ ವೈಧಾನಿಕತೆಯ ಸ್ವರೂಪವು ಸ್ಪಷ್ಟವಾಗಿರಬೇಕು. ಪ್ರಸ್ತುತ ಸಂಶೋಧನ ಮಹಾಪ್ರಬಂಧದ ವೈಧಾನಿಕತೆಯನ್ನು ಕುರಿತಂತೆ ವಿವರಣೆಯನ್ನು ನೀಡುವುದು ಮುಖ್ಯವಾದ್ದರಿಂದ ಈ ಭಾಗದಲ್ಲಿ ಅಧ್ಯಯನದ ವೈಧಾನಿಕತೆಯ ಸಂಕ್ಷಿಪ್ತ ವಿವರಣೆಯನ್ನು ನೀಡಲಾಗಿದೆ.

ಪ್ರಸ್ತುತ ಸಂಶೋಧನ ಮಹಾಪ್ರಬಂಧವು ಮೂಲತಃ ಸಾಹಿತ್ಯ ಅಧ್ಯಯನವಾಗಿದೆ. ಈ ಮೊದಲೇ ಸ್ಪಷ್ಟಪಡಿಸಿದಂತೆ ನವ್ಯ ಕಾಲಘಟ್ಟದ ಪ್ರಾತಿನಿಧಿಕ ಲೇಖಕರನ್ನು ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಅದರ ಜೊತೆಗೆ ಸಂಶೋಧನ ಉದ್ದೇಶಕ್ಕೆ ಪೂರಕವಾದ ಕೃತಿಗಳನ್ನು ಬಳಸಿಕೊಳ್ಳಲಾಗಿದೆ. ಪ್ರಾತಿನಿಧಿಕ ಲೇಖಕರ ಎಲ್ಲಾ ಕೃತಿಗಳನ್ನು ಬಳಸಿಕೊಳ್ಳದೆ ಸಂಶೋಧನೆಯ ಉದ್ದೇಶಕ್ಕೆ ಪೂರಕವಾದ ಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸುವುದರಿಂದ ಇದೊಂದು ಕೃತಿ ಕೇಂದ್ರಿತ ಅಧ್ಯಯನ ವಿಧಾನವಾಗಿದೆ. ಇದರ ಜೊತೆಗೆ ಈ ಸಂಶೋಧನ ಅಧ್ಯಯನವು ವಸ್ತು ವಿಷಯ ಅಥವಾ ಪರಿವಿಡಿ ವಿಶ್ಲೇಷಣೆ (ಕಟೆಂಟ್ ಅನಾಲಿಸಿಸ್) ವಿಧಾನವನ್ನು ಒಳಗೊಂಡಿದೆ. ಕೃತಿಯ ವಸ್ತುವನ್ನೊ, ವಿಷಯವನ್ನೊ, ವಿಶ್ಲೇಷಣೆ ಮಾಡುತ್ತಾ ಈ ಸಂಶೋಧನ ಅಧ್ಯಯನ ಪರಿಕಲ್ಪನೆಯನ್ನು ಗುರುತಿಸುವುದು ಈ ವಿಧಾನದ ಮೂಲ ಆಶಯವಾಗಿದೆ. ವಿಶ್ಲೇಷಣಾತ್ಮಕ ಅಧ್ಯಯನದ ವಿಧಾನದ ಜೊತೆಗೆ ತೌಲನಿಕ ಅಧ್ಯಯನ ವಿಧಾನವನ್ನು ಈ ಸಂಶೋಧನ ಅಧ್ಯಯನದಲ್ಲಿ ಅನುಸರಿಸಲಾಗಿದೆ. ಒಂದನ್ನು ಇನ್ನೊಂದರ ಜೊತೆ ಹೋಲಿಸಿದಾಗ ಮಾತ್ರ ಅವುಗಳ ಹಿರಿಮೆಯನ್ನು ಅರಿಯಲು ಸಾಧ್ಯವಾಗುತ್ತದೆ. ಸಮಾನವಾದ ವಸ್ತು ಶೈಲಿ, ತಂತ್ರ, ವಿಷಯ ಮೊದಲಾದವುಗಳು ಹೇಗೆ ಒಂದಕ್ಕಿಂತ ಒಂದು ಭಿನ್ನವಾಗಿವಾಗಿದೆ ಎಂಬುದನ್ನು ತಿಳಿಯಲು ಈ ವಿಧಾನವು ಸಹಾಯಮಾಡುತ್ತದೆ. ಆದ್ದರಿಂದ ಪ್ರಾತಿನಿಧಿಕ ಲೇಖಕರನ್ನು ಕೇಂದ್ರವಾಗಿಟ್ಟುಕೊಂಡು ಅವರ ಆಯ್ದ ಕಥನ ಸಾಹಿತ್ಯದಲ್ಲಿ ಪ್ರಸ್ತುತ ಸಂಶೋಧನ ಅಧ್ಯಯನದ ಪರಿಕಲ್ಪನೆಯು ಮೂಡಿಬಂದ ಬಗೆಯನ್ನು ತೌಲನಿಕ ಅಧ್ಯಯನ ಮಾಡಲಾಗಿದೆ. ನಂತರ ವಿವಿಧ ನವ್ಯ ಲೇಖಕರು ಸಂಶೋಧನ ಅಧ್ಯಯನದ ಪರಿಕಲ್ಪನೆಯನ್ನು ವಿವಿಧ ಸಂದರ್ಭಗಳಲ್ಲಿ ಬಳಸಿಕೊಂಡ ರೀತಿಯನ್ನು ತಿಳಿಯಲಾಗಿದೆ. ಸಾಹಿತ್ಯ ಅಧ್ಯಯನ ವಿಧಾನ, ಕೃತಿ ಕೇಂದ್ರಿತ ಅಧ್ಯಯನ ವಿಧಾನ, ಪರಿವಿಡಿ ವಿಶ್ಲೇಷಣೆಯ ವಿಧಾನ, ತೌಲನಿಕ ಅಧ್ಯಯನ ವಿಧಾನಗಳ ಮೂಲಕ ಹಿಡಿದುಕೊಂಡು ನವ್ಯ ಕಥನ ಸಾಹಿತ್ಯದಲ್ಲಿ ಮಹಿಳೆ ಪರಿಕಲ್ಪನೆಯನ್ನು ಅನಾವರಣ ಮಾಡಲಾಗಿದೆ.

## ೧.೪ ಅಧ್ಯಯನದ ಮಹತ್ವ :

ವೇದಗಳ ಕಾಲದಿಂದ ಇಂದಿನ ೨೧ನೇ ಶತಮಾನದವರೆಗೂ ಮಹಿಳೆಯ ಬಗೆಗಿನ ದೃಷ್ಟಿಕೋನವು ಬದಲಾಗದೆ ಉಳಿದುಕೊಂಡು ಬಂದಿದೆ. ಅಂದಿನಿಂದ ಇಂದಿನವರೆಗೂ ನಾನಾ ರೀತಿಯ ಸಂಕೋಲೆಗಳು ಆಕೆಯನ್ನು ಬಂಧಿಸಿಡುವ ಪ್ರಯತ್ನವನ್ನು ಮಾಡುತ್ತಲೇ ಬಂದಿದೆ. ಪುರುಷನೇ ಕಟ್ಟಿದ ಪುರಾಣ, ಮಹಾಕಾವ್ಯ, ದಂತಕಥೆ, ಪುಣ್ಯಕಥೆ, ಶಾಸ್ತ್ರಗ್ರಂಥ ಈ ಮೊದಲಾದವುಗಳಲ್ಲಿ ಪುರುಷ ತನಗೆ ಅನುಕೂಲವಾಗುವ ಹಾಗೆ ವಿಷಯಗಳನ್ನು ಜೋಡಿಸಿಕೊಂಡಿದ್ದಾನೆ. ಮಹಿಳೆಯರಿಗಾಗಿ ಕೆಲವೊಂದು ಆದರ್ಶಗಳನ್ನು ಪುರುಷ ಹಾಕಿಕೊಟ್ಟಿದ್ದಾನೆ. ಶೀಲ, ಪಾವಿತ್ರ್ಯ, ಪಾತಿವ್ರತ್ಯ, ತಾಯ್ತನ, ವೈಧವ್ಯ ಈ ಮೊದಲಾದವುಗಳನ್ನು ಮಹಿಳೆಯ ಮೇಲೆ ಹೇರಿ ಆಕೆಯನ್ನು ಆದರ್ಶದ ಸಂಕೋಲೆಯಲ್ಲಿ ಬಂಧಿಸಿಡುವ ಕೆಲಸ ಮಾಡಿದ್ದಾನೆ. ಹೀಗೆ ತುಂಬಾ ಬುದ್ಧಿವಂತಿಕೆಯಿಂದ ಪುರುಷನು ಕಾಲ ಕಾಲದಿಂದಲೂ ಮಹಿಳೆಯನ್ನು ಧರ್ಮಶಾಸ್ತ್ರ, ಸಂಪ್ರದಾಯ, ಆದರ್ಶ ಈ ಮೊದಲಾದವುಗಳ ಹೆಸರಿನಲ್ಲಿ ಪೋಷಿಸುತ್ತಾ ಬಂದಿದ್ದಾನೆ. ೨೧ನೇ ಶತಮಾನದ ಈ ಸಂದರ್ಭದಲ್ಲೂ ನಾವು ಮಹಿಳೆಯ ಕಡೆಗೆ ಗಮನ ಹರಿಸಿದರೆ ಇಂದಿಗೂ ಆಕೆ ಒಂದಲ್ಲಾ ಒಂದು ರೀತಿಯಲ್ಲಿ ಶೋಷಣೆಗೆ ಒಳಗಾಗುತ್ತಿರುವುದು ಕಂಡು ಬರುತ್ತದೆ. ೨೧ನೇ ಶತಮಾನದ ಮಹಿಳೆ ಪುರುಷನಷ್ಟೇ ಸಮಾನವಾದ ವಿದ್ಯೆಯನ್ನು ಪಡೆಯುತ್ತಿದ್ದಾಳೆ. ಅಲ್ಲದೆ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ರಾಜಕೀಯ, ತಂತ್ರಜ್ಞಾನ, ವಿಜ್ಞಾನ, ಲಲಿತಕಲೆ ಈ ಮೊದಲಾದ ಎಲ್ಲಾ ಕ್ಷೇತ್ರಗಳಲ್ಲೂ ತನ್ನದೇ ಆದ ಸಾಧನೆಯನ್ನು ಮಹಿಳೆ ಮಾಡುತ್ತಿದ್ದಾಳೆ. ಆದರೂ ಶೋಷಣೆಯ ವಿಷಯಕ್ಕೆ ಬಂದರೆ ಮಹಿಳೆ ಈ ಹಿಂದೆ ದೌರ್ಜನ್ಯಕ್ಕೆ ಒಳಗಾದಂತೆ ಇಂದು ಒಳಗಾಗುತ್ತಿದ್ದಾಳೆ. ೨೧ನೇ ಶತಮಾನವು ಆಧುನಿಕವಾದಂತೆ ಮಹಿಳೆಯ ಪಾಲಿಗೆ ಹೊಸ ಹೊಸ ಶೋಷಣೆಗಳು ದಿನೇ ದಿನೇ ಮುಖ ಮಾಡಿ ನಿಲ್ಲುತ್ತಿವೆ. ಅವನ್ನು ಎದುರಿಸಲು ಇಂದಿನ ಮಹಿಳೆ ಶಕ್ತಳಾಗುತ್ತಿದ್ದಾಳೆ. ಹೆಣ್ಣನ್ನು ಶಕ್ತಿ ದೇವತೆಯಾಗಿ ಪೂಜಿಸಲ್ಪಡುವ ಈ ಸಮಾಜದಲ್ಲಿ ಅದೇ ಹೆಣ್ಣನ್ನು ಶೋಷಣೆಗೆ ಒಳಪಡಿಸುವುದು ವಿಪರ್ಯಾಸದ ಸಂಗತಿಯಾಗಿದೆ. ಅನಾದಿ ಕಾಲದಿಂದಲೂ ಶೋಷಣೆಗೆ ಒಳಗಾಗುತ್ತಿದ್ದ ಮಹಿಳೆ ಇಂದು ಪ್ರತಿಭಟಿಸುವ ಶಕ್ತಿಯನ್ನು ಪಡೆದುಕೊಳ್ಳುತ್ತಿದ್ದಾಳೆ. ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರತಿಭಟನೆಯ ಧ್ವನಿಯನ್ನು ಮಹಿಳೆ ಪಡೆದಂತೆ, ನವ್ಯ ಸಾಹಿತ್ಯದಲ್ಲೂ ಹಿಂದಿನ ಸಾಹಿತ್ಯದ ಕಾಲಘಟ್ಟಗಳಲ್ಲಿ ಕಾಣಸಿಗದ ಮಹಿಳೆ ಕಾಣ ಸಿಗುತ್ತಾಳೆ. "ಸಾವಕೆಡುವ ಗಂಡಂದಿರನೊಯ್ದು ಒಲೆಯೊಳಗಿಕ್ಕು" ಎಂದು ನುಡಿದ ೧೨ನೇ ಶತಮಾನದ ಅಕ್ಕಮಹಾದೇವಿಯನ್ನು ಹೊರತು ಪಡಿಸಿದರೆ ನವ್ಯ ಕಾಲಘಟ್ಟದವರೆಗೂ

ಇಂತಹ ಧೀರ ವ್ಯಕ್ತಿತ್ವ ಪ್ರಕಟಿಸುವ ಮಹಿಳೆಯರನ್ನು ನಾವು ಕಾಣುವುದಿಲ್ಲ. ಆದರೆ ನವ್ಯ ಕಥನ ಸಾಹಿತ್ಯದಲ್ಲಿ ಅಕ್ಕಮಹಾದೇವಿಯಂತಹ ಕೆಚ್ಚಿನ ವ್ಯಕ್ತಿತ್ವವಿರುವ, ಸ್ವತಂತ್ರ ಧೈರ್ಯಶಾಲಿ ಮಹಿಳೆಯರನ್ನು ಯಥೇಚ್ಛವಾಗಿ ಕಾಣಬಹುದಾಗಿದೆ. ವಸ್ತು, ಭಾಷೆ, ತಂತ್ರ, ಶೈಲಿ ಈ ಮೊದಲಾದವುಗಳಲ್ಲಿ ಹೊಸತನವನ್ನು ಮೈಗೂಡಿಸಿಕೊಂಡ ನವ್ಯಸಾಹಿತ್ಯವು ಅಧ್ಯಯನಪ್ರಿಯರಿಗೆ ಪೂರ್ಣ ಅವಕಾಶವನ್ನು ನೀಡಿದೆ. ಆದ್ದರಿಂದಲೇ ಸಾಕಷ್ಟು ಮಂದಿ ನವ್ಯ ಸಾಹಿತ್ಯವನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನವನ್ನು ಮಾಡಿದ್ದಾರೆ. ಅಧ್ಯಯನಗಳ ಸಮೀಕ್ಷೆಯನ್ನು ಗಮನಿಸಿದರೆ ನವ್ಯಸಾಹಿತ್ಯ ಪ್ರಕಾರಗಳ ಪ್ರತ್ಯೇಕ ಅಧ್ಯಯನ ಮತ್ತು ಲೇಖಕ ಕೇಂದ್ರಿತ ಅಧ್ಯಯನಗಳು ಸಾಮಾನ್ಯವಾಗಿ ಆಗಿರುವುದು ತಿಳಿದುಬರುತ್ತದೆ. ಆದರೆ ಪರಿಕಲ್ಪನೆಗಳನ್ನು ಆಧಾರವಾಗಿಟ್ಟುಕೊಂಡು ಯಾವುದೇ ಅಧ್ಯಯನವಾಗಿಲ್ಲ, ಒಂದೊಂದೇ ಪರಿಕಲ್ಪನೆಗಳನ್ನು ಆಧಾರವಾಗಿಟ್ಟು ಕೊಂಡು ಅಧ್ಯಯನ ಮಾಡುವುದು ಇಂದಿನ ಹೊಸ ಅಧ್ಯಯನ ವಿಧಾನಗಳಲ್ಲಿ ಒಂದಾಗಿದೆ. ಆದ್ದರಿಂದ ನವ್ಯ ಕಥನ ಸಾಹಿತ್ಯದಲ್ಲಿ 'ಮಹಿಳೆ' ಎಂಬ ಪರಿಕಲ್ಪನೆಯನ್ನು ಪ್ರಸ್ತುತ ಸಂಶೋಧನ ಅಧ್ಯಯನಕ್ಕೆ ಆರಿಸಿಕೊಳ್ಳಲಾಗಿದೆ. ಈ ಪರಿಕಲ್ಪನಾತ್ಮಕ ವಿಧಾನವು ಹಿಂದಿನ ಅಧ್ಯಯನಗಳಿಗಿಂತ ಭಿನ್ನವಾಗಿದೆ ಮತ್ತು ಅಷ್ಟೇ ಮಹತ್ವದ್ದು ಆಗಿದೆ. ಪುರುಷನಿಗೆ ಸಮಾನವಾದ ಶಿಕ್ಷಣವನ್ನು ಪಡೆದ ಮಹಿಳೆ ಇಂದು ಎಲ್ಲಾ ಕ್ಷೇತ್ರಗಳಲ್ಲೂ ಸಾಧನೆ ಮಾಡುತ್ತಿದ್ದಾಳೆ. ಪುರುಷರಿಗೆ ಮಾತ್ರ ಸೀಮಿತವಾಗಿದ್ದ ನೌಕಾಸೇನೆ, ಬಾಹ್ಯಕಾಶದಂತಹ ವಿಶಿಷ್ಟ ಪ್ರಪಂಚಕ್ಕೂ ಪ್ರವೇಶಿಸಿದ್ದಾಳೆ. ಇಂತಹ ಸಂದರ್ಭದಲ್ಲಿ ಹೊಸತನವನ್ನು ಮೈಗೂಡಿಸಿಕೊಂಡ ನವ್ಯ ಕಥನ ಸಾಹಿತ್ಯದಲ್ಲಿ 'ಮಹಿಳೆ' ಪರಿಕಲ್ಪನೆಯನ್ನು ಅಧ್ಯಯನ ಮಾಡುವುದು ಹೆಚ್ಚು ಪ್ರಸ್ತುತ ಮತ್ತು ಮಹತ್ವದ್ದಾಗಿದೆ.

# ಅಧ್ಯಾಯ-೨

## ಅಧ್ಯಯನಗಳ ಸಮೀಕ್ಷೆ

೧೯೫೦ರ ಸುಮಾರಿಗೆ ಕನ್ನಡ ಸಾಹಿತ್ಯದಲ್ಲಿ ಬದಲಾವಣೆ ಉಂಟಾಯಿತು. ೧೯೪೭ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದದ್ದು ಪರೋಕ್ಷವಾಗಿ ಸಾಹಿತ್ಯದ ಬದಲಾವಣೆಗೆ ಕಾರಣವಾಯಿತು. ದೇಶದ ದಾರಿದ್ರ್ಯ, ಕಷ್ಟ, ಅಜ್ಞಾನಗಳೆಲ್ಲ ಸ್ವಾತಂತ್ರ್ಯ ಬಂದ ನಂತರ ಇಲ್ಲವಾಗುತ್ತದೆ ಎಂಬುದು ಎಲ್ಲರ ವಿಶ್ವಾಸದಲ್ಲಿತ್ತು. ಆದರೆ ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿದ್ದ ಮೌಲ್ಯಗಳು ಸ್ವಾತಂತ್ರ್ಯ ನಂತರ ಕ್ಷೀಣವಾಗ ತೊಡಗಿತು. ಇದರಿಂದ ವಿಚಾರವಂತರ ಮನಸ್ಸು ಪ್ರಕ್ಷುಬ್ಧವಾಯಿತು. ಕ್ರಮೇಣ ಹೊಸ ಮೌಲ್ಯಗಳಿಗೆ ಹುಡುಕಾಟ ಆರಂಭವಾಯಿತು. ಡಿ.ಎಚ್.ಲಾರೆನ್ಸ್, ಬರ್ನಾಡ್ ಷಾ, ಎಚ್.ಜಿ.ವೆಲ್ಸ್, ಎಲಿಯೆಟ್, ಆಡನ್ ಮೊದಲಾದವರ ಒಳ್ಳೆಯ ಕೃತಿಗಳ ಜೊತೆಗೆ ಫ್ರೇಜರ್, ಹ್ಯಾವಲಾಕ್ ಎಲಿಸ್, ಫ್ರಾಯ್ಡ್ ಮೊದಲಾದವರ ಸಾಹಿತ್ಯೇತರ ಕೃತಿಗಳು ಓದುವುದಕ್ಕೆ ಲಭ್ಯವಾಯಿತು. ಇದರಿಂದ ಇಲ್ಲಿನ ವಿದ್ಯಾವಂತರ ಮನಸ್ಸು ಹೊಸ ವಿಷಯಗಳಿಗೆ ತೆರೆದುಕೊಂಡಿತು. ಆಧುನಿಕ ಕನ್ನಡ ಕಾವ್ಯ ಸಂಪ್ರದಾಯದಲ್ಲಿ ತಾನು ಮಾಡಬಹುದಾದಷ್ಟು ಕೆಲಸವನ್ನು ಮಾಡಿ ಮುಗಿಸಿದೆ. ಆ ಸಂಪ್ರದಾಯದ ಸತ್ವ ಈಗ ತೀರಿದೆ ಅದಕ್ಕೆ ಅವನತಿ ಬಂದಿದೆ. ಅದನ್ನು ಬಿಟ್ಟು ಹೊಸ ಪಂಥದ ಕಾವ್ಯ ಪ್ರಾರಂಭ ಮಾಡಬೇಕಾಗಿದೆ ಎನ್ನುವ ಅಡಿಗರ ಮಾತುಗಳು ಅಂದಿನ ಕವಿಗಳಿಗೆ ಹೊಸ ಸಾಹಿತ್ಯ ಪಂಥವನ್ನು ಆರಂಭಿಸಲು ಪ್ರೇರಣೆಯನ್ನು ಒದಗಿಸಿದವು. ಈ ಎಲ್ಲಾ ಪರಿಣಾಮಗಳಿಂದ ನವ್ಯಕಾಲಘಟ್ಟವು ಪ್ರಾರಂಭವಾಯಿತು.

೧೯೫೦ ರಿಂದ ಸುಮಾರು ೨೦ ವರ್ಷಗಳ ಕಾಲ ನವ್ಯ ಸಾಹಿತ್ಯವು ಕನ್ನಡ ಸಾಹಿತ್ಯದಲ್ಲಿ ಬಹು ಮುಖ್ಯ ಘಟ್ಟವಾಗಿ ಬೆಳೆದು ನಿಂತಿತು. ಗೋಪಾಲಕೃಷ್ಣ ಅಡಿಗರು ನವ್ಯ ಮಾರ್ಗದ ಪ್ರವರ್ತಕರಾಗಿದ್ದಾರೆ. ಆ ಮಾರ್ಗದಲ್ಲಿಯೇ ಎ.ಕೆ.ರಾಮಾನುಜನ್, ಲಂಕೇಶ್, ಕೆ.ವಿ.ತಿರುಮಲೇಶ್, ಚಂದ್ರಶೇಖರ ಕಂಬಾರ, ಯಶವಂತ ಚಿತ್ತಾಲ, ಪೂರ್ಣಚಂದ್ರ ತೇಜಸ್ವಿ, ಯು.ಆರ್.ಅನಂತಮೂರ್ತಿ, ಶಾಂತಿನಾಥದೇಸಾಯಿ ಮೊದಲಾದ ಬರಹಗಾರರು ನವ್ಯ ಸಾಹಿತ್ಯವನ್ನು ಮುಂದುವರೆಸಿದರು. ವಸ್ತು, ತಂತ್ರ, ಭಾಷೆಗಳಲ್ಲಿ ಹೊಸತನವನ್ನು ಮೈಗೂಡಿಸಿಕೊಂಡ ನವ್ಯ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಸಾಕಷ್ಟು ಅಧ್ಯಯನಗಳು ನಡೆದಿವೆ. ಆದರೂ ಹಲವಾರು ರೀತಿಯಿಂದ ಅಧ್ಯಯನ ಮಾಡುವ ಅವಕಾಶ ಈ ನವ್ಯ ಸಾಹಿತ್ಯದಲ್ಲಿದೆ. ಸಾಕಷ್ಟು ಅಧ್ಯಯನಗಳಾಗಿದ್ದರೂ ನನ್ನ ಸಂಶೋಧನೆಗಾಗಿ ಮತ್ತೆ ಇದೇ ಕ್ಷೇತ್ರವನ್ನು ಈ ಕಾರಣಕ್ಕಾಗಿಯೇ ಆರಿಸಿಕೊಳ್ಳಲಾಗಿದೆ.

ನನ್ನ ಸಂಶೋಧನ ಅಧ್ಯಯನ ಕೈಗೊಳ್ಳುವ ಮೊದಲು ಈ ಮೊದಲು ಆಗಿರುವ ಅಧ್ಯಯನಗಳನ್ನು ತಾತ್ವಿಕವಾಗಿ ಸಮೀಕ್ಷೆ ಮಾಡುವುದು ಅವಶ್ಯಕವಾಗಿದೆ. ನನ್ನ ಸಂಶೋಧನ ಅಧ್ಯಯನ ಕ್ಷೇತ್ರವಾದ ನವ್ಯಸಾಹಿತ್ಯ ಕ್ಷೇತ್ರಕ್ಕೆ ಸಂಬಂಧಪಟ್ಟಂತೆ ಆಗಿರುವ ಅಧ್ಯಯನಗಳ ಸಮೀಕ್ಷೆ ಮಾಡುವುದು ಇಲ್ಲಿನ ಮೂಲ ಉದ್ದೇಶವಾಗಿದೆ.

ಡಾ. ಎನ್.ಕೆ.ಕೋದಂಡರಾಮ ಅವರ 'ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ' ಎಂಬ ಕೃತಿಯು ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ, ದಲಿತ ಹೀಗೆ ಸಾಹಿತ್ಯದ ಎಲ್ಲ ಚಳುವಳಿಗಳಲ್ಲೂ ಕಂಡು ಬರುವ ಅನೇಕ ಕಥನಗಳ ಅಧ್ಯಯನವನ್ನು ಕಟ್ಟಿಕೊಡುತ್ತದೆ. ಹೊಸಗನ್ನಡದ ಮೊದಲನೆಯ ತಲೆಮಾರು, ಹೊಸಗನ್ನಡದ ಎರಡನೆಯ ತಲೆಮಾರು, ಹೊಸಗನ್ನಡದ ಮೂರನೆಯ ತಲೆಮಾರು, ಹೊಸ ತಲೆಮಾರು, ಮಹಿಳಾ ಸಂವೇದನೆ, ಮುಸ್ಲಿಂ ಸಂವೇದನೆ ಎಂಬ ಅಧ್ಯಾಯಗಳ ಮೂಲಕ ಸಾಂಸ್ಕೃತಿಕ ಸಂಘರ್ಷವನ್ನು ಹೇಳುವ ಕಥನಗಳ ಅಧ್ಯಯನವನ್ನು ಇಲ್ಲಿ ಮಾಡಿದ್ದಾರೆ.

ಚಂದ್ರಶೇಖರ ಆಲೂರು ಅವರ 'ನವ್ಯ ಸಾಹಿತ್ಯದಲ್ಲಿ ಆಧುನಿಕತೆ ಮತ್ತು ಸ್ತ್ರೀ ಸ್ವಾತಂತ್ರ್ಯದ ಸ್ವರೂಪ' ಎಂಬ ಲೇಖನವು ನವ್ಯ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಮಹತ್ವದ ಹೊಳಹುಗಳನ್ನು ನೀಡುತ್ತದೆ. ಲೈಂಗಿಕತೆಯನ್ನು ನವ್ಯ ಸಾಹಿತ್ಯ ಜೀವನದ ಸತ್ಯವನ್ನು ಅರಿಯಲು ಮುಖ್ಯ ಮಾನದಂಡವಾಗಿ ಬಳಸಿದೆ. ಈ ಕಾರಣದಿಂದಲೇ ನವ್ಯರಿಗೆ ಮಾಸ್ತಿ, ಕುವೆಂಪು, ಕಾರಂತ, ಗೊರೂರರು ಸೃಷ್ಟಿಸಿದಂತಹ ಉಜ್ವಲ, ಶಕ್ತಿಶಾಲಿ ಸ್ತ್ರೀ ಪಾತ್ರಗಳನ್ನು ಸೃಷ್ಟಿಸುವುದು ಸಾಧ್ಯವಾಗಲಿಲ್ಲ, ಮೇಲಾಗಿ ನವೋದಯ ಸಾಹಿತ್ಯದ ಹಿನ್ನೆಲೆಯಲ್ಲಿದ್ದ ಸ್ತ್ರೀ ಸುಧಾರಣಾವಾದ ಚಳುವಳಿಗಳ ಪ್ರಭಾವವು ನವ್ಯಸಾಹಿತ್ಯದ ಮೇಲೆ ಆಗಲಿಲ್ಲ ಎಂದು ಲೇಖಕರು ಹೇಳುತ್ತಾರೆ.

ನವ್ಯ ಸಾಹಿತ್ಯ ಮುಖ್ಯವಾಗಿ ಗಂಡು ಲೋಕ ಅಲ್ಲಿ ವರ್ಣಿತವಾಗಿರುವುದು ಗಂಡಿನ ಜಗತ್ತು, ವ್ಯಕ್ತವಾಗಿರುವುದು ಗಂಡಿನ ಮನೋಧರ್ಮ; ನವ್ಯ ಸಾಹಿತ್ಯದ ಬಹುಪಾಲು ನಾಯಕರು ದುರ್ಬಲರೂ, ಅಸ್ವಸ್ಥರೂ, ದ್ವಂದ್ವ ಮನಸ್ಸುಳ್ಳವರು ಆಗಿದ್ದಾರೆ. ಅವರು ತಮ್ಮ ಇಂತಹ ದುರ್ಬಲತೆಯನ್ನು ಮುಚ್ಚಿಕೊಳ್ಳುವುದಕ್ಕಾಗಿ ಹೆಣ್ಣನ್ನು ಲೈಂಗಿಕ ಉಪಭೋಗದ ವಸ್ತುವನ್ನಾಗಿ ಬಳಸಿಕೊಳ್ಳುತ್ತಾರೆ. ಆಕೆ ಇಲ್ಲಿ ಅವರ ದುರ್ಬಲ ಗಳಿಗೆಯಲ್ಲಿ ಅವರಿಗೆ ಆಸರೆ ನೀಡುವ ಮಾತೆಯಾಗುತ್ತಾಳೆ. ಆದ್ದರಿಂದ ಇಡೀ ನವ್ಯ ಸಾಹಿತ್ಯದಲ್ಲಿ ಲೈಂಗಿಕ ಉಪಭೋಗಕ್ಕೆ ಬಳಕೆಯಾಗುವ ಮಹಿಳೆಯನ್ನು ಬಿಟ್ಟರೆ ಬೇರೆ ರೀತಿಯ ಮಹಿಳೆಯರನ್ನು ಕಾಣುವುದು ವಿರಳ. ನವ್ಯ ಲೇಖಕರು ಮಹಿಳೆಯನ್ನು

ಪುರುಷನಷ್ಟೇ ಸ್ವತಂತ್ರ ಅಸ್ತಿತ್ವ ಹಾಗೂ ವ್ಯಕ್ತಿತ್ವವುಳ್ಳ ಮಾನವ ಜೀವಿ ಎಂಬಂತೆ ರೂಪಿಸಿದ್ದು ಅಪರೂಪ ಎಂದು ಹೇಳುವ ಲೇಖಕರು ಶಾಂತಿನಾಥ ದೇಸಾಯಿಯವರ ಕತೆ ಕಾದಂಬರಿಗಳಲ್ಲಿ ಕಂಡು ಬರುವ ಗಂಡು ಹೆಣ್ಣಿನ ಸಂಘರ್ಷದ ನೆಲೆಯನ್ನು ಕುತೂಹಲದಿಂದ ಕಾಣುತ್ತಾರೆ. ನವ್ಯಸಾಹಿತ್ಯ ಸಂದರ್ಭದಲ್ಲಿ ಕಾಣದಂಥ ಗಂಡು ಹೆಣ್ಣಿನ ಸಂಘರ್ಷ ದೇಸಾಯಿಯವರ ಕಥನ ಸಾಹಿತ್ಯ ಸಂದರ್ಭದಲ್ಲಿದೆ ಎಂದು ಗುರುತಿಸುತ್ತಾರೆ.

ನವ್ಯ ಸಾಹಿತ್ಯ ಚಳುವಳಿ ಸಂದರ್ಭದಲ್ಲಿ ತಮ್ಮ ಅನುಭವಗಳನ್ನು ಬರಹ ರೂಪಕ್ಕೆ ಇಳಿಸಿದ ಲೇಖಕಿಯರು ಕಡಿಮೆ ಎಂದು ಹೇಳುವ ಲೇಖಕರು ರಾಜಲಕ್ಷ್ಮಿ ಎನ್ ರಾವ್ ಮತ್ತು ವೀಣಾಶಾಂತೇಶ್ವರವರ ಕತೆಗಳಲ್ಲಿ ಮಹಿಳೆ ರೂಪುಗೊಂಡ ಬಗೆಯನ್ನು ಸೂಕ್ಷ್ಮವಾಗಿ ಗಮನಿಸಿದ್ದಾರೆ. ರಾಜಲಕ್ಷ್ಮಿ ಸೃಷ್ಟಿಸಿರುವ ಸ್ತ್ರೀ ಪಾತ್ರಗಳು ನವೋದಯ ಸಾಹಿತ್ಯದಲ್ಲಿ ಬಂದ ಸ್ತ್ರೀ ಪಾತ್ರಗಳ ಅರ್ಥಪೂರ್ಣ ವಿಸ್ತರಣೆ ಮತ್ತು ವೀಣಾ ಶಾಂತೇಶ್ವರವರು ಸೃಷ್ಟಿಸಿರುವ ಸ್ತ್ರೀ ಪಾತ್ರಗಳು ನವ್ಯ ಲೇಖಕರ ಸ್ತ್ರೀ ಹಿನ್ನೆಲೆಯಲ್ಲಿ ನೋಡಿದಾಗ ಚೈತನ್ಯ ಪೂರ್ಣವಾದದ್ದೆಂದು ಹೇಳುತ್ತಾರೆ. ಶಾಂತಿನಾಥ ದೇಸಾಯಿ ಮತ್ತು ವೀಣಾ ಶಾಂತೇಶ್ವರರ ಕೃತಿಗಳನ್ನು ಹೊರತು ಪಡಿಸಿದರೆ ಇಡೀ ನವ್ಯ ಸಾಹಿತ್ಯದಲ್ಲಿ ಸ್ವತಂತ್ರ ವ್ಯಕ್ತಿತ್ವವುಳ್ಳ ಮಹಿಳೆಯರು ನವ್ಯ ಚಳುವಳಿಯ ಅವಸಾನ ಕಾಲದಲ್ಲಿ ಕಾಣಸಿಗುತ್ತಾರೆ. ಲಂಕೇಶ, ತೇಜಸ್ವಿ, ಚಿತ್ತಾಲ, ದೇವನೂರರಂಥ ಮುಖ್ಯ ಲೇಖಕರು ನವ್ಯದ ದೀಕ್ಷೆಯಿಂದ ದೂರ ಸರಿದ ಮೇಲೆಯೇ ಅವರಿಗೆ ಹೆಣ್ಣಿನ ನೈಜ ಚಿತ್ರವನ್ನು ಕೊಡಲು ಸಾಧ್ಯವಾಗಿದೆ ಎಂದು ಚಂದ್ರಶೇಖರ ಆಲೂರುರವರು ಗುರುತಿಸುತ್ತಾರೆ.

ಡಾ.ಅನಂತಮೂರ್ತಿ ಅವರ ಎಲ್ಲ ಬರವಣಿಗೆಗಳನ್ನು ಸಮಗ್ರವಾಗಿ ಗಮನದಲ್ಲಿಟ್ಟು ಕೊಂಡು, ಕೃತಿ ಕೃತಿಗಳ ಅಂತರ್ ಸಂಬಂಧದ ನೆಲೆಯಲ್ಲಿ ಚರ್ಚಿಸುವ ಪ್ರಯತ್ನವನ್ನು ಟಿ.ಪಿ.ಅಶೋಕರವರ 'ಯು.ಆರ್.ಅನಂತಮೂರ್ತಿ ಒಂದು ಅಧ್ಯಯನ' ಕೃತಿಯು ಮೂಡುತ್ತದೆ. ಟಿ.ಪಿ.ಅಶೋಕರವರು ಅನಂತಮೂರ್ತಿ ಅವರ ಕೃತಿ ಸಮೂಹವನ್ನು ಕಥೆ, ಕಾದಂಬರಿ, ವಿಮರ್ಶೆ, ಕವನ ಇತ್ಯಾದಿ ಪ್ರತ್ಯೇಕ ವಿಭಾಗಗಳನ್ನು ಮಾಡುವ ಸಾಂಪ್ರದಾಯಿಕ ಮನೋಧರ್ಮವನ್ನು ಇಲ್ಲಿ ಕೈಬಿಟ್ಟಿದ್ದಾರೆ. ಅದರ ಬದಲಿಗೆ ಇವರು ಅನಂತಮೂರ್ತಿ ಅವರ ಎಲ್ಲ ಬರಹಗಳನ್ನು ಒಂದೇ ಹೆಣಿಗೆ ಹಲವು ನೂಲುಗಳು ಎಂಬಂತೆ ಗುರುತಿಸಿದ್ದಾರೆ. ಜೊತೆಗೆ ಹಾಗೆ ಮಾಡುವಾಗ ಅನಂತಮೂರ್ತಿಯವರ

ಚಿಂತನಾಕ್ರಮ ಮತ್ತು ಬರವಣಿಗೆಯ ಸ್ವರೂಪದ ವಿಕಾಸವನ್ನು ಅದರ ವಿವಿಧ ಘಟ್ಟಗಳಲ್ಲಿ ಗುರುತಿಸಲು ಟಿ.ಪಿ.ಅಶೋಕರವರು ಪ್ರಯತ್ನಿಸಿದ್ದಾರೆ.

ಅನಂತಮೂರ್ತಿ ಅವರ ಕಥಾ ಸಾಹಿತ್ಯದಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುವ 'ಹುಲಿ'ಯ ಬಗ್ಗೆ ಟಿ.ಪಿ.ಅಶೋಕರವರು ಬಹು ಮುಖ್ಯವಾದ ತಾರ್ಕಿಕ ಆಯಾಮವನ್ನು ಒದಗಿಸಿಕೊಟ್ಟಿದ್ದಾರೆ. 'ಹುಲಿ' ಎನ್ನುವುದು ಅನಂತಮೂರ್ತಿಯವರ ಕಥೆಗಳಲ್ಲಿ ಒಂದು ಭೌತಿಕ ವಿವರವಾಗಿ ಬರುವುದಿಲ್ಲ. ಬಹುತೇಕ ಕಥೆಗಳಲ್ಲಿ ಪರಿಸರದ ವಿವರವಾಗಿ, ಕೆಲವೊಮ್ಮೆ ಒಂದು ಪಾತ್ರವಾಗಿಯೂ ಅದು ಕಾಣಿಸಿಕೊಳ್ಳುತ್ತದೆ. ಸಾಮಾನ್ಯವಾಗಿ ಭೌತಿಕ ವಿವರಗಳಲ್ಲಿ ಕಾಣಿಸಿಕೊಳ್ಳುವ 'ಹುಲಿ' ಕತೆಯೊಳಗೆ ಸಂಕೀರ್ಣ ಪ್ರತಿಮೆಯಾಗಿ ಬಿಡುತ್ತದೆ. ಅನಂತಮೂರ್ತಿಯವರ ಕಥೆಗಳಲ್ಲಿ 'ಹುಲಿ' ಒಂದು ಅದಮ್ಯವಾದ ಶಕ್ತಿಗೆ ಸಂಕೇತವಾಗುತ್ತದೆ. ಮನುಷ್ಯನ ಶಕ್ತಿ, ಸಂಯಮಗಳಿಗೆ ಅತೀತವಾಗಿ ಅವನನ್ನು ಆವರಿಸುವ ಅಂಶವಾಗಿ ಮೂಡಿ ಬರುತ್ತದೆ ಎಂದು ಅಶೋಕರವರು ಗುರುತಿಸುತ್ತಾರೆ. ಅನಂತಮೂರ್ತಿಯವರ ಕಥನ ಕೃತಿಗಳ ಶೀರ್ಷಿಕೆಯು ಧ್ವನಿಪೂರ್ಣವಾಗಿರುತ್ತದೆ. 'ಸಂಸ್ಕಾರ', 'ಭಾರತೀಪುರ', 'ಅವಸ್ಥೆ', 'ಪ್ರಸ್ತ', 'ಮೌನಿ', 'ಪ್ರಕೃತಿ' ಈ ಮೊದಲಾದ ಶೀರ್ಷಿಕೆಗಳು ಕತೆಯನ್ನು ಧ್ವನಿಸುವಂತಹದ್ದಾಗಿರುತ್ತದೆ. ಇಂತಹ ಧ್ವನಿಪೂರ್ಣ ಶೀರ್ಷಿಕೆಯ ನಿರ್ಮಾಣದ ಕಡೆಗೆ ಲೇಖಕರು ಗಮನ ಸೆಳೆದಿದ್ದಾರೆ. ಅನಂತಮೂರ್ತಿಯವರ ಸಾಹಿತ್ಯದ ಬಗ್ಗೆ ಮಾತ್ರವಲ್ಲದೆ ಅವರನ್ನು ರೂಪಿಸಿದ ವಿಶಾಲ ಸಂಕಥನಗಳ ಬಗ್ಗೆ ಅನುಬಂಧದಲ್ಲಿ ಅಶೋಕರವರು ಗಮನ ಸೆಳೆದು ವಿಭಿನ್ನ ಪ್ರಯತ್ನ ಮಾಡಿದ್ದಾರೆ.

ಶಾಂತಿನಾಥ ದೇಸಾಯಿಯವರ ೧೯೫೦ ರಿಂದ ಆರಂಭವಾದ ಕಥನಗಳಿಂದ ಹಿಡಿದು ತೀರ ಇತ್ತೀಚಿನ ಕಥನಗಳನ್ನು ಅಂದರೆ ೧೯೯೧ ರವರೆಗಿನ ಕಥನ ಕೃತಿಗಳನ್ನು ಜೊತೆಗೆ ನಾಟಕ, ವಿಮರ್ಶೆಯನ್ನು ಡಾ.ಕೆ.ಎನ್.ಗಂಗಾನಾಯಕ್‌ರವರು 'ಡಾ. ಶಾಂತಿನಾಥದೇಸಾಯಿ ಅವರ ಸಾಹಿತ್ಯ ಒಂದು ಅಧ್ಯಯನ'ದಲ್ಲಿ ಅಧ್ಯಯನ ಮಾಡಿದ್ದಾರೆ. ಆಯಾ ಕೃತಿಗಳ ವಿಶ್ಲೇಷಣೆಯೊಂದಿಗೆ ಶಾಂತಿನಾಥ ದೇಸಾಯಿಯವರ ಒಟ್ಟು ಜೀವನ ಧೋರಣೆಯನ್ನು ಗಂಗಾನಾಯಕ್‌ರವರು ಇಲ್ಲಿ ಗಮನಿಸಿದ್ದಾರೆ.

ಮನುಷ್ಯನ ಸಣ್ಣತನ, ಮುಗ್ಧತೆ, ಪೊಳ್ಳು ಸ್ಥಿತಿಗತಿಗಳನ್ನು ಬಹಿರಂಗಗೊಳಿಸುವ ಮಾಧ್ಯಮವಾಗಿ ಸಾಹಿತ್ಯವನ್ನು ದುಡಿಸಿಕೊಂಡ ಲಂಕೇಶ್‌ರವರನ್ನು ಡಾ.ಹಾಲತಿ ಸೋಮಶೇಖರ್‌ರವರು 'ಪಿ.ಲಂಕೇಶ್' ಎಂಬ ಕೃತಿಯಲ್ಲಿ ಸಮಗ್ರವಾಗಿ ಅಧ್ಯಯನ ಮಾಡಿದ್ದಾರೆ. ನವ-ವಸಾಹತುಶಾಹಿಯಿಂದ ಉಂಟಾದ ಬದುಕಿನ ಪಲ್ಲಟ, ಜಿಜ್ಞಾಸೆ,

ಸಂಕೀರ್ಣತೆ, ಮನಸ್ಸಿನಾಳದ ಭೋಳೆತನ, ಖಿನ್ನ ಮನಸ್ಸಿನ ಉದ್ವಿಗ್ನತೆ, ತೀಕ್ಷ್ಣವಾದ ವಿಡಂಬನೆ ಲಂಕೇಶರ ಸಾಹಿತ್ಯದ ಪ್ರಧಾನ ನೆಲೆಗಳು ಎಂದು ಸೋಮಶೇಖರ್‌ರವರು ಅಭಿಪ್ರಾಯ ಪಡುತ್ತಾರೆ. ನಗರಾಭಿಮುಖ ಚಲನೆ, ಪಟ್ಟಣ-ಹಳ್ಳಿಯ ಮುಖಾಮುಖಿ ಈ ಬಿಕ್ಕಟ್ಟಿನಲ್ಲಿ ನಡೆಸುವ ಸಾಂಸ್ಕೃತಿಕ ಶೋಧನೆಯಾಗಿ ಲಂಕೇಶರ ಸಾಹಿತ್ಯ ಮೈದಾಳುತ್ತದೆ. ತನ್ನ ಅರಿವಿಗೂ, ಇರವಿಗೂ ನಡುವಿನ ಬಿಕ್ಕಟ್ಟು ಲಂಕೇಶರನ್ನು ಬಹುವಾಗಿ ಕಾಡುತ್ತದೆ ಎಂದು ಅವರು ಗುರುತಿಸಿದ್ದಾರೆ.

ಲಂಕೇಶರದು ಪೂಸಿ ಹೊಡೆಯುವ ಬರವಣಿಗೆಯಲ್ಲ. ಟೀಕಿಸುವ, ಓದುಗನನ್ನು ತೀವ್ರಗೊಳಿಸುವ ಬರವಣಿಗೆಯಾಗಿದೆ. ಲಂಕೇಶರು ತಮ್ಮದೇ ಆದ ಖಂಡಿತವಾದ ಮಾತಿನ ಮೂಲಕ ಯಾವುದನ್ನೇ ಆದರೂ ಮುಚ್ಚು ಮರೆಯಿಲ್ಲದೆ ಹೇಳುತ್ತಾರೆ. ಏನನ್ನು? ಎಷ್ಟನ್ನು? ಹೇಗೆ? ಹೇಳಬೇಕೆಂದು ನಿರಂತರ ಶೋಧ ನಡೆಸುವಂತೆ ಅವರ ಬರವಣಿಗೆ ಇರುತ್ತದೆ. ಲಂಕೇಶರ ಮತ್ತೊಂದು ಮಹತ್ವದ ಸಾಹಿತ್ಯದ ಗುಣವೆಂದರೆ ಆಧುನಿಕ ಸಂವೇದನೆಯನ್ನು ತನ್ನ ವ್ಯಕ್ತಿತ್ವದಲ್ಲಿ ಅರಗಿಸಿಕೊಂಡು ಅಭಿವ್ಯಕ್ತಿಸುವುದು, ತನ್ನ ಆಂತರ್ಯದ ಸಂಕಟವನ್ನು ಸಮಾಜದೊಂದಿಗೆ ಸಮೀಕರಿಸುವುದು, ಅದಕ್ಕೆ ಬೇಕಾದ ಸಂವಹನ ವಿಧಾನವನ್ನು ಹೊಸದಾಗಿ ರೂಪಿಸಿಕೊಳ್ಳುವುದು ಎಂದು ಹಾಲತಿ ಸೋಮಶೇಖರರವರು ಲಂಕೇಶರ ಬರವಣಿಗೆಯ ವೈಶಿಷ್ಟ್ಯವನ್ನು ಗುರುತಿಸಿದ್ದಾರೆ.

ಪೂರ್ಣಚಂದ್ರ ತೇಜಸ್ವಿ ಅವರು ತಮ್ಮ ಬರವಣಿಗೆಯಲ್ಲಿ ಸ್ವಾತಂತ್ರ್ಯೋತ್ತರ ಭಾರತವನ್ನು ಗ್ರಾಮಗಳ ನೆಲೆಯಲ್ಲಿ ವಿಶ್ಲೇಷಿಸುತ್ತ, ವ್ಯಕ್ತಿಯ ಸಾಮಾಜಿಕ ಸಂದರ್ಭವನ್ನು ವೈಜ್ಞಾನಿಕ ಆಯಾಮಗಳೊಂದಿಗೆ ಅನಾವರಣ ಮಾಡಿದರೆ, ಅನಂತಮೂರ್ತಿಯವರು ಇದೇ ಅಂಶವನ್ನು ವ್ಯಕ್ತಿಯ ಕಾಮ, ಪ್ರೇಮ ನಡುವಿನ ಆಂತರಿಕಗಳ ಜೊತೆ ವಿಶ್ಲೇಷಿ ಸುತ್ತಾರೆ. ಲಂಕೇಶರು ಇವರಿಬ್ಬರಿಗಿಂತ ಭಿನ್ನವಾದ ದಾರಿಯನ್ನು ಆರಿಸಿಕೊಳ್ಳುತ್ತಾರೆ. ವ್ಯಕ್ತಿಯ ಕನಸು ಮತ್ತು ಕಾಮನೆಗಳು ಏನೆಲ್ಲ ಆಮಿಷಗಳೊಂದಿಗೆ ಮನುಷ್ಯ ಸಂಬಂಧದಲ್ಲಿ ಸಂವಹನ ಸಾಧಿಸಿಕೊಳ್ಳುವಲ್ಲಿ ವಿಫಲಗೊಳ್ಳುತ್ತವೆ. ಸೋಲುಗಳೇ ಪ್ರಧಾನವಾಗಿ, ಅವೆಲ್ಲದರ ನಡುವೆ ಭವಿಷ್ಯದ ಬೆಳಕಿಗಾಗಿ ತಡಕಾಡುತ್ತ, ಅಸ್ತಿತ್ವಕ್ಕಾಗಿ ಅನವರತ ಪ್ರಯತ್ನಿಸುತ್ತಾ ಇರುವ ಮನುಷ್ಯರೇ ಲಂಕೇಶರ ಕಥಾನಾಯಕರು ಎಂದು ಹೇಳುವ ಮೂಲಕ ಲಂಕೇಶರ ಕಥಾ ನಾಯಕರ ಸ್ಪಷ್ಟ ಚಿತ್ರಣವನ್ನು ಅವರು ನೀಡುತ್ತಾರೆ. ಅಷ್ಟೇ ಅಲ್ಲದೇ ಸ್ವಾತಂತ್ರ್ಯೋತ್ತರ ಭಾರತದ ಗ್ರಾಮಗಳನ್ನು ತೇಜಸ್ವಿ, ಅನಂತಮೂರ್ತಿ, ಲಂಕೇಶ್ ಬಳಸಿಕೊಂಡ ಬಗೆಯನ್ನು

ತೌಲನಿಕವಾಗಿ ಕಟ್ಟಿಕೊಡುತ್ತಾರೆ ಮತ್ತು ಆ ಮೂಲಕ ಲಂಕೇಶರು ಅವರಿಬ್ಬರಿಗಿಂತಲೂ ಹೇಗೆ ಭಿನ್ನ ಎಂಬುದನ್ನು ಚರ್ಚಿಸಿದ್ದಾರೆ.

ಗಿರೀಶ್ ವಾಘ್ ರವರು 'ಸಮಾಜವೆಂಬ ಜಟಿಲ ಜೀವಜಾಲದ ಅನಾವರಣ' ಎಂಬ ಬರಹದಲ್ಲಿ ನವ್ಯಕಥೆ ಮತ್ತು ಕಾದಂಬರಿಗಳಿಗೆ ಬಂದಿರುವ ಎರಡು ಪ್ರಮುಖ ಆರೋಪಗಳನ್ನು ಗುರುತಿಸುತ್ತಾರೆ. ಅವುಗಳಲ್ಲಿ ಒಂದು ಆ ಸಾಹಿತ್ಯವು ಸುತ್ತಲಿನ ಸಮಾಜವನ್ನು ಕಡೆಗಣಿಸಿ ವ್ಯಕ್ತಿ ಕೇಂದ್ರಿತ ಆಶಯಗಳಿಗೆ ಅಂಟಿಕೊಂಡಿತ್ತು. ಮತ್ತೊಂದು, ಹೆಣ್ಣನ್ನು ಗಂಡಿನ ಕಾಮದ ವಸ್ತುವಾಗಿ ಮಾತ್ರ ಕಂಡಿತ್ತು. ಇಲ್ಲಿನ ಎರಡನೆಯ ಆಪಾದನೆಗೆ ಶಾಂತಿನಾಥ ದೇಸಾಯಿಯವರ ಸಾಹಿತ್ಯ ಒಂದು ಅಪವಾದವಾಗಿದ್ದು, ಅದರಲ್ಲಿ ಸ್ವತಂತ್ರ ವ್ಯಕ್ತಿತ್ವದ ಮಹಿಳೆಯರಿಗೆ ಮಹತ್ವದ ಸ್ಥಾನ ಸಿಕ್ಕಿದೆ ಎಂದು ವಿಮರ್ಶಕರು ಗುರುತಿಸಿದ್ದಾರೆ ಎಂಬುದನ್ನು ಲೇಖಕರು ಉಲ್ಲೇಖಿಸಿದ್ದಾರೆ. ಆದರೆ ಈ ಎರಡೂ ಅಪಾದನೆಗಳನ್ನು ಸುಳ್ಳು ಮಾಡುವ ನವ್ಯ ಕಾದಂಬರಿಯೊಂದನ್ನು ಅವರು ಗುರುತಿಸಿದ್ದಾರೆ. ನಮ್ಮ ಸಮಾಜದಲ್ಲಿ ವ್ಯಕ್ತಿ ಮತ್ತು ಅವನ ಸುತ್ತಲಿನ ಜನರೊಂದಿಗಿನ ಸಂಬಂಧವನ್ನು ಅದರೆಲ್ಲಾ ಸಂಕೀರ್ಣತೆಗಳೊಂದಿಗೆ ಚಿತ್ತಾಲರ 'ಮೂರು ದಾರಿಗಳು' ಕಾದಂಬರಿ ಹಿಡಿದಿಟ್ಟಿದೆ ಎಂಬ ವ್ಯಾಖ್ಯಾನವನ್ನು ಅವರು ಮಾಡಿದ್ದಾರೆ.

'ಮೂರು ದಾರಿಗಳು' ಕಾದಂಬರಿಯ ಪರಿಚಯಾತ್ಮಕ ವಿವರಣೆಯಿಂದ ಆರಂಭಿಸಿ, ಅವರು ಘಟನೆಗಳನ್ನು ವಿಶ್ಲೇಷಿಸಿ ಕೊನೆಗೆ ಕಥಾನಾಯಕಿಯ ಬದುಕು ಸಮಾಜದ ಸಂಕೀರ್ಣತೆಯಿಂದ ನಿರ್ಬಂಧಗೊಳ್ಳುತ್ತದೆ ಎಂಬುದನ್ನು ಅಭಿವ್ಯಕ್ತಿಸಿದ್ದಾರೆ. ಮಧ್ಯಮ ವರ್ಗದ ಸಮಾಜದಲ್ಲಿ 'ಶೀಲ' ಎಂಬ ಬೇಲಿಯನ್ನು ಹೆಣ್ಣಿಗೆ ಮಾತ್ರ ಅನ್ವಯಿಸಲಾಗಿದೆ. ಈ 'ಶೀಲ'ಕ್ಕೂ ಅವಳು ಹುಟ್ಟಿದ ಕುಟುಂಬದ ಮರ್ಯಾದೆಗೆ ತಳಕು ಹಾಕಿ ಅವಳ ಮೇಲೆ ಬಲವಾದ ನಿರ್ಬಂಧಗಳನ್ನು ಹೇರಲಾಗಿದೆ. 'ಮೂರು ದಾರಿಗಳು' ಕಾದಂಬರಿಯ ನಾಯಕಿ ನಿರ್ಮಲಾ ಇಂತಹ ನಿರ್ಬಂಧದ ಸಮಸ್ಯೆಯನ್ನು ಎದುರಿಸಬೇಕಾಗಿ ಬರುತ್ತದೆ. ಆ ಸಂದರ್ಭದಲ್ಲಿ ನಿರ್ಮಲಾ ತನ್ನದೇ ಆದ ರೀತಿಯಲ್ಲಿ ಬಂಡಾಯ ಏಳುತ್ತಾಳೆ. ಅಪ್ರಬುದ್ಧ ವಯಸ್ಸಿನ ನಿರ್ಮಲೆಯ ಬಂಡಾಯವೂ ಅಪ್ರಬುದ್ಧ ರೀತಿಯದಾಗಿದ್ದು ಅದು ದುರಂತದಲ್ಲಿ ಕೊನೆಗೊಳ್ಳುತ್ತದೆ. ಹೀಗೆ 'ಮೂರು ದಾರಿಗಳು' ನಮ್ಮ ಸಮಾಜದಲ್ಲಿ ವ್ಯಕ್ತಿ ಮತ್ತು ಅವನ ಸುತ್ತಲಿನ ಜನರೊಂದಿಗೆ ಸಂಬಂಧವನ್ನು ಸಂಕೀರ್ಣತೆಗಳೊಂದಿಗೆ ಹಿಡಿದಿಟ್ಟಿದೆ ಎಂದು ಅವರು ತಮ್ಮ ವ್ಯಾಖ್ಯಾನವನ್ನು ಮಂಡಿಸುತ್ತಾರೆ.

ಮನುಷ್ಯನ ವ್ಯಕ್ತಿತ್ವ ಹಾಗೂ ಜೀವನಗಳ ಆಳದಲ್ಲಿರುವ ಕೇಡಿನ (Evil) ಬಗ್ಗೆ ಕನ್ನಡದ ಕಥನಗಳಲ್ಲಿ ಬರೆದವರು ಕಡಿಮೆ. ಗ್ರೀಕ್ ನಾಟಕಕಾರ ಈ ಸ್ಕೈಲಸ್, ಇಟಲಿಯ ಡ್ಯಾಂಟೆ, ಶೇಕ್ಸ್‌ಪಿಯರ್, ಫ್ರೆಂಚ್ ಕವಿ ಬೋದಿಲೇರ್, ಕಾದಂಬರಿಕಾರ ಸೆಂದ್ಹಾಲ್, ಜೋಸೆಫ್ ಕಾನ್ರಾಡ್, ಕಾಫ್ಕಾ ಮುಂತಾದ ಶ್ರೇಷ್ಠ ಬರಹಗಾರರು ಬದುಕಿನ ಕೇಡಿನ ಬಗ್ಗೆ ತೀವ್ರವಾಗಿ ಬರೆಯುತ್ತಾರೆ "Call no man happy, until he be dead" ಎಂದು ಹೇಳುವ ವಸ್ತು ನಿಷ್ಠತೆಯಿದೆ. ಆದರೆ ಕನ್ನಡದ ಬರಹಗಾರರು ಕೇಡಿನ ಬಗ್ಗೆ ತೀವ್ರವಾದ ಆಸಕ್ತಿಯನ್ನು ತೋರಿಸುವುದಿಲ್ಲ ಎಂದು ರಾಜೇಂದ್ರ ಚೆನ್ನಿಯವರು 'ಯಶವಂತ ಚಿತ್ತಾಲರ ಸಾಹಿತ್ಯಲೋಕ'ದಲ್ಲಿ ಅಭಿಪ್ರಾಯ ಪಡುತ್ತಾರೆ. ಡಿ.ಎಚ್.ಲಾರೆನ್ಸ್ ಕಾದಂಬರಿಯನ್ನು Bright Book Of Life ಎಂದು ಕರೆಯುತ್ತಾರೆ. ನಮ್ಮ ಕಾಲದ ತಲ್ಲಣಗಳ ಬಗ್ಗೆ ಚಿತ್ತಾಲರು ಬರೆದರೂ Bright Book Of Life ಆಗಿಯೇ ಸೃಷ್ಟಿಸುತ್ತಾರೆ. ಕೇಡಿನ ಬಗ್ಗೆ ತೀವ್ರವಾದ ಎಚ್ಚರವಿರುವ ಚಿತ್ತಾಲರಿಗೆ ಪ್ರೀತಿ ಮತ್ತು ಅಂತಃಕರಣದಲ್ಲಿ ಅಷ್ಟೇ ಶ್ರದ್ಧೆ ಇದೆ. ಆದ್ದರಿಂದ ಇವರು ತಮ್ಮ ಕೃತಿಗಳನ್ನು Bright Book Of Life ಆಗಿಯೇ ಸೃಷ್ಟಿಸುತ್ತಾರೆ ಎಂದು ರಾಜೇಂದ್ರ ಚೆನ್ನಿಯವರು ಚಿತ್ತಾಲ ಬರವಣಿಗೆಯ ವೈಶಿಷ್ಟ್ಯತೆಯನ್ನು ತಿಳಿಸುತ್ತಾರೆ.

ನವ್ಯದ ಪ್ರಧಾನ ವಸ್ತುವಾದ ಕಾಮ ಮತ್ತು ಲೈಂಗಿಕತೆಗಳನ್ನು ಚಿತ್ತಾಲರಷ್ಟು ಆಳವಾಗಿ ಶೋಧಿಸಿದವರಿಲ್ಲ. ಚಿತ್ತಾಲರು ಲೈಂಗಿಕತೆಯನ್ನು ಮನುಷ್ಯನ ಮೂಲಭೂತ ಪ್ರವೃತ್ತಿಯನ್ನಾಗಿ ನೋಡದೆ ಹೆಣ್ಣಿನ ಶೋಷಣೆಯನ್ನು ಅಸ್ತ್ರವನ್ನಾಗಿ ನೋಡಿದರು. ಹೆಣ್ಣಿನ ಮೇಲೆ ಜರುಗುವ ಲೈಂಗಿಕ ದೌರ್ಜನ್ಯವು ಅವರ ಕೃತಿಗಳಲ್ಲಿ ಮತ್ತೆ ಮತ್ತೆ ಪ್ರಸ್ತಾಪವಾಗುತ್ತದೆ. ಈ ರೀತಿ ಬೇರೆ ನವ್ಯಕತೆ, ಕಾದಂಬರಿಗಳಲ್ಲಿ ವ್ಯಕ್ತವಾಗುವ ಹಾಗೆ ಲೈಂಗಿಕತೆಯನ್ನು ಚಿತ್ತಾಲರು ಜೀವನ ಪ್ರವೃತ್ತಿಯೆಂದು ಚಿತ್ತಾಲರು ಸೃಷ್ಟಿಸಲಿಲ್ಲ ಎನ್ನುವಂತಹ ಸೈದ್ಧಾಂತಿ ಕತೆಯನ್ನು ರಾಜೇಂದ್ರ ಚೆನ್ನಿಯವರು ಮಂಡಿಸುತ್ತಾರೆ.

'ಯಶವಂತ ಚಿತ್ತಾಲರ ಕಥನ ವ್ಯಕ್ತಿ ಹಾಗೂ ಸಮಾಜಗಳಲ್ಲಿನ ಕೇಡಿನ ಅನಾವರಣ'ದಲ್ಲಿ ಎಲ್.ಜಿ.ಮೀರಾ ಅವರು ಚಿತ್ತಾಲರ ಪ್ರಾತಿನಿಧಿಕ ಕಥನದ ಸ್ತ್ರೀವಾದಿ ಅಧ್ಯಯನವನ್ನು ಮಾಡಿದ್ದಾರೆ. ಚಿತ್ತಾಲರ ಕಥೆಗಳಲ್ಲಿ ಪಿತೃಪ್ರಧಾನ ಚೌಕಟ್ಟು ವರ್ಣಿತವಾಗಿರುವ ಕ್ರಮ, ಚಿತ್ತಾಲರ ಕಥನದಲ್ಲಿ ಸ್ತ್ರೀಪಾತ್ರಗಳನ್ನು ನೋಡಲಾಗಿರುವ ರೀತಿ, ಚಿತ್ತಾಲರ ಭಾಷೆ ಮತ್ತು ನುಡಿಗಟ್ಟುಗಳು, ಚಿತ್ತಾಲರ ಕಥನ ಪ್ರಜ್ಞೆ ಈ ನಾಲ್ಕು ಹಂತಗಳಲ್ಲಿ ಅವರು ಸ್ತ್ರೀವಾದಿ ಅಧ್ಯಯನ ಮಾಡಿದ್ದಾರೆ.

ಚಿತ್ತಾಲರ ಸ್ತ್ರೀ ಪಾತ್ರಗಳು ಮಾನವ ಸಹಜ ಭಾವಗಳು ಮತ್ತು ಸಂಘರ್ಷಗಳಿರುವ ಸಹಜ ವ್ಯಕ್ತಿಗಳಾಗಿವೆ. ಚಿತ್ತಾಲರ ಸ್ತ್ರೀಯರು ಯಾರೂ ದೇವಿಯರೂ ಅಲ್ಲ, ರಾಕ್ಷಸಿಯರೂ ಅಲ್ಲ, ಸಮಾಜದೊಡನೆ ಹೋರಾಟವನ್ನು ಮಾಡುತ್ತಲೇ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಹೆಣಗಾಡುವ ಕೊನೆಗೆ ಆತ್ಮಹತ್ಯೆಯನ್ನು ಮಾಡಿಕೊಳ್ಳುವ ಮೂಲಕ ತಮ್ಮ ಇರುವಿಕೆಯನ್ನು ತೋರಿಸಿಕೊಳ್ಳುವ ಮಹಿಳೆಯರ ಚಿತ್ರಣವು ಚಿತ್ತಾಲರ ಕಥನದಲ್ಲಿ ಕಂಡು ಬರುತ್ತದೆ ಎಂದು ಅವರು ಹೇಳುವ ಮೂಲಕ ಚಿತ್ತಾಲರ ಕಥನಗಳಲ್ಲಿ ಮಹಿಳೆಯ ಧ್ವನಿಯನ್ನು ಅನಾವರಣ ಮಾಡುತ್ತಾರೆ.

'ಯಶವಂತ ಚಿತ್ತಾಲರ ಕಾದಂಬರಿಗಳಲ್ಲಿ ವ್ಯಕ್ತಿ ಹಾಗೂ ಸಮಾಜ ಒಂದು ಸಮೀಕ್ಷೆ'ಯಲ್ಲಿ ಜಿ.ಎಸ್.ಅಮೂರರವರು ಚಿತ್ತಾಲರ 'ಮೂರು ದಾರಿಗಳು' ಕಾದಂಬರಿಯನ್ನು ಚರ್ಚಿಸುತ್ತಾ ಸಮಾಜ ಈ ಕಾದಂಬರಿಯಲ್ಲಿ ಖಳನಾಯಕನ ಸ್ಥಾನದಲ್ಲಿದೆ ಎಂಬ ಸಿದ್ಧಾಂತವನ್ನು ಮಂಡಿಸುತ್ತಾರೆ. ಸಮಾಜವು ಕಾದಂಬರಿಯಲ್ಲಿ ನಿರ್ಮಲೆ, ರಂಗಪ್ಪರ ಸಂಬಂಧವನ್ನು ಕೇಂದ್ರವಾಗಿಟ್ಟುಕೊಂಡು ನಿರ್ಮಲೆಯನ್ನು ರೊಚ್ಚಿಗೇಳಿಸುವ ಪ್ರಯತ್ನ ಮಾಡುತ್ತದೆ. ವಾಸ್ತವದಲ್ಲಿ ನಿರ್ಮಲೆ ರಂಗಪ್ಪರ ಸಂಬಂಧ ಸಮಾಜ ಎಣಿಸಿದಂತೆ ಬೆಳೆದಿಲ್ಲವಾದ್ದರಿಂದ ನಿರ್ಮಲೆ ರೊಚ್ಚಿಗೇಳುತ್ತಾಳೆ. ಸಮಾಜದ ವಿರುದ್ಧ ಸೇಡನ್ನು ಬೆಳೆಸಿಕೊಳ್ಳುತ್ತಾಳೆ. 'ಸತ್ತರೂ ಬಿಡುವುದಿಲ್ಲ, ಭೂತವಾಗಿ ಕಾಡುತ್ತೇನೆ' ಎನ್ನುತ್ತಲೇ ನಿರ್ಮಲೆ ಸಾಯುತ್ತಾಳೆ. ನಿರ್ಮಲೆಯ ಸಾವು ಖಳನಾಯಕನಾದ ಸಮಾಜದಿಂದ ಉಂಟಾಗಿದೆ ಎಂಬ ತೀರ್ಮಾನಕ್ಕೆ ಆಮೂರರು ಬಂದಿದ್ದಾರೆ.

ಸಮಾಜ ಈ ಕಾದಂಬರಿಯಲ್ಲಿ ಖಳನಾಯಕನ ಸ್ಥಾನದಲ್ಲಿದೆ ಎಂಬ ಮಾತು ಕೇವಲ ಚಿತ್ತಾಲರ 'ಮೂರು ದಾರಿಗಳು' ಕಾದಂಬರಿಗೆ ಮಾತ್ರ ಸೀಮಿತವಾಗಿಲ್ಲ. 'ಆಬೋಲೀನ', 'ಕತೆಯಾದಳು ಹುಡುಗಿ' ಮುಂತಾದ ಕತೆಗಳಿಗೂ ಅನ್ವಯವಾಗುತ್ತದೆ. ನಿರ್ಮಲೆ, ಆಬೋಲೀನ, ಜಾನಕಿ ಎಲ್ಲರೂ ಕತೆಯಾದ ಹುಡುಗಿಯರೇ ಆಗಿದ್ದಾರೆ. ಅವರ ಬದುಕನ್ನು ಅಸಹನೀಯ ಮಾಡಿದ ಸಮಾಜವು ಖಳನಾಯಕನ ಸ್ಥಾನವನ್ನು ಪಡೆದಿದೆ ಎಂದು ಎಲ್.ಜಿ.ಮೀರಾ ಅಭಿಪ್ರಾಯ ಪಡುತ್ತಾರೆ. ಗಂಡು, ಹೆಣ್ಣು ಎಂಬ ಭೇದವಿಲ್ಲದೆ ಇಡೀ ಸಮಾಜ ಸ್ತ್ರೀ ವಿರೋಧಿ ಧೋರಣೆಯನ್ನು ಚಿತ್ತಾಲರ ಕಥನಗಳಲ್ಲಿ ತಳೆಯುವುದನ್ನು ಇಲ್ಲಿ ಗುರುತಿಸಬಹುದಾಗಿದೆ. ಪಿತೃ ಅಧಿಕಾರ, ಸಾಮಾಜಿಕ ನಿಯಮಗಳು ವ್ಯಕ್ತಿಯಲ್ಲಿ ಮೂಲವಾಗಿ ಇರಬಹುದಾದ ಕೇಡಿಗೆ ಕುಮ್ಮಕ್ಕು ಕೊಟ್ಟಾಗ ಉಂಟಾಗುವ ದುರಂತಗಳನ್ನು ಚಿತ್ತಾಲರು 'ಆಬೋಲೀನ', 'ಮೂರು ದಾರಿಗಳು'

ಕೃತಿಗಳಲ್ಲಿ ಅತ್ಯಂತ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಇಂತಹ ಪರಿಕಲ್ಪನೆ ಸ್ತ್ರೀವಾದಿ ಅಧ್ಯಯನಕ್ಕೆ ಸಹಾಯ ಮಾಡುತ್ತದೆ ಎಂದು ಎಲ್.ಜಿ.ಮೀರಾರವರು ಗುರುತಿಸಿದ್ದಾರೆ.

ಚಿತ್ತಾಲರ 'ಆಟ', 'ಪಯಣ', 'ಸಿದ್ಧಾರ್ಥ', 'ಆಬೋಲೀನ', 'ಕಥೆಯಾದಳು ಹುಡುಗಿ' ಈ ಕೃತಿಗಳನ್ನು ಕೇಂದ್ರವಾಗಿಟ್ಟುಕೊಂಡು ಬಸವರಾಜ ಕಲ್ಗುಡಿಯವರು 'ಸಿದ್ಧಾರ್ಥ ಕಳೆದು ಹೋದುದರ ಹುಡುಕಾಟ'ದಲ್ಲಿ ಸಾವು, ಕಾಮ, ಮುಗ್ಧತೆ ಹಾಗೂ ಅದನ್ನು ಬಳಸಿಕೊಳ್ಳುವ ಕ್ರೌರ್ಯ ಇವುಗಳನ್ನು ಚಿತ್ತಾಲರು ಮುಖಾಮುಖಿಯಾಗಿಸುವ ತಂತ್ರದ ಬಗ್ಗೆ ಗಮನ ಸೆಳೆದಿದ್ದಾರೆ. ಚಿತ್ತಾಲರು ಸೃಷ್ಟಿಸುವ 'ಸಾವು' ಬದುಕಿನಲ್ಲಿ ಪರಿಣಾಮಕ್ಕೆ ಗುರಿ ಮಾಡುವ ಅನೇಕ ಮುಖಗಳ ಹುಡುಕಾಟಕ್ಕೆ ಕಾರಣೀಭೂತವಾಗುತ್ತದೆ ಎಂದು ಅವರು ವಿಶ್ಲೇಷಿಸುತ್ತಾರೆ.

'ಆಧುನಿಕ ಕನ್ನಡ ನವ್ಯ ಕಥೆಗಳ ಅಧ್ಯಯನ' ಎಂಬುದು ಡಾ.ಕರೀಗೌಡ ಬೀಚನಹಳ್ಳಿಯವರ ಸಂಶೋಧನ ಪ್ರಬಂಧವಾಗಿದೆ. ಇಲ್ಲಿ ಅವರು ೧೯೫೦ ರಿಂದ ೧೯೮೦ರ ಕಾಲಾವಧಿಯಲ್ಲಿ ಪ್ರಕಟವಾಗಿರುವ ಪ್ರಾತಿನಿಧಿಕವಾದ ನವ್ಯಕಥೆ ಹಾಗೂ ಕಥಾ ಸಂಕಲನಗಳ ಅಧ್ಯಯನ ಮಾಡಿದ್ದಾರೆ. ಬಿ.ಸಿ.ರಾಮಚಂದ್ರಶರ್ಮ, ಯು.ಆರ್.ಅನಂತ ಮೂರ್ತಿ, ಕೆ.ಸದಾಶಿವ, ಯಶವಂತ ಚಿತ್ತಾಲ, ಶಾಂತಿನಾಥ ದೇಸಾಯಿ, ಪಿ.ಲಂಕೇಶ್, ಬೆಸಗರಹಳ್ಳಿ ರಾಮಣ್ಣ, ಕೆ.ಪಿ.ಪೂರ್ಣಚಂದ್ರ ತೇಜಸ್ವಿ, ದೇವನೂರು ಮಹಾದೇವ ಈ ಕಥೆಗಾರರನ್ನು ಆಧುನಿಕ ಕನ್ನಡದ ಪ್ರಾತಿನಿಧಿಕ ನವ್ಯ ಕಥೆಗಾರರೆಂದು ಸಂಶೋಧಕರು ಗುರುತಿಸಿದ್ದಾರೆ. ಇವರ ಕಥಾ ಸಾಹಿತ್ಯವನ್ನು ಕುರಿತು ಚರ್ಚಿಸುವಾಗ ತಾತ್ವಿಕ ಚರ್ಚೆ ಮತ್ತು ಸಾಂಸ್ಕೃತಿಕ ವಿವರಣೆಗಳೆರಡರ ಹೊಂದಾಣಿಕೆಯನ್ನು ಅವರು ಮಾಡಿಕೊಂಡಿದ್ದಾರೆ.

ಬಿ.ಸಿ.ರಾಮಚಂದ್ರಶರ್ಮ ಅವರು ತಮ್ಮ ಕಥೆಗಳಲ್ಲಿ ಅಭಿವ್ಯಕ್ತಿ ಮಾಧ್ಯಮವಾಗಿ ಕಾಮ ಮತ್ತು ಬದುಕನ್ನು ಕಂಡಿದ್ದಾರೆ. ಯಶವಂತ ಚಿತ್ತಾಲರು ತಮ್ಮ ಕಥಗಳಲ್ಲಿ ಸಾವಿನ ನಿಗೂಢತೆ ಮತ್ತು ನಿರಪರಾಧಿ ಯಾತನೆಯನ್ನು ಸೃಷ್ಟಿಸಿದ್ದಾರೆ. ಶಾಂತಿನಾಥ ದೇಸಾಯಿಯವರು ತಮ್ಮ ಕಥೆಗಳಲ್ಲಿ ಹೆಣ್ಣು ಗಂಡಿನ ಸಂಬಂಧಗಳು ಮತ್ತು ಆಧುನಿಕ ಸಮಾಜದ ಸಂವೇದನೆಯನ್ನು ಕಟ್ಟಿಕೊಟ್ಟಿದ್ದಾರೆ. ಯು.ಆರ್.ಅನಂತಮೂರ್ತಿಯವರು ಬ್ರಾಹ್ಮಣ ಸಮಾಜ ಮತ್ತು ವೈಚಾರಿಕತೆಯನ್ನು ತಮ್ಮ ಕತೆಗಳಲ್ಲಿ ಶೋಧಿಸುತ್ತಾರೆ. ಕೆ.ಸದಾಶಿವರವರು ಕುಟುಂಬದ ರಂಪ ಮತ್ತು ವ್ಯಾಕುಲತೆಯನ್ನು ತಮ್ಮ ಕಥೆಗಳಲ್ಲಿ ಕಟ್ಟಿಕೊಡುತ್ತಾರೆ. ಪಿ.ಲಂಕೇಶರವರು ಮಾನವನ ಮೂಲ ಪ್ರವೃತ್ತಿಗಳನ್ನು ಶೋಧಿಸುತ್ತಾರೆ. ಬೆಸಗರಹಳ್ಳಿ ರಾಮಣ್ಣರವರು ಗ್ರಾಮೀಣ ಸಂಸ್ಕೃತಿ ಮತ್ತು ಮೌಲ್ಯಗಳ

ಹುಡುಕಾಟವನ್ನು ತಮ್ಮ ಕೃತಿಗಳಲ್ಲಿ ಮಾಡುತ್ತಾರೆ. ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರು ಸಹಜ ಹೊರ ದಾರಿಗಳ ಕಡೆಗೆ ಪ್ರಯಾಣಿಸುತ್ತಾ ಸೃಜನಶೀಲತೆಯನ್ನು ಕಟ್ಟಿಕೊಡುತ್ತಾರೆ. ಈ ರೀತಿಯಾಗಿ ಹೀಗೆ ಈ ಎಲ್ಲಾ ಕತೆಗಾರರ ಬರವಣಿಗೆಯ ಶೋಧವನ್ನು ಕರೀಗೌಡ ಬೀಚನಹಳ್ಳಿಯವರು ಮಾಡುತ್ತಾರೆ.

ಬೆಸಗರಹಳ್ಳಿ ರಾಮಣ್ಣ, ಪೂರ್ಣಚಂದ್ರ ತೇಜಸ್ವಿ, ದೇವನೂರು ಮಹಾದೇವ ಅವರುಗಳು ಎಪ್ಪತ್ತರ ದಶಕದಲ್ಲಿ ಬರೆದ ಕೆಲವು ಕಥೆಗಳನ್ನು ಗಮನದಲ್ಲಿಟ್ಟುಕೊಂಡು ಕೆಲವು ವಿಮರ್ಶಕರು ಈ ಲೇಖಕರನ್ನು ನವ್ಯೋತ್ತರ ಅಥವಾ ಬಂಡಾಯ ಸಾಹಿತ್ಯ ಚಳುವಳಿಯ ನೆಲೆಯಲ್ಲಿ ಗುರುತಿಸುತ್ತಾರೆ. ವಿಮರ್ಶಕರ ಈ ಕ್ರಮವನ್ನು ಬೀಚನಹಳ್ಳಿಯವರು ವಿರೋಧಿಸುತ್ತಾರೆ. ಈ ಕಥೆಗಾರರು ನವ್ಯದ ರೀತಿ ಮತ್ತು ಧೋರಣೆಗೆ ಹೊರತಾದ ಬರವಣಿಗೆಯ ಜಾಡನ್ನು ಹುಡುಕುವ ಪ್ರಯತ್ನವು ನವ್ಯ ಕಥಾ ಸಾಹಿತ್ಯದ ಪ್ರಪಂಚವನ್ನು ವಿಸ್ತರಿಸಲು ಸಹಾಯ ಮಾಡಿದೆ ಎನ್ನುತ್ತಾರೆ. ಈ ಅಂಶವನ್ನೇ ಕೇಂದ್ರವಾಗಿಟ್ಟುಕೊಂಡು ಅವರು ೧೯೭೫ರೊಳಗೆ ಬರೆದ ದೇವನೂರರ ಕಥೆಗಳನ್ನು ನವ್ಯ ಕಥೆಗಳೆಂದೇ ಕರೆಯುತ್ತಾರೆ.

ಡಾ.ಟಿ. ಸುಬ್ರಹ್ಮಣ್ಯಂ ಅವರ 'ಅಸ್ತಿತ್ವವಾದ ಮತ್ತು ಕನ್ನಡ ನವ್ಯ ಸಾಹಿತ್ಯ' ಕೃತಿಯಲ್ಲಿ ಅಸ್ತಿತ್ವವಾದ ಸ್ವರೂಪ – ಲಕ್ಷಣ, ಪರಂಪರೆ ಪರಿಕಲ್ಪನೆಗಳನ್ನು ೧೯೫೦ ರಿಂದ ೧೯೮೦ ರ ನಡುವಣ ಮೂವತ್ತು ವರ್ಷಗಳ ಕನ್ನಡ ನವ್ಯ ಸಾಹಿತ್ಯದ ವಿವೇಚನೆ ಇದೆ. ಕೀರ್ಕೆಗಾರ್ಡ್‌ನಿಂದ ಅಬಗ್ನಾನೋವರೆಗಿನ ಹನ್ನೆರೆಡು ಪ್ರಮುಖ ಅಸ್ತಿತ್ವವಾದಿಗಳ ಪರಿಚಯ, ಪರಕೀಯತೆ ಮುಂತಾದ ಅಸ್ತಿತ್ವವಾದಿ ಪರಿಕಲ್ಪನೆಗಳ ವಿವರಣೆ, ಇವುಗಳ ಹಿನ್ನೆಲೆಯಲ್ಲಿ ಅಡಿಗರಿಂದ ಆಲನಹಳ್ಳಿ ವರೆಗಿನ ನಲವತ್ತಕ್ಕೂ ಹೆಚ್ಚು ನವ್ಯ ಸಾಹಿತಿಗಳ ಸಾಧನೆಗಳ ಮೌಲ್ಯಮಾಪನ, ಅಸಂಗತ ನಾಟಕ, ಸ್ತ್ರೀವಾದ,ಬಂಡಾಯ ಪರಿಕಲ್ಪನೆಗಳ ವಿವೇಚನೆ ಈ ಎಲಾ ್ಲಅಂಶಗಳನ್ನು ವಸ್ತುನಿಷ್ಠ ತಲಸ್ಪರ್ಶಿ ವಿವೇಚನೆಯಿಂದ, ಅಪೂರ್ವ ಒಳನೋಟಗಳಿಂದ ವಿವೇಚಿಸಿದ್ದಾರೆ.

'ತೇಜಸ್ವಿ ಕಥನ' ಎಂಬ ಕೃತಿಯಲ್ಲಿ ಟಿ.ಪಿ.ಅಶೋಕ ಅವರು ತೇಜಸ್ವಿಯವರ ಸಮಗ್ರ ವಾಙ್ಮಯವನ್ನು ಅವರ ಕೃತಿಗಳ ಅಂತರ್ ಸಂಬಂಧಗಳ ನೆಲೆಯಲ್ಲಿ, ಒಟ್ಟಾರೆ ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಸಮಕಾಲೀನ ವಿದ್ಯಮಾನಗಳ ಹಿನ್ನೆಲೆಯಲ್ಲಿ ಓದಿ ವಿಮರ್ಶಿಸುವ ಪ್ರಯತ್ನವನ್ನು ಮಾಡಿದ್ದಾರೆ. ತೇಜಸ್ವಿ ಜಗತ್ತಿನಲ್ಲಿ ದೇವರಿಲ್ಲ. ದೇವರಿಲ್ಲದ ಜಗತ್ತಿನಲ್ಲಿ ಮತಧರ್ಮಗಳ ಸೋಂಕಿಲ್ಲದ ಆಧ್ಯಾತ್ಮಿಕ ಶೋಧ ತೇಜಸ್ವಿ ಬರವಣಿಗೆಯ ಪ್ರಮುಖ ಲಕ್ಷಣ. ಮತಧರ್ಮ–ವಿಜ್ಞಾನ, ಗ್ರಾಮ–ಪಟ್ಟಣ,

ಶೂದ್ರ-ಬ್ರಾಹ್ಮಣ, ಕನ್ನಡ-ಇಂಗ್ಲಿಷ್, ಪೂರ್ವ-ಪಶ್ಚಿಮ ಇಂಥ ದ್ವಿದಳ ವಿಭಜನೆಯ (Binary Apposition) ಮಾರ್ಗದಲ್ಲಿ ಅವರಿಗೆ ಆಸಕ್ತಿಯಿಲ್ಲ. ಇವೆಲ್ಲದರಿಂದ ಸಂಶ್ಲೇಷಣೆಗೊಂಡ ಹೊಸ ಬದುಕಿನ ಕಾಣ್ಕೆಯತ್ತ ಅದರ ದೃಷ್ಟಿ ಇದೆ ಎಂದು ಟಿ.ಪಿ.ಅಶೋಕ್‌ರವರು ತೇಜಸ್ವಿಯವರು ಬರಹದ ಬಗ್ಗೆ ವಿಶೇಷ ಹೊಳಹನ್ನು ಸೈದ್ಧಾಂತಿಕ ನೆಲೆಯಲ್ಲಿ ನೀಡುತ್ತಾರೆ.

ಕನ್ನಡ ಮೌಲಿಕ ಕಾದಂಬರಿಗಳಲ್ಲೊಂದಾದ 'ನಾಲ್ಕನೆಯ ಆಯಾಮ' ತನ್ನ ಕಾಳಜಿ ಹಾಗೂ ತಂತ್ರಗಳಲ್ಲಿ ಲಂಕೇಶರ ಬಿರುಕು, ಸ್ಯಾಲಿಂಜರ್‌ನ 'The Character in the Rye' ಇತ್ಯಾದಿ ಕಿಶೋರಾವಸ್ಥೆಯ ಬಗ್ಗೆ ಇರುವ ಕಾದಂಬರಿಗಳ ಸಾಲಿನಲ್ಲಿ ಬರುತ್ತದೆ. ಈ ಕೃತಿಯಲ್ಲಿ ಬರುವ ಯಾವ ಪಾತ್ರಕ್ಕೂ ಹೆಸರಿಲ್ಲ. ಆದ್ದರಿಂದ ಅವುಗಳನ್ನು ಯಾವ ಜಾತಿ-ಉಪಜಾತಿಗಳಿಗೂ ನಾವು ಕಟ್ಟಿಹಾಕಬೇಕಾದ್ದಿಲ್ಲ. ಬಹುಶಃ ಈ ಕೃತಿ ಚಿತ್ರಿಸುವ ಅನುಭವ ಜಾತಿ-ಧರ್ಮಗಳನ್ನು ಮೀರಿದ ಮಾನವ ಸಹಜ ಅನುಭವವಾಗಬೇಕೆಂಬುದು ಲೇಖಕರ ಉದ್ದೇಶವೆಂದು ಸಿ.ಎನ್.ರಾಮಚಂದ್ರನ್‌ರವರು 'ಕುಸುಮಾಕರ ದೇವರಗೆಣ್ಣೂರರ ಸಾಹಿತ್ಯ ಒಂದು ಸಮೀಕ್ಷೆ'ಯಲ್ಲಿ ಅಭಿಪ್ರಾಯ ಪಡುತ್ತಾರೆ.

ಕುಸುಮಾಕರರು ಕೇವಲ ಅಸ್ತಿತ್ವವಾದಿ ನಿಲುವಿನ ಲೇಖಕರಾಗದೆ ತಮ್ಮ 'ನಾಲ್ಕನೆಯ ಆಯಾಮ'ದಲ್ಲಿ ವ್ಯಕ್ತಿಯ ಅಂತರಂಗದ ಜಗತ್ತಿನಲ್ಲಿ ನಡೆಯುವ ಸಂಘರ್ಷವನ್ನು ಚಿತ್ರಿಸಲು ಅವರು ಮನಃಶಾಸ್ತ್ರದ ವಿವಿಧ ಶಾಖೆಗಳಿಗೆ ಮೊರೆ ಹೋಗಿದ್ದಾರೆ. ಈ ಮೂಲಕ ಕನ್ನಡ ನವ್ಯ ಸಾಹಿತ್ಯದಲ್ಲಿ 'ಮಾನಸಿಕ ವಿಶ್ಲೇಷಣೆ' ಪ್ರಮುಖ ಅಭಿವ್ಯಕ್ತಿ ಕ್ರಮವಾಯಿತು ಎಂದು ಜಿ.ಎನ್.ಉಪಾಧ್ಯ ರವರು 'ಕುಸುಮಾಕರ ದೇವರಗೆಣ್ಣೂರರ ನಾಲ್ಕನೆಯ ಆಯಾಮ'ದಲ್ಲಿ ವಿಶ್ಲೇಷಿಸಿದ್ದಾರೆ.

ತನ್ನ ಹಿಂದಿನ ಸಾಹಿತ್ಯದ ಮಾವು-ಮಲ್ಲಿಗೆಯ ರೋಮ್ಯಾಂಟಿಕ್ ಲೋಕವನ್ನು ಧಿಕ್ಕರಿಸಿದ ನವ್ಯ ಸಾಹಿತ್ಯವು ಎಲ್ಲದರಲ್ಲೂ ಹೊಸತನವನ್ನು ಮೈಗೂಡಿಸಿಕೊಂಡಿತು. ಹೀಗೆ ವಿಭಿನ್ನವಾಗಿ ಮೂಡಿ ಬಂದ ಈ ನವ್ಯ ಸಾಹಿತ್ಯವು ಅಧ್ಯಯನಪ್ರಿಯರಿಗೆ ವಿಫುಲ ಅವಕಾಶವನ್ನು ನೀಡಿದೆ. ಆದ್ದರಿಂದಲೇ ಸಾಕಷ್ಟು ಮಂದಿ ನವ್ಯ ಸಾಹಿತ್ಯವನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನವನ್ನು ಮಾಡಿದ್ದಾರೆ. ನವ್ಯ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಅನೇಕ ವಿಮರ್ಶ ಕೃತಿಗಳು, ವಿಮರ್ಶ ಲೇಖನಗಳು, ಸಂಶೋಧನ ಪ್ರಬಂಧಗಳು ಬಂದಿವೆ. ಈ ಮೇಲಿನ ಅಧ್ಯಯನಗಳ ಸಮೀಕ್ಷೆಯಿಂದ ನವ್ಯ ಸಾಹಿತ್ಯ ಪ್ರಕಾರಗಳ ಪ್ರತ್ಯೇಕ ಅಧ್ಯಯನ ಮತ್ತು ಲೇಖಕ ಕೇಂದ್ರಿತ ಅಧ್ಯಯನಗಳು

ಸಾಮಾನ್ಯವಾಗಿ ಆಗಿರುವುದು ತಿಳಿದು ಬರುತ್ತದೆ. ಒಂದೆರಡು ಅಧ್ಯಯನಗಳನ್ನು ಹೊರತು ಪಡಿಸಿದರೆ ಪರಿಕಲ್ಪನೆಗಳನ್ನು, ಆಶಯಗಳನ್ನು, ಸೈದ್ಧಾಂತಿಕತೆಯನ್ನು ಪ್ರಧಾನವಾಗಿಟ್ಟುಕೊಂಡ ಅಧ್ಯಯನಗಳು ಸಾಕಷ್ಟು ಆಗಿಲ್ಲ. ಈ ಮೇಲಿನ ಅಧ್ಯಯನಗಳ ಸಮೀಕ್ಷೆಯನ್ನು ಗಮನಿಸಿದರೆ ಇಂತಹ ಅಧ್ಯಯನಕ್ಕೆ ವಿಫುಲ ಅವಕಾಶವಿರುವುದು ತಿಳಿದು ಬರುತ್ತದೆ. ಆದ್ದರಿಂದ ಪರಿಕಲ್ಪನೆಯನ್ನು ಕೇಂದ್ರವಾಗಿಟ್ಟುಕೊಂಡು ನನ್ನ ಸಂಶೋಧನೆಯನ್ನು ಕೈಗೊಳ್ಳಲಾಗಿದೆ. ಈಗ ಆಗಿರುವ ಅಧ್ಯಯನಗಳಿಗಿಂತ ವಿಭಿನ್ನ ದೃಷ್ಟಿಕೋನದಲ್ಲಿ ಅಧ್ಯಯನವನ್ನು ಕೈಗೊಳ್ಳುವುದಕ್ಕೆ ಈ ಅಧ್ಯಯನಗಳ ಸಮೀಕ್ಷೆಯು ಸಹಾಯ ಮಾಡಿದೆ.

# ಅಧ್ಯಾಯ – ೩

## ಕಥನ ಸಾಹಿತ್ಯ ಮತ್ತು ಮಹಿಳೆ

ಮಾನವ ಜನಾಂಗದ ನಾಗರೀಕತೆಯ ಪೂರ್ವದಲ್ಲಿ ಹೆಣ್ಣು ಇಡೀ ಸಮಾಜವನ್ನು ಬೆಳೆಸಿದ್ದಾಳೆ. ಗಂಡು ಹೆಣ್ಣು ಎಂಬ ಭೇದವಿರದ ಆ ಸಮಾಜದಲ್ಲಿ ಹೆಣ್ಣು ಒಡತಿಯಾಗಿದ್ದಳು. ಗಂಡಿನ ಯಾವ ದಾಕ್ಷಿಣ್ಯಕ್ಕೂ ಆಕೆ ಒಳಗಾಗಿರಲಿಲ್ಲ. ನಾಗರಿಕತೆಯ ಪೂರ್ವ ಸಮಾಜದಲ್ಲಿ ಹೆಣ್ಣು ಬಹಳ ಶಕ್ತಿಶಾಲಿಯಾಗಿದ್ದಳು. ನಾಲ್ಕಾರು ಗಂಡಸರು, ಐದಾರು ಹೆಂಗಸರು, ಮಕ್ಕಳು ಇದ್ದ ಪರಿವಾರವನ್ನು ಹೆಣ್ಣು ಅಪಾಯದಿಂದ ಪಾರು ಮಾಡಿ ಉಳಿಸಿಕೊಳ್ಳಲು ಪ್ರಯತ್ನ ಪಡುತ್ತಿದ್ದಳು. ತನ್ನ ಗುಂಪನ್ನು ಮುನ್ನಡೆಸಲು ಏನು ಮಾಡಬೇಕೋ ಎಲ್ಲವನ್ನು ಧೃತಿಗೆಡದೆ ಮಾಡುವ ಶಕ್ತಿಯನ್ನು ಅಂದಿನ ಮಹಿಳೆ ಹೊಂದಿದ್ದಳು. ಅಂದಿನ ಮಹಿಳೆ ಸ್ವತಂತ್ರಳಾಗಿರುವುದು ಮಾತ್ರವಲ್ಲದೆ ಶಾರೀರಿಕ ಮತ್ತು ಆರ್ಥಿಕ ಉತ್ಪನ್ನದ ಜವಬ್ದಾರಿಯನ್ನು ಹೊಂದಿದ್ದಳು. ಆದರೆ ಕಾಲಕ್ರಮೇಣ ಪುರುಷನು ಮಹಿಳೆಯಲ್ಲಿರುವ ಅದ್ಭುತ ಶಕ್ತಿಯನ್ನು ಮನಗಂಡು ಆಕೆಯನ್ನು ಹತೋಟಿಯಲ್ಲಿಟ್ಟು ಕೊಳ್ಳಬೇಕೆಂದು ಬಯಸಿದನು. ಧರ್ಮ, ಸಂಪ್ರದಾಯಗಳ ಹೆಸರಿನಲ್ಲಿ ಮಹಿಳೆಯನ್ನು ಪುರುಷನು ಬಂಧಿಸಿಡುವ ಕೆಲಸ ಮಾಡಿದನು.

ಪುರಾತನ ಕಾಲದಲ್ಲಿ ನಾಲ್ಕು ಕಾಲುಗಳಲ್ಲಿ ನಡೆಯುತ್ತಿದ್ದ ಮನುಷ್ಯ, ಎರಡು ಕಾಲುಗಳಲ್ಲಿ ನಿಲ್ಲುವುದನ್ನು ಕಲಿತು, ಬೇಟೆಯಾಡಿ ತನ್ನ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಿದ್ದನು. ಕಾಲ ಕಳೆದಂತೆ ಬೇಟೆಯಾಡುವುದನ್ನು ಬಿಟ್ಟು ವ್ಯವಸಾಯ ಮಾಡುವುದನ್ನು ಕಲಿತನು. ಇದರ ಜೊತೆಗೆ ಹೆಣ್ಣನ್ನು ಮತ್ತು ಭೂಮಿಯನ್ನು ಒಂದೇ ಎಂಬಂತೆ ಭಾವಿಸಿ ಹೆಣ್ಣನ್ನು ಆಸ್ತಿಯಂತೆ ನೋಡಲಾರಂಭಿಸಿದನು. ಇಲ್ಲಿಂದ ಹೆಣ್ಣಿನ ಸ್ಥಿತಿ ಶೋಚನೀಯವಾಗತೊಡಗಿತು. ಮಹಿಳೆಯೇ ಪ್ರಧಾನವಾಗಿದ್ದ ಕುಟುಂಬಗಳಲ್ಲಿ ಪುರುಷನೇ ಮುಖ್ಯನಾದನು. ಮಹಿಳೆಯ ವ್ಯಕ್ತಿತ್ವಕ್ಕೆ ಬೆಲೆ ಇಲ್ಲದಂತಾಯಿತು. ಹೆಣ್ಣನ್ನು ನಿಕೃಷ್ಟವಾಗಿ ನಡೆಸಿಕೊಳ್ಳುವುದನ್ನು ಪುರುಷ ಅಭ್ಯಾಸ ಮಾಡತೊಡಗಿದನು. ಸಮಾಜದಲ್ಲಿ ಹೆಣ್ಣು ಹೇಗಿರಬೇಕೆಂಬ ನಿರ್ಬಂಧವನ್ನು ಪುರುಷನು ಹಾಕತೊಡಗಿನಿಂದ ಮಹಿಳೆಯ ಬದುಕು ಶೋಚನೀಯವಾಗತೊಡಗಿತು.

ಸಾಹಿತ್ಯವೆಂಬುದು ಜೀವನದ ಪ್ರತಿಬಿಂಬವಾಗಿದೆ. ಒಂದು ಯಶಸ್ವಿ ಸಾಹಿತ್ಯ ಕೃತಿ ಸಾಮಾಜಿಕ ಪ್ರಜ್ಞೆಯನ್ನು ಒಳಗೊಳ್ಳುತ್ತದೆ. ಕಲ್ಪನೆ, ಪ್ರತಿಮೆ, ಸಂಕೇತ ಇನ್ನು ಮುಂತಾದ ಪರಿಕಲ್ಪನೆಗಳ ಜೊತೆ ಸಾಹಿತ್ಯವು ಸಮಕಾಲೀನ ಜೀವನ ಚಿತ್ರಣವನ್ನು

ಸಹ ಒಳಗೊಂಡಿರುತ್ತದೆ. ಸಮಾಜದಲ್ಲಿ ಶೋಚನೀಯ ಸ್ಥಿತಿಗೆ ತಲುಪಿದ ಮಹಿಳೆಯ ಬದುಕು ಸಾಹಿತ್ಯದಲ್ಲೂ ಕೂಡ ಅನಾವರಣಗೊಂಡಿದೆ. ಸಾಹಿತಿಗಳು ಮಹಿಳೆಯ ಬಗೆಗೆ ತಳೆದಿರುವ ನಿಲುವುಗಳನ್ನು ನಾವು ಅವರ ಸಾಹಿತ್ಯ ಕೃತಿಗಳ ಅಧ್ಯಯನ ಮಾಡುವ ಮೂಲಕ ತಿಳಿಯಬಹುದಾಗಿದೆ.

ಇಂದು ನಮ್ಮ ಸಮಾಜದಲ್ಲಿ ಮಹಿಳೆಯರ ಮೇಲಾಗುತ್ತಿರುವ ದೌರ್ಜನ್ಯಗಳಿಗೆ ಇತಿಹಾಸವಿದೆ. ರಾಮಾಯಣ, ಮಹಾಭಾರತ, ಪುರಾಣಗಳಲ್ಲಿ ಇಂತಹ ದೌರ್ಜನ್ಯಗಳು ಮಹಿಳೆಯರ ಮೇಲೆ ನಡೆದಿರುವುದಕ್ಕೆ ಸಾಕಷ್ಟು ಉದಾಹರಣೆಗಳಿವೆ. ಹೆಣ್ಣಿನ ಅಪಹರಣ, ಅತ್ಯಾಚಾರ, ಗಂಧರ್ವ ವಿವಾಹ, ಸತಿಪದ್ಧತಿ, ಹೆಣ್ಣಿನ ದೇಹಕ್ಕೆ ನೋವನ್ನುಂಟು ಮಾಡುವುದು, ಹೆಣ್ಣನ್ನು ಮಾರುವುದು ಹೀಗೆ ಒಂದಲ್ಲ ಒಂದು ಕಾರಣಕ್ಕಾಗಿ ಹೆಣ್ಣು ಈ ಹಿಂದೆಯೂ ನರಳಿದ್ದಳು. ಇಂದು ನರಳುತ್ತಿದ್ದಾಳೆ. ಅವಳ ಈ ನರಳುವಿಕೆಗೆ ಇತಿಹಾಸವಿರುವುದು ವಿಪರ್ಯಾಸವೇ ಸರಿ. ಹೆಣ್ಣಿನ ಇಂತಹ ಶೋಷಣೆಗಳಿಗೆ ಪುರುಷನು ಕಾರಣನಾದರೂ ಅಂದಿನಿಂದ ಇಂದಿನವರೆಗೂ ಆತನಿಗೆ ಮನಃ ಪರಿವರ್ತನೆಯಾಗಿಲ್ಲ. ಇದರಿಂದಾಗಿ ಅವಳ ಮೇಲಾಗುತ್ತಿರುವ ಶೋಷಣೆ ಮತ್ತಷ್ಟು ಹೆಚ್ಚಾಗುತ್ತಿದೆ.

ಬ್ರಿಟಿಷರ ಏಕರೂಪ ಇಂಗ್ಲಿಷ್ ಶಿಕ್ಷಣದ ಪರಿಣಾಮವಾಗಿ ೨೦ನೇ ಶತಮಾನದಲ್ಲಿ ಸಾಮಾಜಿಕವಾಗಿ ಬದಲಾವಣೆ ಆಯಿತು. ಬ್ರಿಟೀಷರು ತಮ್ಮ ಆಡಳಿತವನ್ನು ನಡೆಸಲು ಅನುಕೂಲವಾಗಲೆಂದೇ ಲಿಂಗ ಬೇಧವಿಲ್ಲದ, ಜಾತಿ ಬೇಧವಿಲ್ಲದ ಎಲ್ಲರಿಗೂ ಸಮಾನ ವಾದ ಇಂಗ್ಲಿಷ್ ಶಿಕ್ಷಣವನ್ನು ನೀಡಿದರು. ಇದರ ಫಲವಾಗಿ ಈ ಹಿಂದೆ ವಿದ್ಯೆಯಿಂದ ವಂಚಿತರಾದ ಮಹಿಳೆಯರು ಕೂಡ ಹೊಸ ಲೋಕಕ್ಕೆ ತಮ್ಮನ್ನು ತಾವು ತೆರೆದುಕೊಳ್ಳಲು ಸಾಧ್ಯವಾಯಿತು. ಇದರ ಜೊತೆಗೆ ಕ್ರೈಸ್ತ ಮಿಷನರಿಗಳು ಹಿಂದೂ ಧರ್ಮದಲ್ಲಿರುವ ಸತಿ ಪದ್ಧತಿಯಂತಹ ಮೂಢ ಪದ್ಧತಿಗಳನ್ನು ವಿರೋಧಿಸಿ, ಭಾರತೀಯರಲ್ಲಿ ತಮ್ಮ ನಡುವೆ ಇರುವ ಅನಿಷ್ಟ ಪದ್ಧತಿಗಳ ವಿರುದ್ಧ ಎಚ್ಚರ ಮೂಡಿಸಿದರು. ರಾಜರಾಮ್ ಮೋಹನ್‌ರಾಯ್, ಜ್ಯೋತಿಬಾಫುಲೆ ಈ ಮೊದಲಾದವರು ಹಿಂದೂ ಸಮಾಜದಲ್ಲಿರುವ, ಮಹಿಳೆಯರಿಗೆ ಸಂಬಂಧಿಸಿದ ಅನಿಷ್ಟ ಪದ್ಧತಿಗಳನ್ನು ವಿರೋಧಿಸಿ ಮಹಿಳೆಯರ ಸ್ಥಾನಮಾನಗಳನ್ನು ಉನ್ನತೀಕರಿಸಲು ಪ್ರಯತ್ನಿಸಿದರು. ಇಂತಹ ಸಾಮಾಜಿಕ ಬದಲಾವಣೆಗಳಿಂದ ಮಹಿಳೆಯರ ಸ್ಥಾನಮಾನದಲ್ಲಿ ಬದಲಾವಣೆ ಉಂಟಾಯಿತು. ಸಾಂಪ್ರದಾಯಿಕ ಸಮಾಜದಲ್ಲಿ ಮಹಿಳೆಯರನ್ನು ಕಾಣುತ್ತಿದ್ದ ರೀತಿಗಿಂತ ವಿಭಿನ್ನ ರೀತಿಯಲ್ಲಿ ಮಹಿಳೆಯರನ್ನು

ಕಾಣುವ ಪ್ರಯತ್ನ ಇಲ್ಲಿ ಆಯಿತು. ಇದರ ಜೊತೆಗೆ ಹೊಸಗನ್ನಡ ಸಾಹಿತ್ಯದಲ್ಲಿ ಮಹಿಳೆ ಬಗೆಗಿನ ದೃಷ್ಟಿಕೋನ ಬದಲಾಯಿತು.

ಕಾಲ ಬದಲಾದಂತೆ ಕನ್ನಡ ಸಾಹಿತ್ಯವು ತನ್ನ ತತ್ವ, ಧೋರಣೆಗಳಲ್ಲಿ ಬದಲಾವಣೆಗಳನ್ನು ತಂದುಕೊಂಡಿದೆ. ಕಾಲ, ಪ್ರಭಾವ, ಪ್ರೇರಣೆ, ತತ್ವ, ಧೋರಣೆಗಳ ಹಿನ್ನೆಲೆಯಲ್ಲಿ ಹೊಸಗನ್ನಡ ಸಾಹಿತ್ಯವು ನವೋದಯ, ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಕಾಲಘಟ್ಟಗಳಲ್ಲಿ ತನ್ನನ್ನು ತಾನು ಗುರುತಿಸಿಕೊಳ್ಳುತ್ತದೆ. ಕೈಗಾರೀಕರಣದ ಪರಿಣಾಮವಾಗಿ ೨೦ನೇ ಶತಮಾನದ ಪ್ರಾರಂಭದಲ್ಲಿ ನಗರಗಳು ಹುಟ್ಟಿಕೊಂಡವು. ಜೀವನೋಪಾಯಕ್ಕಾಗಿ ಕೆಲಸ ಹುಡುಕಿಕೊಂಡು ನಗರಕ್ಕೆ ವಲಸೆ ಬರುವವರ ಸಂಖ್ಯೆ ದಿನೇ ದಿನೇ ಹೆಚ್ಚಾಗ ತೊಡಗಿತು. ಹೀಗೆ ನಗರಕ್ಕೆ ಬಂದವರು ತಮ್ಮ ಇಡೀ ಕುಟುಂಬವನ್ನು ಹಳ್ಳಿಯಿಂದ ನಗರಕ್ಕೆ ಕರೆತರಲು ಅನಿವಾರ್ಯ ಕಾರಣಗಳಿಂದ ಸಾಧ್ಯವಾಗಲಿಲ್ಲ. ಬದಲಾಗಿ ಗಂಡ, ಹೆಂಡತಿ, ಮಕ್ಕಳು ನಗರಕ್ಕೆ ಬಂದು ನೆಲೆಸಲಾರಂಭಿಸಿದರು. ಇದರಿಂದ ಅವಿಭಕ್ತ ಕುಟುಂಬವು ನಿಧಾನವಾಗಿ ಮರೆಯಾಗುತ್ತಾ ವಿಭಕ್ತ ಕುಟುಂಬ ತಲೆ ಎತ್ತಿ ಆ ಕುಟುಂಬದಲ್ಲಿ ಮಹಿಳೆಗೆ ಹೆಚ್ಚಿನ ಸ್ಥಾನಮಾನ, ಗೌರವ ಸಿಗಲಾರಂಭಿಸಿತು. ಗಂಡ-ಹೆಂಡತಿ ಒಬ್ಬರಿಗೊಬ್ಬರು ಗೌರವ, ಪ್ರೀತಿಗಳನ್ನು ಹಂಚಿಕೊಳ್ಳಲು ಸಾಧ್ಯವಾಯಿತು.

ಸಾಮಾಜಿಕವಾಗಿ ಈ ರೀತಿಯ ಬದಲಾವಣೆ ಆಗುವ ಜೊತೆ ಜೊತೆಗೆ ಕನ್ನಡ ಸಾಹಿತ್ಯದಲ್ಲೂ ಬದಲಾವಣೆಯ ಗಾಳಿ ಬೀಸಿತು. ೧೯೨೧ರಲ್ಲಿ ಬಿ.ಎಂ.ಶ್ರೀಯವರ 'ಇಂಗ್ಲಿಷ್ ಗೀತೆಗಳು' ಎಂಬ ಪುಸ್ತಕದ ಮೂಲಕ ಹೊಸಗನ್ನಡದ ನವೋದಯ ಕಾಲವು ಆರಂಭವಾಯಿತು. "ಭಾಷೆಯ ವಿಚಾರದಲ್ಲಿ ಹೊಸಗನ್ನಡವನ್ನೇ ಬರೆಯಬೇಕು. ಹಳೆಗನ್ನಡದಲ್ಲಿ ನನಗೂ ಅಕ್ಕರೆ ಉಂಟು;..... ಆದರೆ ಸದ್ಯಕ್ಕೆ ಜನರಿಗೆ ತಿಳಿಯದ ಭಾಷೆಯಲ್ಲಿ ಬರೆಯುವುದರಲ್ಲಿ ಯಾವ ಬುದ್ಧಿವಂತಿಕೆಯೂ ಇಲ್ಲ. ಹೊಸಗನ್ನಡವನ್ನೇ ಎಲ್ಲರೂ ಹಿಡಿಯಬೇಕು....... ರಾಜರಿಗೇ ಆಗಲಿ ಪಂಡಿತರಿಗೇ ಆಗಲಿ ಬರೆಯತಕ್ಕ ಕಾಲ ಹೋಯಿತು. ಈಗ ಹೆಂಗಸರು, ಗಂಡಸರು, ಚಿಕ್ಕವರು, ದೊಡ್ಡವರು, ಬ್ರಾಹ್ಮಣರು, ಒಕ್ಕಲಿಗರು, ಅಷ್ಟರೂ ಓದುವಂತೆ ಬರೆಯಬೇಕು" (ಶೇಷಗಿರಿರಾವ್ ಎಲ್.ಎಸ್, ಹೊಸಗನ್ನಡ ಸಾಹಿತ್ಯ, ೧೯೯೩, ಪುಟ ೨೮) ಎಂದು ಅಂದಿನ ಸಾಹಿತಿಗಳಿಗೆ ಬಿ.ಎಂ.ಶ್ರೀಯವರು ಕರೆಯನ್ನು ನೀಡಿದರು. ಇವರನ್ನು ಅನುಸರಿಸಿಯೇ ಕುವೆಂಪು, ಬೇಂದ್ರೆ, ಕಾರಂತ, ಕೈಲಾಸಂ, ಶ್ರೀರಂಗ ಈ ಮೊದಲಾದ ಸಾಹಿತಿಗಳು ಸಾಹಿತ್ಯ ರಚನೆಗೆ ಮುಂದಾದರು.

ಇಂಗ್ಲಿಷ್‌ನ ರೊಮ್ಯಾಂಟಿಕ್ ಕಾವ್ಯ ಪರಂಪರೆಯ ಪ್ರಭಾವಕ್ಕೆ ಒಳಗಾದ ನವೋದಯ ಸಾಹಿತಿಗಳು ಕನ್ನಡದಲ್ಲಿ ರೊಮ್ಯಾಂಟಿಕ್ ಕಾವ್ಯ ಪರಂಪರೆಯ ತತ್ವಗಳನ್ನು ತರಲು ಪ್ರಯತ್ನಿಸಿದರು. ಪ್ರಕೃತಿ ತತ್ವ, ರಾಷ್ಟ್ರೀಯ ತತ್ವ, ಪ್ರಣಯ ತತ್ವಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ನವೋದಯ ಸಾಹಿತ್ಯ ನೀಡಲಾರಂಭಿಸಿತು. ರೊಮ್ಯಾಂಟಿಕ್ ಪ್ರಭಾವ ಮತ್ತು ಬದಲಾದ ಸಾಮಾಜಿಕ ವ್ಯವಸ್ಥೆಯಿಂದ ಸಾಹಿತಿಗಳ ಪಾಲಿಗೆ ಮಹಿಳೆ 'ದೇವತೆ'ಯಾದಳು. ಈ ಹಿಂದಿನ ಸಾಹಿತ್ಯದಲ್ಲಿ ದೇಹ ಸೌಂದರ್ಯಕ್ಕೆ ಮಾತ್ರ ಸೀಮಿತವಾಗಿದ್ದ ಮಹಿಳೆ ನವೋದಯ ಸಾಹಿತ್ಯದಲ್ಲಿ ಭಿನ್ನ ರೂಪವನ್ನು ಪಡೆಯಲು ಆರಂಭಿಸಿದಳು. ಮಹಿಳೆಯ ಅಶ್ಲೀಲತೆಯ ಸೋಂಕಿಲ್ಲದ ಸೌಂದರ್ಯ, ಅವಳ ಮೃದು ಸ್ವಭಾವ, ಅವಳ ಮುಗ್ಧತೆ, ಅವಳ ಪ್ರೀತಿ, ಪ್ರೇಮ ಅವಳ ಸರಳತನ, ಅವಳ ತಾಯ್ತನ ಮೊದಲಾದವು ನವೋದಯ, ಸಾಹಿತ್ಯದಲ್ಲಿ ವರ್ಣಿತವಾಯಿತು. ಹಳೆಗನ್ನಡ ಸಾಹಿತ್ಯದಲ್ಲಿ ಕೀಳಾಗಿ ಕಾಣಲಾಗುತ್ತಿದ್ದ ಮಹಿಳೆಗೆ ನವೋದಯ ಸಾಹಿತ್ಯದಲ್ಲಿ ತಕ್ಕಮಟ್ಟಿನ ಸ್ಥಾನ ದೊರೆಯಲಾರಂಭಿಸಿತು.

ಕನ್ನಡದ ಮೊದಲ ಸಾಮಾಜಿಕ ಕಾದಂಬರಿಗಳಲ್ಲಿ ಭಾರತದಲ್ಲಿ ನಡೆದ ಸುಧಾರಣಾವಾದಿ ಚಳುವಳಿಗಳ ಪ್ರಭಾವವನ್ನು ಗಮನಿಸಬಹುದಾಗಿದೆ.ಧಾರ್ಮಿಕ ಮೂಢತೆಗಳನ್ನು ಖಂಡಿಸುವುದು, ನಮ್ಮ ಸಂಸ್ಕೃತಿಯನ್ನು ಪುನರುದ್ಧರಿಸಬೇಕೆನ್ನುವ ಭಾವ ಇವುಗಳ ಜೊತೆಗೆ ಇಂಗ್ಲಿಷ್ ಶಿಕ್ಷಣದ ಬಗೆಗಿನ ಅತೀವವಾದ ವ್ಯಾಮೋಹವನ್ನು ಇಲ್ಲಿ ಕಾಣಬಹುದಾಗಿದೆ. ಕನ್ನಡದ ಮೊದಲ ಕಾದಂಬರಿಗಳನ್ನು ಲೇಖಕರೇ ರಚಿಸಿದ್ದರೂ, ಆ ಕಾದಂಬರಿಗಳ ಕೇಂದ್ರ ಪಾತ್ರಗಳು ಮಹಿಳೆಯರೇ ಆಗಿದ್ದಾರೆ. ಕನ್ನಡದ ಮೊದಲ ಸಾಮಾಜಿಕ ಕಾದಂಬರಿಯಾದ 'ಇಂದಿರಾಬಾಯಿ' ಮತ್ತು 'ವಾಗ್ದೇವಿ' ಕಾದಂಬರಿಗಳಲ್ಲಿ ಮಠಾಧಿಪತಿಗಳ ಖಂಡನೆ ಇದೆ. ಕೆರೂರು ವಾಸುದೇವಾಚಾರ್ಯರ 'ಇಂದಿರಾ' ಕೃತಿಯಲ್ಲಿ ಪುನರ್ವಿವಾಹದ ಚರ್ಚೆ ಇದೆ. ಎಂ.ಎಸ್ ಪುಟ್ಟಣ್ಣ ನವರ 'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿಯಲ್ಲಿನ ಸೀತಮ್ಮ ಪಾತಿವ್ರತ್ಯ, ವಿಧೇಯತೆ ಮೊದಲಾದ ಸನಾತನ ಸ್ತ್ರೀ ಮೌಲ್ಯಗಳ ಪ್ರತೀಕದಂತಿದ್ದಾಳೆ. ಜೊತೆಗೆ ಈ ಕಾದಂಬರಿಯಲ್ಲಿನ ಆರಾಧಮ್ಮ ತನ್ನ ಮೃತ ಗಂಡನ ಜೊತೆಗೂಡಿ ಜೀವಂತವಾಗಿ ಚಿತೆಯೇರಿ ಮಹಾಸತಿಯಾಗುವ ಸಂದರ್ಭವನ್ನು ಕಾದಂಬರಿಕಾರರು ಸಾಂಪ್ರದಾಯಿಕ ಮನಸ್ಥಿತಿಯಲ್ಲಿಯೇ ಗುರುತಿಸಿದ್ದಾರೆ. ಕೆರೂರು ವಾಸುದೇವಚಾರ್ಯರ 'ಇಂದಿರಾ' ಕಾದಂಬರಿಯು ಇಂಗ್ಲಿಷ್ ಶಿಕ್ಷಣಕ್ಕೆ ತೆರೆದುಕೊಂಡ ಮಹಿಳೆಯರ ಸ್ಥಿತಿಗತಿಗಳನ್ನು ಅನಾವರಣ ಮಾಡುತ್ತದೆ. ಈ ಮೇಲಿನ ಮೊದಲ ಹಂತದ ಕಾದಂಬರಿಗಳು ಕನ್ನಡ ಸಾಹಿತ್ಯದ ನವೋದಯ ಸಂದರ್ಭದಲ್ಲಿ ಮಹಿಳೆಯನ್ನು

ಮಾನವೀಯತೆಯಿಂದ ಕಾಣಬೇಕೆಂಬುದಕ್ಕೆ ಒಂದು ಮಹತ್ವದ ವೇದಿಕೆಯನ್ನು ಒದಗಿಸಿ ಕೊಟ್ಟವು. ನಂತರದ ಸಂದರ್ಭದಲ್ಲಿ ನವೋದಯದ ಪ್ರಾತಿನಿಧಿಕ ಲೇಖಕರೆನಿಸಿಕೊಂಡ ಮಾಸ್ತಿ, ಕುವೆಂಪು, ಕಾರಂತ, ಕೆ.ಎಸ್.ನ. ಪು.ತಿ.ನ, ಬೇಂದ್ರೆ ಈ ಮೊದಲಾದವರು ಮಹಿಳೆಗೆ ಸಾಹಿತ್ಯದಲ್ಲಿ ಪ್ರಮುಖ ಸ್ಥಾನವನ್ನು ನೀಡಿದರು.

ಶಿವರಾಮ ಕಾರಂತರು ಗ್ರಾಮೀಣ ಸಂಸ್ಕೃತಿಯನ್ನು ಪ್ರಧಾನ ಭೂಮಿಕೆಯನ್ನಾಗಿ ಕಾದಂಬರಿಯಲ್ಲಿ ತಂದಿದ್ದಾರೆ. ಹೀಗಾಗಿ ಗ್ರಾಮೀಣ ಮಹಿಳೆಯರ ಕಷ್ಟ ಸುಖಗಳ ಚರ್ಚೆ ಜೊತೆಗೆ ಆ ಮಹಿಳೆಯ ಬದುಕಿನ ಮೌಲ್ಯಗಳ ಉದಾತ್ತೀಕರಣವನ್ನು ಕಾರಂತರು ಮಾಡುತ್ತಾರೆ. ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ನಾಗವೇಣಿ, ಸರಸೋತಿ, ಪಾರೋತಿ, ಸತ್ಯಭಾಮೆ ಇವರೆಲ್ಲಾ ವ್ಯವಸ್ಥೆಯಿಂದ ಒಂದಲ್ಲಾ ಒಂದು ಕಾರಣಕ್ಕಾಗಿ ನೋವನ್ನುಂಡವರೇ ಆಗಿದ್ದಾರೆ. ಈ ಮಹಿಳೆಯರ ನೋವನ್ನು ಆಪ್ತವಾಗಿ ನೋಡುವ ಕಾರಂತರು ಆ ಮಹಿಳೆಯರ ನೋವಿಗೆ ಕಾರಣವಾದ ವ್ಯವಸ್ಥೆಯ ಕ್ರೌರ್ಯವನ್ನು ಗಮನಿಸುವುದಿಲ್ಲ. 'ಕನ್ಯಾಬಲಿ', 'ಸೂಳೆಯಸಂಸಾರ' ಮೊದಲಾದ ಕಾದಂಬರಿಗಳಲ್ಲಿ ಕಾರಂತರು ವೇಶ್ಯಾ ಜೀವನವನ್ನು ಚಿತ್ರಿಸಿದ್ದರೂ ಅವರ 'ಮೈಮನಗಳ ಸುಳಿಯಲ್ಲಿ' ಕಾದಂಬರಿಯು ಇವೆಲ್ಲಕ್ಕಿಂತ ಭಿನ್ನವಾದ ಕೃತಿಯಾಗಿದೆ. ವೇಶ್ಯೆಯ ಬದುಕು ವಿವಿಧ ತಲೆಮಾರಿನಲ್ಲಿ ಪಡೆದುಕೊಂಡ ಅರ್ಥವಂತಿಕೆಯನ್ನು ಈ ಕಾದಂಬರಿ ಅನಾವರಣ ಮಾಡುತ್ತದೆ. ಭವಾನಿ, ಮಂಜುಳೆ, ಚಂದ್ರಿ, ಈ ಮೂರು ತಲೆಮಾರುಗಳ ಒಳಪ್ರವೇಶ ಪಡೆದುಕೊಂಡ ಕಾರಂತರು ಮಹಿಳೆಯ ಮನಸ್ಸನ್ನು ಸೂಕ್ಷ್ಮವಾಗಿ ಗ್ರಹಿಸುವ ಪ್ರಯತ್ನ ಮಾಡಿದ್ದಾರೆ. ಕಾರಂತರ ಕಥನ ಸಾಹಿತ್ಯದ ಮಹಿಳೆಯರು ವ್ಯವಸ್ಥೆಯ ಜೊತೆಗೆ ಸಂಘರ್ಷಕ್ಕಿಂತ ಆ ವ್ಯವಸ್ಥೆಯ ಜೊತೆಗೆ ಹೊಂದಾಣಿಕೆಯನ್ನು ಮಾಡಿಕೊಂಡು ಹೋಗುವ ಮನಸ್ಥಿತಿ ಉಳ್ಳಂತಹವರು. ತಮ್ಮದೇ ಆದ ಚೌಕಟ್ಟಿನಲ್ಲಿ ಕುಟುಂಬವನ್ನು ಮುನ್ನಡೆಸುವ ಭಾತಿ ಇರುವ ಈ ಮಹಿಳೆಯರು ಕೌಟುಂಬಿಕ ನೆಲೆಯಲ್ಲಿ ಬದುಕಿನ ಅರ್ಥವನ್ನು ಗ್ರಹಿಸಬಲ್ಲವರಾಗಿದ್ದಾರೆ.

ಪ್ರೇಮಲಕ್ಷ್ಮಿ, ಪ್ರಾಣಲಕ್ಷ್ಮಿ, ಗೃಹಲಕ್ಷ್ಮಿಯಾಗಿ ಹೆಣ್ಣನ್ನು ಕವಿತೆಗಳಲ್ಲಿ ಚಿತ್ರಿಸಿದ ಕುವೆಂಪು ತಮ್ಮ ಕಾದಂಬರಿಗಳಲ್ಲಿ ಮಹಿಳೆಯನ್ನು ಸಹಜವಾಗಿ ಕಂಡಿದ್ದಾರೆ. 'ಕಾನೂರು ಹೆಗ್ಗಡತಿ'ಯ ಸುಬ್ಬಮ್ಮನ ಸಂಕೀರ್ಣ ವ್ಯಕ್ತಿತ್ವ, ಹೂವಯ್ಯನ ಆತ್ಮ ಸಂಗಾತಿಯಾಗಿ ಕಾಣಿಸಿಕೊಳ್ಳುವ ಮತ್ತು ಅಕ್ಕಮಹಾದೇವಿಯನ್ನು ನೆನಪಿಸುವ ಸೀತೆ 'ಮಲೆಗಳಲ್ಲಿ ಮದುಮಗಳು' ಕೃತಿಯ ಕಾವೇರಿ, ಪೀಂಚಲು, ತಿಮ್ಮಿ, ಸೇಸಿ ಈ ಮೊದಲಾದ ಮಹಿಳೆಯರು ತಮ್ಮ ತಮ್ಮ ಚೌಕಟ್ಟಿನಲ್ಲಿ ಓದುಗರ ಗಮನ

ಸೆಳೆಯುತ್ತಾರೆ. ಮೇಲ್ಜಾತಿಯ ಮಹಿಳೆಯರಿಗೆ ಸರಿಸಮಾನರಾಗಿ ಕೆಳ ಜಾತಿಯ ಮಹಿಳೆಯರು ತಮ್ಮ ಬದುಕಿನ ನಡೆಯಿಂದ ವಿಶಿಷ್ಟವಾದ ಆಯಾಮವನ್ನು ಪಡೆದುಕೊಳ್ಳುತ್ತಾರೆ.

ಪಾತಿವ್ರತ್ಯವು ಮಾಸ್ತಿಯವರ ಕಥನ ಸಾಹಿತ್ಯದಲ್ಲಿ ಬಹು ಮುಖ್ಯವಾದ ಮೌಲ್ಯವಾಗಿ ಕಂಡು ಬರುತ್ತದೆ. 'ಶೇಷಮ್ಮ' ಕಾದಂಬರಿಯ ಶೇಷಮ್ಮ, 'ನಿಜಗಲ್ಲಿನ ರಾಣಿ' ಕಥೆಯ ಗಿರಿಜವ್ವೆ, 'ಒಂದು ಕಾಮನ ಕತೆ'ಯ ಸಾವಿತ್ರಮ್ಮ, 'ಚೆನ್ನಮ್ಮ', ಕತೆಯ ಚೆನ್ನಮ್ಮ ಈ ಮೊದಲಾದವರೆಲ್ಲಾ ಮಹಿಳೆಗೆ 'ಪಾತಿವ್ರತ್ಯ' ಬಹು ಮುಖ್ಯವಾದ ಮೌಲ್ಯ ಎಂದು ಬಾಳಿ ತೋರಿಸಿದವರು. ಸನಾತನ ಆದರ್ಶವನ್ನು ಮಹಿಳೆ ಒಬ್ಬಳಿಗೆ ಆರೋಪಿಸಿ ಅದೇ ಆಕೆಯ ಬದುಕಿನ ನಿಜವಾದ ಮೌಲ್ಯ ಎಂದು ಬಿಂಬಿಸುವ ಮಾಸ್ತಿಯವರು ತಮ್ಮ ಸಮಕಾಲೀನ ಬರಹಗಾರರಂತೆ ಮಹಿಳೆಯ ಸಂಘರ್ಷ ಮತ್ತು ಅದಕ್ಕೆ ಕಾರಣ ಇವುಗಳ ಚರ್ಚೆಯನ್ನು ಮಾಡಲಿಲ್ಲ. ಬದಲಿಗೆ ಮಹಿಳೆಯನ್ನು ಪಾತಿವ್ರತ್ಯ, ತಾಯ್ತನದ ಆದರ್ಶಗಳಲ್ಲಿ ಬಂಧಿಸಿಡುವ ಕೆಲಸ ಮಾಡಿದರು.

೧೮೮೭-೧೯೫೦ರ ಅವಧಿಯಲ್ಲಿ ಕನ್ನಡ ನಾಡಿನಲ್ಲಿ ಸ್ವಾತಂತ್ರ್ಯ ಚಳುವಳಿ ಮತ್ತು ಸುಧಾರಣಾ ಚಳುವಳಿಗಳು ಸಕ್ರಿಯವಾಗಿತ್ತು. ಅಂದಿನ ಸಮಾಜ ಮಹಿಳೆಯರ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿತ್ತು. ಅಂದಿನ ಮಹಿಳೆಯರು ತಮ್ಮ ಬದುಕಿನ ಏಕಾನತೆಯನ್ನು ಮರೆಯಲು ಸಾಹಿತ್ಯ ರಚನೆಗೆ ಮುಂದಾದರು. ತಿರುಮಲಾಂಬ, ಕಲ್ಯಾಣಮ್ಮ ಮೊದಲಾದವರನ್ನು ಉಳಿದು ಅನೇಕ ಮಹಿಳೆಯರಿಗೆ ಸಾಹಿತ್ಯ ರಚನೆಯಂತಹ ಮಹತ್ವದ ಕೆಲಸ ಮಾಡುತ್ತಿದ್ದೇವೆ ಎಂಬ ಅರಿವಿರಲಿಲ್ಲ. ಆದರೆ ಸಾಹಿತ್ಯ ರಚನೆಯನ್ನು ಗಂಭೀರ ವಿಷಯವನ್ನಾಗಿ ಸ್ವೀಕರಿಸಿದ ಲೇಖಕಿಯರ ಕಥನ ಸಾಹಿತ್ಯದಲ್ಲಿ ಕೌಟುಂಬಿಕ ಮೌಲ್ಯ ಪ್ರಧಾನ ವಸ್ತುವಾಗಿದೆ. ನಂಜನಗೂಡು ತಿರುಮಾಲಾಂಬ, ಸಾವಿತ್ರಿದೇ ನಾಯ್ಡು ಪಗಡಾಲ, ಸರಸ್ವತಿಬಾಯಿ ರಾಜವಾಡೆ, ಶಾಂತಾಬಾಯಿ ನೀಲಗಾರ ಈ ಮೊದಲಾದವರು ನವೋದಯ ಕಥನ ಸಾಹಿತ್ಯ ಪರಂಪರೆಯನ್ನು ಶ್ರೀಮಂತಗೊಳಿಸಿದ್ದಾರೆ. ತಿರುಮಲಾಂಬ ಅವರು ಸ್ತ್ರೀಯ ಶಿಕ್ಷಣದಿಂದ ಆಕೆಯ ಉದ್ಧಾರ ಸಾಧ್ಯವೆಂದು ಹೇಳಿದ್ದರು. ವಿವಿಧ ವಿವಾಹಕ್ಕೆ ಪ್ರೋತ್ಸಾಹ ನೀಡದೆ ಸಾಂಪ್ರದಾಯಿಕ ಮನೋಧರ್ಮವನ್ನೇ ಮುಂದುವರೆಸಿದ್ದಾರೆ. ಆದರೆ ಮಾಸ್ತಿ ಸಂದರ್ಭದಲ್ಲಿ ಬರೆದಿರುವ ಕೊಡಗಿನ ಗೌರಮ್ಮರವರ 'ಪುನರ್‌ವಿವಾಹ' ಕತೆಯಲ್ಲಿ ವಿಧವಾ ವಿವಾಹದ ಪರವಾಗಿ ನಿಂತಿದ್ದಾರೆ. ಚಂದ್ರಭಾಗಿ ಕೆ.ರೈರವರು ಕೂಡ ವಿಧವೆಯವರಿಗೆ ಉತ್ತಮ ಸ್ಥಾನಮಾನ ದೊರಕಬೇಕೆನ್ನುವ ಪ್ರಗತಿಪರ ವಿಚಾರವನ್ನು

'ಮಂಗಳ ಅಮಂಗಳ' ಕಥೆಯಲ್ಲಿ ತಂದಿದ್ದಾರೆ. ತಿರುಮಲಾಂಬರವರನ್ನು ಹೊರತುಪಡಿಸಿದರೆ ಉಳಿದ ಲೇಖಕಿಯರು ಸಾಂಪ್ರದಾಯಿಕ ಸಮಾಜದ ಧೋರಣೆಯನ್ನು ಧಿಕ್ಕರಿಸಿ ಸಾಹಿತ್ಯವನ್ನು ರಚಿಸಿದ್ದಾರೆ. ಈ ಕಾಲಘಟ್ಟದಲ್ಲಿ ಮಹಿಳಾ ಸಂವೇದನೆ ಸ್ತ್ರೀವಾದಿ ವಿಮರ್ಶೆಗಳ ಬಗ್ಗೆ ಶಿಸ್ತು ಬದ್ಧ ಜ್ಞಾನ ಇಲ್ಲವಾದ್ದರಿಂದ ಅಂದಿನ ಕಾಲಘಟ್ಟದ ಲೇಖಕಿಯರು ತಮಗೆ ಸಿಕ್ಕ ಅವಕಾಶಗಳನ್ನು ಬಳಸಿಕೊಂಡು ಮಹಿಳಾ ಶಿಕ್ಷಣ, ವಿಧವಾ ಸಮಸ್ಯೆ, ವರದಕ್ಷಿಣೆ ಸಮಸ್ಯೆ ಈ ಮೊದಲಾದವುಗಳ ಬಗ್ಗೆ ಚರ್ಚಿಸುತ್ತಾರೆ. ಸಮಕಾಲೀನ ಲೇಖಕರಿಗಿದ್ದ ಅಭಿವ್ಯಕ್ತಿ ಸ್ವಾತಂತ್ರ್ಯ ಮತ್ತು ಸೌಲಭ್ಯಗಳು ಈ ಲೇಖಕಿಯರಿಗೆ ಇರದೆ ಹೋದರೂ ತಮ್ಮ ವ್ಯಾಪ್ತಿಯಲ್ಲಿ ನವೋದಯ ಕಾಲಘಟ್ಟಕ್ಕೆ ಇವರು ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ.

ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ನವೋದಯ ಕಾಲಘಟ್ಟದ ಮಹಿಳಾ ಸಾಹಿತ್ಯವು ಅನನ್ಯವಾಗಿದೆ. ಹೆಣ್ಣು ಬರೆಯುವುದಕ್ಕೆ ಈ ಕಾಲಘಟ್ಟ ಅವಕಾಶ ಮಾಡಿಕೊಟ್ಟಿತು. ಮಹಿಳೆಯ ಉನ್ನತಿಕರಣಕ್ಕೆ ಈ ಕಾಲಘಟ್ಟದ ಸಾಹಿತ್ಯವು ಪ್ರೇರಣೆಯನ್ನು ಒದಗಿಸಿ ಕೊಟ್ಟರೂ ಸನಾತನ ಹಿಂದೂ ಸ್ತ್ರೀತ್ವದ ಕಲ್ಪನೆಗೆ ಅದು ವಿರೋಧವಾಗಿರ ಬಾರದೆಂದು ಆಶಿಸಿತು. ಹೆಣ್ಣಿನ ಬಾಲ್ಯವಿವಾಹ, ಬಾಲವೈಧವ್ಯ, ಈ ಮೊದಲಾದವುಗಳಿಗೆ ಈ ಕಾಲಘಟ್ಟ ವಿರೋಧ ತೋರಿದರೂ ಮರುಮದುವೆಗೆ ಅವಕಾಶ ನೀಡಲಿಲ್ಲ. ಕನ್ನಡದ ಮೊದಲ ಮಹಿಳಾ ಕಾದಂಬರಿಯಾದ 'ಸದ್ಗುಣಿ ಕೃಷ್ಣಾಬಾಯಿ' ಅಥವಾ 'ಉತ್ತಮ ಗೃಹಿಣಿ'ಯಲ್ಲಿ ಹೆಣ್ಣು ವಿದ್ಯಾವಂತೆಯಾಗಿ ವಿಚಾರವಂತಳಾದರೂ, ಆಕೆ ಕೌಟುಂಬಿಕ ಮೌಲ್ಯಗಳಿಗೆ ವಿರುದ್ಧವಾಗಿ ನಡೆಯಬಾರದೆನ್ನುವ ನೀತಿಯನ್ನು ವ್ಯಕ್ತಪಡಿಸುತ್ತದೆ.

ತಿರುಮಲಾಂಬಾರವರನ್ನು ಒಳಗೊಂಡಂತೆ ನವೋದಯದ ಲೇಖಕಿಯರು ತಮ್ಮ ಕಥನ ಸಾಹಿತ್ಯದಲ್ಲಿ ಸಮಕಾಲೀನ ಲೇಖಕರಿಗಿಂತ ಭಿನ್ನವಾದ ಹಾದಿಯನ್ನು ಹಿಡಿಯಲಿಲ್ಲ. ಇಬ್ಬರು ಕೂಡ ಸಾಂಪ್ರದಾಯಿಕ ಸಮಾಜದ ಮೌಲ್ಯಗಳನ್ನು ಮಹಿಳೆಯ ಮೇಲೆ ಆರೋಪಿಸಿದರು. ಸನಾತನ ಹಿಂದೂ ಸ್ತ್ರೀ ಮಾದರಿಗೆ ನವೋದಯ ಕಾಲಘಟ್ಟದ ಲೇಖಕ ಮತ್ತು ಲೇಖಕಿಯರು ಬದ್ಧರಾಗಿದ್ದರು. ಈ ಕಾಲಘಟ್ಟದ ಮೇಲೆ ಲೇಖಕಿಯರು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ತಾವು ಎರಡನೆಯ ದರ್ಜೆಯವರು ಎಂದು ಭಾವಿಸಿದಂತೆ, ಸಾಹಿತ್ಯದಲ್ಲೂ ಲೇಖಕಿಯರು ತಾವು ಎರಡನೆಯ ದರ್ಜೆಯವರು ಎಂದು ಭಾವಿಸಿದಂತೆ ತೋರುತ್ತದೆ. ಆದ್ದರಿಂದಲೇ ಮಹಿಳೆ ಬಗ್ಗೆ

ಸಮಕಾಲಿನ ಲೇಖಕರು ಅನುಸರಿಸಿದ ಸಿದ್ಧ ಮಾದರಿಯನ್ನೇ ಇವರು ಅನುಸರಿಸಿದ್ದಾರೆ.

"......... ಜಗತ್ತಿನ ಪ್ರತಿಯೊಂದು ವಿಷಯವೂ ಅವನ ಕುಲುಮೆಗೆ ಸೇರಿದೆ. ವರ್ಗ ವೈಷಮ್ಯವನ್ನು ಸಾಹಿತ್ಯ ಕೆರಳಿಸುವುದಿಲ್ಲ. ಆದರೆ ಅದರಿಂದ ಒಂದು ಪಕ್ಷಕ್ಕೆ ಅನ್ಯಾಯವಾಗುತ್ತಿದ್ದರೆ ಅವನು ಶಾಂತನಾಗಿರುವುದಿಲ್ಲ. ಅನ್ಯಾಯ, ಕ್ರೌರ್ಯ, ದಬ್ಬಾಳಿಕೆ ಯಾರಲ್ಲಿ ಕಂಡು ಬಂದರೂ ಅವನು ಸಿಡಿದೇಳುತ್ತಾನೆ.... ಎಲ್ಲ ಸಾಹಿತ್ಯ ಕಲೆಗಳ ಉಗಮಕ್ಕೂ ಸಾಮಾನ್ಯ ಜನತೆಯೇ ಮೂಲ........ ಉತ್ತಮ ಕಲೆಯ ತಾಯಿ ಬೇರು ಸಾಮಾನ್ಯ ಜೀವನದಲ್ಲಿ ಅಡಗಿದೆ... ನವೋದಯದ ಕಾಲದಲ್ಲಿ ಬಂದ ಕನ್ನಡ ಸಾಹಿತಿಗಳು ಜನಪದವನ್ನು ಸಂಪೂರ್ಣವಾಗಿ ನಿರ್ಲಕ್ಷಿಸಲಿಲ್ಲ.... ನವೋದಯ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಪದದೊಂದಿಗೆ ಪೂರ್ಣ ಬೆರೆಯುವ ಮನೋಭಾವನೆಯಿರಲಿಲ್ಲ. ಆದ್ದರಿಂದಲೇ ಅದರಿಂದ ಅತೃಪ್ತಿ ಹುಟ್ಟಿತು........ ನವೋದಯ ಕಾಲದ ಕವಿಗಳು ನಿರ್ವಿಣ್ಣರಾಗಿ ಕುಳಿತಾಗ ಪ್ರಗತಿಶೀಲರು ಜನಕ್ಕೆ ಧೈರ್ಯ, ಸ್ಥೈರ್ಯಗಳನ್ನು ನೀಡಿದರು. ಕಥೆ, ಕವಿತೆ, ಕಾದಂಬರಿ, ಪ್ರಬಂಧ, ಭಾಷಣಗಳ ಮೂಲಕ ಜನತೆಗೆ ಅದರ ಅಮರತ್ವವನ್ನು ಕಣ್ಣು ಬಿಟ್ಟು ನೋಡುವ ನಿಷ್ಠೆಯೂ ಎದುರಿಸುವ ಕೆಚ್ಚು ಕಂಡು ಬಂದವು. ಹಳೆಯ ತತ್ವಗಳು ಪುನರ್ವಿಮರ್ಶೆಗೊಳಗಾದವು. ಪರಂಪರಾಗತವಾಗಿ ಮೌಢ್ಯವನ್ನು ರೂಢಿಸಿಕೊಂಡು ಬಂದಿದ್ದ ಸಾಹಿತ್ಯವನ್ನು ಪ್ರಗತಿಶೀಲರು ಖಂಡಿಸುತ್ತ ಬಂದರು....ಶಾಂತಿ ದುರ್ಬಲತೆಯಿಂದ ದೊರೆಯುವುದಿಲ್ಲ.... ಕ್ರಾಂತಿಯಾದ ನಂತರವೇ ಶಾಂತಿ ಸಾಧ್ಯ ಎಂದೋ ಆಗಿಹೋದ ಹರಿಶ್ಚಂದ್ರ, ರಾಮರ ಸತ್ಯಪ್ರಿಯತೆಯನ್ನು ನೆನೆಯುತ್ತ ಕುಳಿತಲ್ಲಿ ಬಂದ ಲಾಭವೇನು?..... ಸಾಹಿತಿ ತನ್ನ ಸುಪ್ತ ಚೇತನದ ಅರಿವನ್ನುಂಟು ಮಾಡಿಕೊಂಡು ಅದರ ಸಂಪೂರ್ಣ ಪ್ರಯೋಜನವನು ತನ್ನ ನಾಡವರಿಗೆ ಮಾಡಿಕೊಡಬೇಕು ಅವನ ಕ್ರಾಂತಿ ಖಡ್ಗಕ್ಕೆ ಲೋಕದ ತಾಮಸ ಕಳೆಗಳು ನಡುಗಬೇಕು. ಅದು ದುರ್ಬಲರ, ದಲಿತರ, ಬಡವರ ರಕ್ಷಾ ಕವಚವಾಗಬೇಕು, ಆಗಲೇ ಸಾಹಿತ್ಯದ ಸಾರ್ಥಕ್ಯ ಸಾಹಿತಿಯ ಜನ್ಮ ಸಾಫಲ್ಯ..... ನಾವು ರೋಲಾ, ಮಯಾಕೊವಸ್ಕಿ, ಗಾರ್ಕಿ, ಸಿಂಕ್ಲೇರ್ ಅವರ ಕೃತಿಗಳನ್ನು ಓದುವಂತೆ ಹೊರಗಿನವರು ನಮ್ಮ ಕೃತಿಗಳನ್ನು ಓದಬೇಡವೇ?" (ಶೇಷಗಿರಿರಾವ್ ಎಲ್.ಎಸ್, ಹೊಸಗನ್ನಡ ಸಾಹಿತ್ಯ, ೧೯೯೩, ಪುಟ ೫೧ ರಿಂದ ೫೨) ಎಂಬ ಧೋರಣೆಗಳನ್ನು ಇಟ್ಟುಕೊಂಡು ೧೯೪೫ರ ಸುಮಾರಿಗೆ ಪ್ರಗತಿಶೀಲ ಎಂಬ ಸಾಹಿತ್ಯವು ಹುಟ್ಟುಕೊಂಡಿತು.

ರೊಮ್ಯಾಂಟಿಕ್ ಕಾವ್ಯ ಪರಂಪರೆಯ ಪ್ರಭಾವದಿಂದ ನವೋದಯ ಸಾಹಿತ್ಯ ಹುಟ್ಟಿದಂತೆ, ಕಾರ್ಲ್‌ಮಾರ್ಕ್ಸ್ ಪ್ರಭಾವದಿಂದ ಪ್ರಗತಿಶೀಲ ಸಾಹಿತ್ಯ ಹುಟ್ಟಿ ಕೊಂಡಿತು. ತಮ್ಮ ಸುತ್ತ ಇದ್ದ ಕೊಳೆಯನ್ನು ತೊಡೆದು ಹಾಕಲೆಂದೆ ಪ್ರಗತಿಶೀಲರು ರೋಷದಿಂದ ಸಾಹಿತ್ಯವನ್ನು ರಚನೆ ಮಾಡಿದರು. ಸಮಾಜದಲ್ಲಿರುವ ಶೋಷಣೆ, ಅನ್ಯಾಯ ಇವುಗಳ ಬಗ್ಗೆ ಪ್ರಗತಿಶೀಲರು ತೀವ್ರ ಅಸಮಾಧಾನವನ್ನು ವ್ಯಕ್ತಪಡಿಸಿದರು. ಲೇಖಕ ತನ್ನ ಹಗಲುಗನಸಿನ ಕಲಾತ್ಮಕತೆಯಿಂದ ದೂರವಾಗಿ ಸಾಮಾಜಿಕ ಜವಬ್ದಾರಿಯನ್ನು ಬೆಳೆಸಿಕೊಳ್ಳಬೇಕೆಂದು ಪ್ರಗತಿಶೀಲರು ಬಯಸಿದರು. ಆ ಮೂಲಕ ಸಾಹಿತಿ ಸಮಾಜದಲ್ಲಿನ ಅಸಮಾನತೆಯನ್ನು ಹೋಗಲಾಡಿಸಿ ಸಾಮಾಜಿಕ ಕ್ರಾಂತಿಯ ನಾಯಕತ್ವವನ್ನು ವಹಿಸಿಕೊಳ್ಳಬೇಕೆಂದರು ರಷ್ಯಾದ ಕಮ್ಯೂನಿಸ್ಟ್ ಸಾಹಿತ್ಯದಿಂದ ಪ್ರಭಾವಕ್ಕೊಳಗಾದ ಪ್ರಗತಿಶೀಲ ಸಾಹಿತ್ಯ ಕಥನ ಸಾಹಿತ್ಯ ಕ್ಷೇತ್ರದಲ್ಲಿ ಕೃಷಿಯನ್ನು ಮಾಡಿತು. ಕಾವ್ಯ ಇಲ್ಲಿ ಹೆಚ್ಚಾಗಿ ಕಂಡುಬರಲಿಲ್ಲ.

ನವೋದಯ ಸಾಹಿತ್ಯಕ್ಕೆ ಪ್ರತಿಯಾಗಿ ಬಂದ ಪ್ರಗತಿಶೀಲ ಕಾಲಘಟ್ಟವು ಕನ್ನಡ ಸಾಹಿತ್ಯದ ಚಿಂತನಾಕ್ರಮಕ್ಕೆ ಹೊಸ ಭಾಷ್ಯವನ್ನು ಬರೆಯಿತು. ರಷ್ಯಾದ ಲೇಖಕರು ಚಿಂತಕರು ಮಾರ್ಕ್ಸ್‌ನ ಸಮಾಜವಾದೀ ಸಿದ್ಧಾಂತಗಳಿಂದ ಪ್ರೇರಣೆಗೊಂಡ ಈ ಕಾಲಘಟ್ಟದ ಸಾಹಿತ್ಯವು ಕಾರ್ಮಿಕರ ಸಮಸ್ಯೆ, ವೇಶ್ಯಾವೃತ್ತಿಗೆ ಬಂದ ಅಮಾಯಕ ಹೆಣ್ಣುಗಳ ಪರಿಸ್ಥಿತಿ ಈ ಮೊದಲಾದವುಗಳನ್ನು ಕಥಾವಸ್ತುವನ್ನಾಗಿಸಿದವು. ಅ.ನ.ಕೃ., ತ.ರಾ.ಸು, ಬಸವರಾಜ ಕಟ್ಟಿಮನಿ, ನಿರಂಜನ, ಚದುರಂಗ ಮುಂತಾದ ಸಾಹಿತಿಗಳು ಈ ಮೇಲಿನ ವಸ್ತುವನ್ನು ಕೇಂದ್ರವಾಗಿಟ್ಟುಕೊಂಡರು. ಅ.ನ.ಕೃ ಅವರ ಸಾಹಿತ್ಯದಲ್ಲಿ ಮಹಿಳಾ ಸಮಸ್ಯೆಗಳು ಕೇಂದ್ರ ವಾದರೂ ಪುರುಷನಿಂದಲೇ ಆಕೆಯ ಉದ್ಧಾರ, ಸಾಧ್ಯ ಎಂಬಂತೆ ಅಭಿವ್ಯಕ್ತಿಸುತ್ತಾರೆ. ತ.ರಾ.ಸು ಅವರ ಕಥನಾ ಸಾಹಿತ್ಯದಲ್ಲಿ ಹೆಣ್ಣು ಲೈಂಗಿಕ ಆಕರ್ಷಣೆಯಲ್ಲಿ ಕಳೆದು ಹೋಗುತ್ತಾಳೆ. 'ಚಂದನದಗೊಂಬೆ', 'ಕೇದಿಗೆಯವನ', 'ಬಿಡುಗಡೆಯ ಬೇಡಿ' ಕಾದಂಬರಿ ಗಳಲ್ಲಿ ಗಟ್ಟಿ ಹೆಣ್ಣಿನ ಚಿತ್ರಣವಿದ್ದರೂ ಹೆಣ್ಣಿನ ತ್ಯಾಗ, ಪಾತಿವ್ರತ್ಯ ಇತ್ಯಾದಿ ಸನಾತನ ಮೌಲ್ಯಗಳಲ್ಲಿ ಅದು ಕರಗಿಹೋಗುತ್ತದೆ. ಇದೇ ಕಾಲಘಟ್ಟದಲ್ಲಿ ಬಂದ ಎಂ.ಕೆ. ಇಂದಿರ, ವಾಣಿ, ತ್ರಿವೇಣಿ, ಅನುಮಪ ನಿರಂಜನ ಮುಂತಾದ ಲೇಖಕಿಯರು ಮಹಿಳೆಯರ ಸಮಸ್ಯೆ ಪರವಾಗಿ ನಿಲ್ಲುತ್ತಾರೆ. ವೇಶ್ಯಾ ಸಮಸ್ಯೆ, ವಿವಾಹ, ಪುರುಷರ ಲೈಂಗಿಕ ದಬ್ಬಾಳಿಕೆ, ನವಿರಾದ ಗಂಡು-ಹೆಣ್ಣಿನ ಪ್ರೀತಿ-ಪ್ರೇಮ, ಅತ್ಯಾಚಾರಕ್ಕೆ ಒಳಗಾದ ಹೆಣ್ಣೊಬ್ಬಳ ಮಾನಸಿಕ ಪರಿಸ್ಥಿತಿ ಈ ಮೊದಲಾದವು ಕಥನ ಸಾಹಿತ್ಯದ ಮುಖ್ಯ ಭೂಮಿಕೆಯಲ್ಲಿದೆ. ಸನಾತನ ಧರ್ಮ ಹಾಗೂ ವಿಚಾರಧಾರೆ ಎರಡರ ಮಿಶ್ರ ಭಾವದಲ್ಲಿದ್ದ ಪ್ರಗತಿಶೀಲ ಕಾಲಘಟ್ಟದ ಲೇಖಕ ಮತ್ತು ಲೇಖಕಿಯರು

ಸಮಸ್ಯೆಯನ್ನು ದಾಖಲೀಕರಣ ಮಾಡಿದ್ದಾರೆ ಹೊರತು ಅದಕ್ಕೆ ಪರಿಹಾರವನ್ನು ನೀಡಲಿಲ್ಲ. ಆದ್ದರಿಂದಲೇ ಈ ಕಾಲಘಟ್ಟದ ಕಥನ ಸಾಹಿತ್ಯದ ಮಹಿಳೆ ಕರುಣೆ, ಅನುಕಂಪಗಳಿಂದ ಹೊರಬಂದಂತಹ ಮಾದರಿಗಳಾಗಿ ಉಳಿದು ಬಿಟ್ಟಳು.

ಸಮಾಜದಲ್ಲಿ ಹೆಣ್ಣು ಎಂಬ ಜೀವವಿದೆ ಎಂಬುದನ್ನು ಈ ಹಿಂದಿನ ಸಾಹಿತ್ಯ ಮರೆತಂತೆ ನಟಿಸಿತ್ತು. ಆಕೆಯನ್ನು ಒಂದಲ್ಲ ಒಂದು ಕಾರಣಕ್ಕಾಗಿ ಬಂಧಿಸಿಡುವ ಕೆಲಸವನ್ನು ಪುರುಷ ಕೇಂದ್ರ ಸಮಾಜ ಮಾಡುತ್ತಿತ್ತು. ಅದೇ ರೀತಿ ಅಂದಿನ ಸಾಹಿತ್ಯ ಕೂಡ ಮಹಿಳೆಯನ್ನು ಚಿತ್ರಿಸತೊಡಗಿತ್ತು. ಆದರೆ ಹೊಸಗನ್ನಡದ ನವೋದಯ ಸಾಹಿತ್ಯವು ಮೊಟ್ಟ ಮೊದಲ ಬಾರಿಗೆ ಹೆಣ್ಣಿಗೂ ಜೀವವಿದೆ ಎಂಬುದನ್ನು ಗುರುತಿಸಿತು. ಮಹಿಳೆಯ ದೇಹ ಸೌಂದರ್ಯ ಕಾವ್ಯದಲ್ಲಿ ಚರ್ಚೆಯಾಗುತ್ತಿದ್ದ ರೀತಿ ನವೋದಯದಲ್ಲಿ ಮರೆಯಾಯಿತು. ಪ್ರೇಯಸಿಯಾಗಿ, ಮಗಳಾಗಿ, ಹೆಂಡತಿಯಾಗಿ, ತಾಯಿಯಾಗಿ ಹೆಣ್ಣನ್ನು ನೋಡುವ ಪ್ರಯತ್ನ ಇಲ್ಲಿ ಆಯಿತು. ರೊಮ್ಯಾಂಟಿಕ್ ಕಾವ್ಯ ಪರಂಪರೆಯಿಂದ ನವೋದಯ ಸಾಹಿತ್ಯ ಪ್ರಭಾವಗೊಂಡಿದ್ದರಿಂದಲೇನೋ ಪ್ರೀತಿ, ಪ್ರೇಮ, ಪ್ರಣಯಗಳಿಗೆ ಹೆಚ್ಚಿನ ಸ್ಥಾನ ದೊರಕಿತು. ಅಶ್ಲೀಲತೆಯ ಸೋಂಕಿಲ್ಲದ ಗಂಡು–ಹೆಣ್ಣಿನ ಪ್ರೀತಿಯನ್ನು ಚರ್ಚಿಸುವಾಗಲೇ ಕವಿಗಳು ಹೆಣ್ಣನ್ನು ವಿಶೇಷವಾಗಿ ಗಮನಿಸುತ್ತಾರೆ. ಪ್ರೇಮದೇವತೆಯಾಗಿ ಆಕೆಯನ್ನು ಚಿತ್ರಿಸುತ್ತಾರೆ. ಹೆಣ್ಣಿಗೂ ಒಂದು ಮನಸ್ಸಿದೆ ಎಂಬ ಅಂಶವನ್ನು ಗುರುತಿಸುವ ಕೆಲಸವನ್ನು ನವೋದಯ ಸಾಹಿತಿಗಳು ಮಾಡಿದರು. ಹೆಣ್ಣಿನ ಸಂಘರ್ಷದ ಬಗ್ಗೆ ಗಮನ ಹರಿಸದ ಈ ಸಾಹಿತಿಗಳು ಹೆಣ್ಣನ್ನು ಪ್ರೇಮದೇವತೆಯಾಗಿ, ತಾಯಿಯಾಗಿ, ಮುಗ್ಧೆಯಾಗಿ ಮಾತ್ರ ಕಂಡರು. ಇದು ಮಹಿಳೆಯ ಪಾಲಿಗೆ ದೊರಕಿದ ಬಹುದೊಡ್ಡ ಗೌರವವಾಗಿತ್ತು. ಉಸಿರುಗಟ್ಟಿಸುವ ವಾತಾವರಣದಿಂದ ತಕ್ಕಮಟ್ಟಿಗೆ ಹೆಣ್ಣು ಬಿಡುಗಡೆ ಹೊಂದಿದ್ದಳು.

ಅ.ನ.ಕೃ., ತ.ರಾ.ಸು., ಬಸವರಾಜ ಕಟ್ಟೀಮನಿ, ಅನುಪಮ ನಿರಂಜನ, ಚದುರಂಗ, ನಿರಂಜನ ಈ ಮೊದಲಾದವರು ಪ್ರಗತಿಶೀಲ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು. ಪುರುಷ ಪ್ರಧಾನ ಸಮಾಜದ ಕ್ರೂರತೆ, ಅದರಲ್ಲಿ ನಲುಗಿ ಹೋಗುತ್ತಿರುವ ಹೆಣ್ಣಿನ ಬದುಕು, ಅರ್ಥಿಕ ಸಮಸ್ಯೆಯ ಕಾರಣದಿಂದ ವೇಶ್ಯೆಯರಾದ ಹೆಣ್ಣು ಮಕ್ಕಳ ಜೀವನ, ವರದಕ್ಷಿಣೆ ಸಮಸ್ಯೆ, ಉದ್ಯೋಗಸ್ಥ ಮಹಿಳೆಯ ಸಮಸ್ಯೆಗಳನ್ನು ಪ್ರಗತಿಶೀಲರು ಸಾಹಿತ್ಯದಲ್ಲಿ ದಾಖಲಿಸುವ ಪ್ರಯತ್ನ ಮಾಡಿದ್ದಾರೆ.

ನಿರಂಜನರ 'ಕೊನೆಯ ಗಿರಾಕಿ' ಎಂಬ ಕಥೆಯು ಕಾಮುಕ ಸಮಾಜದ ಶೋಷಣೆಗೆ ಒಳಗಾದ ಮೂಕಿಯ ಬದುಕನ್ನು ಸಮರ್ಥವಾಗಿ ಕಟ್ಟಿಕೊಡುತ್ತದೆ. ಈಕೆ

ಸಮಾಜದ ಕ್ರೂರತೆಯ ವಿರುದ್ಧ ಧ್ವನಿ ಎತ್ತಲಾರದ ಮಹಿಳೆಯರ ಸಂಕೇತವಾಗಿದ್ದಾಳೆ. ಈ ಮೂಕಿ ಸಮಾಜದ ಕ್ರೌರ್ಯದಿಂದ ಹರೆಯದಲ್ಲಿ ಸತ್ತಾಗ, ಅವಳ ಹೆಣದ ಮೇಲೆ ಗಿಡುಗವೊಂದು ಸುತ್ತು ಹಾಕುತ್ತಿರುತ್ತದೆ. ಆಕೆಯ ಸತ್ತ ದೇಹದ ಮಾಂಸವನ್ನು ಕುಕ್ಕಿ ತಿನ್ನಲು ಹೊಂಚು ಹಾಕುವ ಗಿಡುಗವು ಹೆಣ್ಣು ಸತ್ತರೂ ನಿಲ್ಲದ ಸಮಾಜದ ಶೋಷಣೆಗೆ ಸಂಕೇತವಾಗಿದೆ. ಇಂತಹ ಕಥಾ ವಸ್ತುಗಳು ಪ್ರಗತಿಶೀಲ ಸಾಹಿತ್ಯದಲ್ಲಿ ಸಾಮಾನ್ಯವಾಗಿದೆ. ಸಮಾಜದ ಶೋಷಣೆಗೆ ಒಳಗಾಗಿರುವವರ ಕಥೆಯನ್ನು ಪ್ರಗತಿಶೀಲ ಸಾಹಿತ್ಯವು ಕೇಂದ್ರವಾಗಿ ಇಟ್ಟುಕೊಂಡಿದೆ. ಹೀಗೆ ಪ್ರಗತಿಶೀಲ ಸಾಹಿತಿಗಳು ಸಮಾಜದ ಅಸಮಾನತೆಯನ್ನು, ಶೋಷಣೆ, ದೌರ್ಜನ್ಯವನ್ನು ಅನಾವರಣ ಮಾಡಿದರು. ಆದರೆ ಈ ಸಮಸ್ಯೆಗಳ ವಿರುದ್ಧ ಧ್ವನಿ ಎತ್ತುವ ಕೆಲಸವನ್ನು ಅವರು ಮಾಡಲಿಲ್ಲ. ಈ ಎಲ್ಲ ಸಮಸ್ಯೆಗಳ ಹಿಂದೆ ಅವರಿಗೆ ಮುಖ್ಯವಾಗಿ ಕಾಡಿದ್ದು ಆರ್ಥಿಕತೆ. ಈ ಆರ್ಥಿಕ ವಿಷಮತೆಯ ಮೂಲಕವೆ ಪ್ರಗತಿಶೀಲರು ಸಾಮಾಜಿಕ ಸಮಸ್ಯೆಯ ಅನಾವರಣ ಮಾಡಿದರು. ಮಹಿಳೆಯ ಸಮಸ್ಯೆಗೆ ಕಣ್ಣು ನೀಡಿದರೂ ಅದಕ್ಕೆ ಮಾತುಕೊಡುವ ಕೆಲಸವನ್ನು ಪ್ರಗತಿಶೀಲ ಸಾಹಿತಿಗಳು ಮಾಡಲಿಲ್ಲ.

"ಹತ್ತೊಂಬತ್ತನೆಯ ಶತಮಾನದ ಆಂಗ್ಲ ಕವಿಗಳಾದ ವರ್ಡ್ಸ್‌ವರ್ತ್, ಷೆಲ್ಲಿ, ಕೀಟ್ಸ್ ಮುಂತಾದ ರೊಮ್ಯಾಂಟಿಕ್ ಕವಿಗಳಿಂದ ಪ್ರೇರಿತವಾದ ನಮ್ಮ ಅಧುನಿಕ ಕನ್ನಡ ಕಾವ್ಯ ಆ ಸಂಪ್ರದಾಯದಲ್ಲಿ ತಾನು ಮಾಡಬಹುದಾದಷ್ಟು ಕೆಲಸವನ್ನು ಮಾಡಿ ಮುಗಿಸಿದೆ. ಆ ಸಂಪ್ರದಾಯದ ಸತ್ವ ಈಗ ತೀರಿದೆ. ಅದಕ್ಕೆ ಅವನತಿ ಬಂದಿದೆ. ಅದರ ದೋಷಗಳೆಲ್ಲ ಈಗ ಎದ್ದು ಕಾಣಿಸುತ್ತಿವೆ. ನೆಲದ ಮೇಲೆ ಕಾಲೂರಿ ನಿಂತೇ ನಕ್ಷತ್ರವನ್ನು ತುಡುಕುತ್ತಿದ್ದುದು ಈಗ ನೆಲ ಬಿಟ್ಟು ಮೇಲೇರಿ ವೇದಾಂತದ ಮಂಜಿನಲ್ಲಿ ಮರೆಯಾಗಿ ಹೋಗುತ್ತಿದೆ. ಶಬ್ದಗಳು ಅರ್ಥದ ಸ್ಥಾನವನ್ನು ಆಕ್ರಮಿಸುತ್ತಿವೆ. ಪ್ರತಿಯೊಂದು ಭಾವವೂ ಅನುಭವವೂ ಅತಿ ಸರಳವಾಗಿ ಸತ್ಯದಿಂದ ದೂರ ದೂರ ಹೋಗುತ್ತಿದೆ. ಇಂಥ ಕಾಲದಲ್ಲಿ ಕಾವ್ಯಕ್ಕೆ ಮತ್ತೆ ವಾಸ್ತವದ ರಕ್ತದಾನ ನಡೆಯಬೇಕು. ಕಾವ್ಯದಲ್ಲಿ ಮತ್ತೆ ಕಣ್ಣಿನ ವಾಸನೆ ಹೊಡೆಯಬೇಕು.... ಆಧುನಿಕ ಇಂಗ್ಲೀಷ್ ಕಾವ್ಯದ ಪ್ರಸಿದ್ಧ ಕವಿಗಳಾದ ಇಲಿಯಟ್, ಆಡೆನ್ ಮುಂತಾದವರಿಂದ ನಾವು ಇನ್ನು ಮುಂದೆ ಸ್ಫೂರ್ತಿ ಪಡೆಯಬೇಕಾದ್ದು ಅತ್ಯಗತ್ಯ" (ಶೇಷಗಿರಿರಾವ್.ಎಲ್.ಎಸ್, ಹೊಸಗನ್ನಡ ಸಾಹಿತ್ಯ ,೧೯೬೩, ಪುಟ ೬೪) ಎಂದು ಗೋಪಾಲಕೃಷ್ಣ ಅಡಿಗರ ತಮ್ಮ 'ನಡೆದು ಬಂದ ದಾರಿ' ಕೃತಿಯಲ್ಲಿ ಹೇಳಿ ಹೊಸ ಸಾಹಿತ್ಯ ಪರಂಪರೆಗೆ ಮುನ್ನುಡಿ ಬರೆದರು. ಇವರ ಮಾತಿನ ಪ್ರಭಾವದಿಂದ ಹೊಸಗನ್ನಡ ಸಾಹಿತ್ಯದಲ್ಲಿ ೧೯೫೦ರ ಹೊತ್ತಿಗೆ ನವ್ಯ ಸಾಹಿತ್ಯದ ಹೊಸಗಾಳಿ ಬೀಸಲಾರಂಭಿಸಿತು. ನವೋದಯ ಮತ್ತು ಪ್ರಗತಿಶೀಲ ಸಾಹಿತ್ಯದ ಸತ್ವವು ತೀರಿ

ಹೋಗಿದೆ ಎಂದು ನವ್ಯರು ಬಗೆದು, ತಾವು ಹೊಸ ಸಾಹಿತ್ಯ ಪರಂಪರೆಯನ್ನು ಹುಟ್ಟುಹಾಕಿದರು.

ಅಸ್ತಿತ್ವವಾದ, ಅಸಂಗತವಾದಗಳೆಂಬ ಪಾಶ್ಚಾತ್ಯವಾದಗಳಿದ ಪ್ರಭಾವಗೊಂಡು ಹುಟ್ಟಿದ ನವ್ಯ ಪರಂಪರೆಯು ಕನ್ನಡದಲ್ಲೂ ಇಂತಹ ವಾದಗಳನ್ನು ತರುವ ಪ್ರಯತ್ನ ಮಾಡಿತು. ಸಂಕೇತ, ಪ್ರತಿಮೆ ಮೊದಲಾದವುಗಳನ್ನು ಹೆಚ್ಚಾಗಿ ಬಳಸಿ ಹೇಳುವ ನವ್ಯವು ಮಾತನ್ನು ಸಂಕೀರ್ಣಗೊಳಿಸಿತು. ಇದರಿಂದ ವಸ್ತು, ಭಾಷೆ, ತಂತ್ರಗಳು ಈ ಹಿಂದಿನ ಸಾಹಿತ್ಯಕ್ಕಿಂತ ಸಂಪೂರ್ಣವಾಗಿ ಬದಲಾವಣೆಯಾಯಿತು. ಲಾರೆನ್ಸ್, ಸಾರ್ತ್ರ, ಕಾಫ್ಕ, ಮೊದಲಾದ ಪಾಶ್ಚಾತ್ಯರ ಚಿಂತನೆಗಳ ಪ್ರಭಾವಕ್ಕೆ ನವ್ಯರು ಒಳಗಾದರು. ವ್ಯಕ್ತಿಯ ವೈಯುಕ್ತಿಕ ಬದುಕಿನ ಸಂಘರ್ಷ ಇವರ ಕಥಾವಸ್ತುವಾಯಿತು. ಸಮಾಜಕ್ಕಿಂತ ವ್ಯಕ್ತಿ ಕೇಂದ್ರವಾಗಿದ್ದ ಈ ನವ್ಯ ಸಾಹಿತ್ಯವನ್ನು ದೇಸಾಯಿ, ಚಿತ್ತಾಲ, ಲಂಕೇಶ್, ಅನಂತಮೂರ್ತಿ, ತೇಜಸ್ವಿ, ಕಾನಾರ್ಡ್, ಎ.ಕೆ.ರಾಮಾನುಜನ್ ಮೊದಲಾದ ಸಾಹಿತಿಗಳು ಶ್ರೀಮಂತಗೊಳಿಸಿದರು.

"ಈರುಳ್ಳಿ ಸಿಪ್ಪೆ
ಸುಲಿದಂತೆ
ಕಳಚಿ ಬಿದ್ದ
ಗೌನು
ಸ್ಕರ್ಟು ಬ್ಲೌಸು ಕಾಚ
ಒಂದು ಎರಡು ಮೂರು
ಬ್ರಾ ಬಿಚ್ಚಿ ಮೊಲೆ
ಅರ್ಧ ಕಾಚದ ಕುಂಡೆ
ಹೊಕ್ಕಳು ಬೊಜ್ಜು ಹೊಟ್ಟೆ
ಕುಣಿದವು ಮತ್ತ ಸಂಗೀತಕ್ಕೆ
ಬಿಚ್ಚ ಬಹುದೇ ಅವಳು
ಅದನ್ನೂ" (ಲಂಕೇಶ್ .ಪಿ., ಅಕ್ಷರ ಹೊಸ ಕಾವ್ಯ, ೧೯೭೦, ಪುಟ ೨೨೯)

ಈ ಕಾಲ ಘಟ್ಟದಲ್ಲಿ ಅಸ್ತಿತ್ವದ ಪ್ರಶ್ನೆ, ಆಯ್ಕೆ ಪ್ರಶ್ನೆ, ಸ್ವಾತಂತ್ರ್ಯದ ಪ್ರಶ್ನೆ ಈ ಮೊದಲಾದವು ಮಹಿಳೆಯನ್ನು ಕಾಡಲಾರಂಭಿಸಿದವು. ಸಾಮಾಜಿಕ ಸಂದರ್ಭದ ಈ ಅಂಶಗಳನ್ನು ಕೇಂದ್ರವಾಗಿಟ್ಟುಕೊಂಡು ರಾಜಲಕ್ಷ್ಮಿ.ಎನ್.ರಾವ್ ಮತ್ತು ವೀಣಾ ಶಾಂತೇಶ್ವರ ಅವರು ನವ್ಯ ಕಥನ ಸಾಹಿತ್ಯಕ್ಕೆ ಅನನ್ಯವಾದ ಅಭಿವ್ಯಕ್ತಿಯನ್ನು ನೀಡಿದರು.

ಸಮಕಾಲೀನ ಲೇಖಕರು ಆರಿಸಿಕೊಳ್ಳುವ ವಸ್ತುಗಳನ್ನು ಆರಿಸಿಕೊಂಡು ಪುರುಷರಿಗೆ ವಿರುದ್ಧ ರೀತಿಯಲ್ಲಿ ಮಹಿಳಾ ಪಾತ್ರಗಳನ್ನು ಚಿತ್ರಿಸಿದ್ದಾರೆ ಎಂದು ಮೇಲ್ನೋಟಕ್ಕೆ ಅನ್ನಿಸಿದರೂ ಈ ಲೇಖಕಿಯರು ಸ್ವಾತಂತ್ರ್ಯ, ನಿರ್ಧಾರಕ ಸ್ವಾತಂತ್ರ್ಯಗಳನ್ನು ತಮ್ಮ ಕಥನ ಸಾಹಿತ್ಯದ ಮಹಿಳೆಗೆ ನೀಡಿದರು. ಆ ಮೂಲಕ ಮಹಿಳೆಯ ಅಸ್ತಿತ್ವಕ್ಕೊಂದು ಚೌಕಟ್ಟನ್ನು ನೀಡುವ ಪ್ರಯತ್ನ ಮಾಡಿದರು. ನವೋದಯ ಮತ್ತು ಪ್ರಗತಿಶೀಲ ಕಾಲಘಟ್ಟಗಳಲ್ಲಿ ಕಾಣಲಾಗದ ಮಹಿಳೆಯನ್ನು ನವ್ಯದಲ್ಲಿ ಕಾಣಬಹುದಾಗಿದೆ.

ಪ್ರೇಮದೇವತೆಯಾಗಿ ನವೋದಯ ಸಾಹಿತ್ಯದಲ್ಲಿ ಕಾಣಿಸಿಕೊಂಡ ಮಹಿಳೆ ನವ್ಯದಲ್ಲಿ ಭೋಗದ ವಸ್ತುವಾಗಿ ಕಾಣಿಸಿಕೊಂಡಳು. ನವ್ಯ ಸಾಹಿತಿಗಳು ಯಾವುದೇ ಮುಚ್ಚು ಮರೆಯಿಲ್ಲದೆ ಹೆಣ್ಣಿನ ದೇಹವನ್ನು ಬೆತ್ತಲು ಮಾಡಿದರು. ಲೈಂಗಿಕ ಪ್ರಜ್ಞೆ ನವ್ಯ ಸಾಹಿತ್ಯದ ಪ್ರಮುಖ ಪರಿಕಲ್ಪನೆಯಾಗಿದೆ. ಈ ಪರಿಕಲ್ಪನೆಯನ್ನು ತರುವಾಗಲೆಲ್ಲಾ ನವ್ಯರು ಹೆಣ್ಣಿನ ದೇಹದ ಅಂಗಾಂಗಗಳ ವರ್ಣನೆಯನ್ನು ಎಗ್ಗಿಲ್ಲದೆ ಮಾಡುತ್ತಾರೆ. ನವೋದಯ ಸಾಹಿತ್ಯವು ಪ್ರೇಮದ ಉತ್ಕರ್ಷ ಸ್ಥಿತಿಯನ್ನು ಬಿಂಬಿಸಿದರೆ, ನವ್ಯ ಸಾಹಿತ್ಯ ಕಾಮದ ಸ್ಥಿತಿಯನ್ನು ಬಿಂಬಿಸಿತು. 'ಮುಕ್ತ ಲೈಂಗಿಕತೆ'ಯನ್ನು ನವ್ಯ ಸಾಹಿತ್ಯದ ಪ್ರಧಾನ ಲಕ್ಷಣಗಳಲ್ಲಿ ಒಂದು ಎಂದು ತಿಳಿದಿದ್ದರಿಂದ ನಾಲ್ಕು ಗೋಡೆಗಳ ಮಧ್ಯೆ ಇರಬೇಕಾದ ಲೈಂಗಿಕ ಜೀವನವು ನವ್ಯ ಸಾಹಿತ್ಯದಲ್ಲಿ ಹಸಿಹಸಿಯಾಗಿಯೇ ಬಯಲಾಯಿತು, ಇದಕ್ಕೆ ಮಾಧ್ಯಮವಾಗಿ 'ಮಹಿಳೆ' ಬಳಕೆಯಾದಳು.

ಇದರ ಜೊತೆ ಜೊತೆಗೆ ನವ್ಯ ಸಾಹಿತಿಗಳು ಆಧುನಿಕ ಮನೋಭಾವವಿರುವ ಮತ್ತು ಸ್ವತಂತ್ರಳಾದ ಮಹಿಳೆಯನ್ನು ತಮ್ಮ ಸಾಹಿತ್ಯದಲ್ಲಿ ತರುವ ಪ್ರಯತ್ನ ಮಾಡಿದ್ದಾರೆ. ದೇಸಾಯಿ, ತೇಜಸ್ವಿ, ಚಿತ್ತಾಲ, ಲಂಕೇಶ್, ಕೃಷ್ಣ ಆಲನಹಳ್ಳಿ, ಅನಂತಮೂರ್ತಿಯವರ ಸಾಹಿತ್ಯದಲ್ಲಿ ಇಂತಹ ಮಹಿಳೆಯರನ್ನು ನಾವು ಕಾಣಬಹುದಾಗಿದೆ. ಗಂಡು–ಹೆಣ್ಣಿನ ಸಂಘರ್ಷದ ಸಂಕೀರ್ಣ ಪರಿಸ್ಥಿತಿಯಲ್ಲಿ ಹೆಣ್ಣು ವರ್ತಿಸುವ ರೀತಿ, ಆಕೆಯ ಅಸ್ತಿತ್ವದ ಸ್ವರೂಪ ನವ್ಯ ಸಾಹಿತ್ಯದಲ್ಲಿ ಮೂಡಿಬಂದಿದೆ. ಕಾಮದ ವಸ್ತುವಾಗಿಯೂ ಮತ್ತು ಆಧುನಿಕಳು, ಸ್ವತಂತ್ರಳಾಗಿಯೂ ಮಹಿಳೆ ನವ್ಯ ಸಾಹಿತ್ಯದಲ್ಲಿ ಕಾಣ ಸಿಗುತ್ತಾಳೆ.

"ಅಸ್ಪೃಶ್ಯತೆ, ಜಾತಿ ಪದ್ಧತಿ, ಲಿಂಗಭೇದ ಮತ್ತು ವರ್ಗಭೇದ ನೀತಿಯ ವಿರುದ್ಧ ಹೋರಾಟವನ್ನು ಕಟ್ಟುವುದು ನಮ್ಮ ಮುಖ್ಯ ಉದ್ದೇಶಗಳಲ್ಲಿ ಒಂದು, ಇಲ್ಲಿ ಜನಪದ ನಿಲುವುಗಳಿಗೆ ನಮ್ಮ ಬೆಂಬಲ; ಜನಪರವಾದ ಸಾಂಸ್ಕೃತಿಕ ಹೋರಾಟ ನಮ್ಮ ಮುಖ್ಯ ನೆಲೆ; ಇಂಥ ಒಲವಿನ ಸಾಹಿತ್ಯ ಸೃಷ್ಟಿ ನಮ್ಮ ಹೋರಾಟದ ಮುಖ್ಯ ದಾಖಲೆ" (ಬಂಡಾಯ ಸಾಹಿತ್ಯ ಸಂಘಟನೆಯ ಪ್ರನಾಳಿಕೆ ಮತ್ತು ಸಂವಿಧಾನ, ೧೯೮೭, ಪುಟ ೨) ಇಂತಹ

ಧೋರಣೆಗಳನ್ನು ಇಟ್ಟುಕೊಂಡು ನವ್ಯೋತ್ತರ ಸಾಹಿತ್ಯ ೧೯೭೦ರ ಉತ್ತರಾರ್ಧದಲ್ಲಿ ಹುಟ್ಟಿಕೊಂಡಿತು. ದಲಿತ ಸಂವೇದನೆ, ಮುಸ್ಲಿಂ ಸಂವೇದನೆ, ಮಹಿಳಾ ಸಂವೇದನೆಯಂತಹ ಪ್ರಮುಖ ಸಂವೇದನೆಗಳೂ ಈ ಕಾಲಘಟ್ಟದ ಸಾಹಿತ್ಯದಲ್ಲಿ ಸ್ಥಾನ ಪಡೆಯಿತು. ವಚನಯುಗದಂತೆ ಈ ಕಾಲಘಟ್ಟದಲ್ಲಿಯೂ ಸಹ ಅತಿ ಹೆಚ್ಚಿನ ಸಂಖ್ಯೆಯ ಮಹಿಳೆಯರು ಮತ್ತು ದಲಿತರು ಸಹ ಸಾಹಿತ್ಯದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು. ಪುರುಷ ಪ್ರಧಾನ ವ್ಯವಸ್ಥೆ ಮಹಿಳೆಯ ಮೇಲೆ ಮಾಡುತ್ತಿದ್ದ ಶೋಷಣೆಯ ವಿರುದ್ಧ ಪ್ರತಿಭಟನೆಯ ಧ್ವನಿಗಳ ಈ ಕಾಲಘಟ್ಟದ ಸಾಹಿತ್ಯದಲ್ಲಿ ಕೇಳಿ ಬರುತ್ತವೆ.

ಪುರುಷನು ಎಷ್ಟು ಜನ ಹೆಂಗಸರನ್ನು ಕೂಡ ಮದುವೆಯಾಗಬಹುದು. ಆದರೆ ಸ್ತ್ರೀಯು ಒಬ್ಬನಿಗಿಂತ ಹೆಚ್ಚು ಜನ ಪುರುಷರನ್ನು ವರಿಸುವ ಹಾಗಿಲ್ಲ. ಸ್ತ್ರೀಯು ಒಂದು ವೇಳೆ ಹಾಗೆ ನಡೆದುಕೊಂಡರೆ ನಿಂದನೆಗೆ ಗುರಿಯಾಗುತ್ತಾಳೆ ಎಂದು ಮನು ಅಭಿಪ್ರಾಯ ಪಡುತ್ತಾನೆ. ಈ ಅಸಮಾನತೆಯನ್ನು ಯಾರು ಪ್ರತಿಭಟಿಸಿರಲಿಲ್ಲ. ಆದರೆ ಈ ಅಸಮಾನತೆಯ ವಿರುದ್ಧದ ಪ್ರತಿಭಟನೆಯನ್ನು ಇಲ್ಲಿನ ಸಾಹಿತ್ಯದಲ್ಲಿ ಕಾಣುತ್ತೇವೆ. "ಹೆಂಗಸು ಒಬ್ಬನಿಗಿಂತ ಹೆಚ್ಚು ಜನ ಗಂಡಸರೊಡನೆ ಮಲಗಿದಾಗ 'ಸೂಳೆ' ಎಂದು ಕರೆಯುತ್ತಾರೆ. ಅದೇ ಗಂಡಸು ಒಬ್ಬಳಿಗಿಂಥ ಹೆಚ್ಚು ಹೆಂಗಸಿನೊಡನೆ ಮಲಗಿದಾಗ ಅವನಿಗ್ಯಾವ ಹೆಸರೂ ಇಲ್ಲ..... ಇಷ್ಟಕ್ಕೂ ಈ ಹೆಂಗಸರು ಸೂಳೆಯರಾಗುವುದು ಗಂಡಸರಿಗಾಗಿಯೆ" (ಹಾಲತಿ ಸೋಮಶೇಖರ್, ಮಹಿಳಾ ಚಳುವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನಲೆ – ೨೦೦೭ ಪುಟ –೫೮) ರ ಮಹಿಳೆಯ ಇಂತಹ ಮಾತುಗಳು ಪುರುಷ ಪ್ರಧಾನ ಸಮಾಜದ ವಿರುದ್ಧ ತೋರಿಸಿದ ಪ್ರತಿಭಟನೆಯಾಗಿದೆ. ಹೆಣ್ಣನ್ನು ಶೋಷಿಸುತ್ತಿರುವ ಪುರುಷ ಪ್ರಧಾನ ಸಮಾಜವನ್ನು ತಲೆ ತಗ್ಗಿಸುವಂತೆ ಈ ಮಾತುಗಳು ಮಾಡುತ್ತವೆ. ಹೆಣ್ಣು ಅಬಲೆ ಆಕೆಗೆ ಸ್ವತಂತ್ರವಾಗಿ ಏನನ್ನು ಮಾಡಲು ಸಾಧ್ಯವಿಲ್ಲ. ಆಕೆ ಗಂಡಿನ ಜೊತೆಗೂಡಿ ಆತ ಹೇಳಿದ್ದನ್ನು ಕೇಳಿ ಬದುಕಬೇಕು ಎಂಬ ಪರಂಪರೆಯ ಸಾಂಪ್ರದಾಯಿಕ ಮೌಲ್ಯವನ್ನು ಈ ಸಾಹಿತ್ಯ ಮೀರುತ್ತದೆ.

೧೯೫೭ರಿಂದೀಚೆಗೆ ಸ್ತ್ರೀಯರಿಗೆ ದೊರೆತ ಉನ್ನತ ಶಿಕ್ಷಣ ಮತ್ತು ಉದ್ಯೋಗವಕಾಶಗಳಿಂದ ಸ್ತ್ರೀಯರ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯು ಸುಧಾರಿಸಿದೆ. ಜೊತೆಗೆ ಪಾಶ್ಚಾತ್ಯ ದೇಶಗಳಲ್ಲಿ ಹುಟ್ಟಿ ಪ್ರಪಂಚದಾದ್ಯಂತ ಎಲ್ಲೆಡೆ ಹಬ್ಬಿದ ಸ್ತ್ರೀವಾದಿ ಅಧ್ಯಯನಗಳ ಪ್ರೇರಣೆ ಮತ್ತು ಪ್ರಭಾವ ಮಹಿಳೆಯ ಮೇಲೆ ಆಗಿ ಆಕೆ ಪ್ರಬುದ್ಧಳಾಗಿದ್ದಾಳೆ. ಪರಿಣಾಮವಾಗಿ ಈ ಅವಧಿಯ ಮಹಿಳಾ ಸಾಹಿತ್ಯವು ಗಮನಾರ್ಹ

ವಾದ ಬದಲಾವಣೆಯನ್ನು ಹೊಂದಿದೆ. ಮಹಿಳೆಯರು ತಮ್ಮ ಸ್ಥಿತಿಯನ್ನು ಅರಿತು ತಮ್ಮ ಹಕ್ಕುಗಳ ಬಗ್ಗೆ ಜಾಗೃತವಾಗುವಂತೆ ಈ ಕಾಲಘಟ್ಟವು ಪ್ರಚೋದಿಸಿತು. ಇಷ್ಟೇ ಅಲ್ಲದೇ ತಲತಲಾಂತರದಿಂದಲೂ ಸಾಹಿತ್ಯ ಕೃತಿಗಳಲ್ಲಿ ಹೆಣ್ಣು ಶೋಷಣೆಗೊಳಗಾಗಿರುವುದನ್ನು, ಪುರುಷ ಪ್ರಧಾನ ವ್ಯವಸ್ಥೆಯ ನಯವಂಚನೆಗಳನ್ನು ಮಹಿಳೆಗೆ ಮನದಟ್ಟು ಮಾಡಿತು. ಪರಿಣಾಮವಾಗಿ ವೈದೇಹಿ, ವೇದಾ, ಲಲಿತಾನಾಯಕ್, ಸಾರಾ ಅಬೂಬಕರ್, ಭಾನುಮುಷ್ತಾಕ್ ಮೊದಲಾದ ಮಹಿಳಾ ಸಾಹಿತಿಗಳು ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದರು. ಲೇಖಕಿಯರು ಮಾತ್ರವಲ್ಲದೆ ಲೇಖಕರು ಮಹಿಳೆಯರನ್ನು ನೋಡುವ, ದಾಖಲಿಸುವ ರೀತಿ ಬದಲಾಯಿತು. ಊಳಿಗಮಾನ್ಯ, ಬಂಡವಾಳಶಾಹಿಗಳ ಕ್ರೌರ್ಯಗಳು ಮಹಿಳೆಯರನ್ನು ಶೋಷಿಸಿದ ರೀತಿಯನ್ನು ಕುಂ. ವೀರಭದ್ರ ಅವರು ಅನಾವರಣ ಮಾಡಿದ್ದಾರೆ. ಇದೇ ನಿಟ್ಟಿನಲ್ಲಿ ಗೀತಾನಾಗಭೂಷಣ ಅವರ 'ಮಾಪುರ ತಾಯಿಯ ಮಕ್ಕಳು', ಚೆನ್ನಣ್ಣ ವಾಲೀಕಾರರ 'ಹುಲಿಗೆಮ್ಮ', ಮ.ನ.ಜವರಯ್ಯರವರ 'ಮೂಗಿ' ಕೃತಿಗಳನ್ನು ಗುರುತಿಸ ಬಹುದಾಗಿದೆ. ವ್ಯಕ್ತಿ ಸ್ವಾತಂತ್ರ್ಯಕ್ಕೆ ಪ್ರಾಮುಖ್ಯತೆ ನೀಡಿದ ಈ ಕಾಲಘಟ್ಟದ ಸಾಹಿತ್ಯ ವರ್ಗರಹಿತ, ಜಾತಿರಹಿತ, ಉಭಯಲಿಂಗಿ ಮಹತ್ವದ ಸಮಾಜ ನಿರ್ಮಾಣದ ಆಶಯವನ್ನು ಹೊತ್ತುಕೊಂಡಿದೆ.

'ನ ಸ್ತ್ರೀ ಸ್ವಾತಂತ್ರಮರ್ಹತಿ' ಎಂಬ ಶತ ಶತಮಾನದಿಂದಿರುವ ಶೋಷಣೆಯ ವಿರುದ್ಧ ಇಲ್ಲಿ ಪ್ರತಿಭಟನೆ ವ್ಯಕ್ತವಾಗಿದೆ. ವ್ಯಕ್ತಿಯನ್ನು ಇನ್ನೊಬ್ಬ ವ್ಯಕ್ತಿ ಯಾವುದೇ ವರ್ಗ, ಜಾತಿ, ಲಿಂಗ ತಾರತಮ್ಯವಿಲ್ಲದೆ ಗೌರವಿಸಬೇಕೆಂಬ ಆಶಯವನ್ನು ಹೇಳಿಕೊಟ್ಟ ಸಾಹಿತ್ಯ ಇದಾಗಿದೆ. ಈ ಆಶಯವನ್ನು ಜೀವನದಲ್ಲಿ ಅಳವಡಿಸಿಕೊಳ್ಳಲು ಸಮಾಜದ ಸಾಂಪ್ರದಾಯಿಕ ಮನೋಧರ್ಮವು ಅಡ್ಡಿಯಾಗಿತ್ತು. ಇದನ್ನು ಮೀರುವ ಆತ್ಮವಿಶ್ವಾಸವನ್ನು ಈ ಸಾಹಿತ್ಯ ಸಾಮಾಜಿಕರಿಗೆ ನೀಡಿತು. ಶೋಷಿತರಲ್ಲಿ ಅದರಲ್ಲೂ ಮಹಿಳೆಯರಿಗೆ ಸ್ವಾಭಿಮಾನವನ್ನು ತುಂಬಿಕೊಟ್ಟ ಸಾಹಿತ್ಯ ಇದಾಗಿದೆ.

ಲಿಖಿತ ಸಾಹಿತ್ಯದಂತೆ ಜಾನಪದ ಸಾಹಿತ್ಯದಲ್ಲೂ ಮಹಿಳೆಯನ್ನು ಕುರಿತಾದ ವಿಚಾರಗಳು ದಾಖಲಾಗಿವೆ. ಇಲ್ಲಿನ ಮಹಿಳೆಯರು ಸಹ ಪುರುಷ ಪ್ರಧಾನ ಸಮಾಜದ ಮಹಿಳಾ ವಿರೋಧಿ ಮೌಲ್ಯಗಳನ್ನೇ ಎತ್ತಿ ಹಿಡಿಯುತ್ತಾರೆ. ತಾಯಿ ಮಗಳಿಗೆ ಬೋಧನೆ ಮಾಡುವ ಮೂಲಕ ಇಂತಹ ಆಶಯಗಳನ್ನು ಪೀಳಿಗೆಯಿಂದ ಪೀಳಿಗೆಗೆ ವರ್ಗಾಯಿಸುತ್ತಾರೆ.

"ಅತ್ತೆಯ ಮನೆಯಲ್ಲಿ ಮುತ್ತಾಗಿ ಇರಬೇಕು
ಹೊತ್ತಾಗಿ ನೀಡಿದರೂ ಉಣಬೇಕು। ತವರವರ
ಉತ್ತಮರ ಹೆಸರು ತರಬೇಕು"
"ಅತ್ತ ಮಾವಗಂಜಿ ಸುತ್ತೇಳು ನೆರೆಗಂಜಿ
ಮತ್ತೆ ವಲ್ಲಭನ ನುಡಿಗಂಜಿ । ನಡೆದರೆ
ಎಂಥ ಉತ್ತಮರ ಮಗಳೆಂಬೊ". (ಬರಗೂರು ರಾಮಚಂದ್ರಪ್ಪ (ಸಂ), ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ೨೦೦೬, ಪುಟ ೧೯೨)

ತಾಯಿ ತನ್ನ ಮಗಳಿಗೆ ಹೇಳುವ ಬುದ್ಧಿವಾದಗಳ ಪುರುಷ ಪ್ರಧಾನ ಸಮಾಜವು ಹೆಣ್ಣನ್ನು ನಡೆಸಿಕೊಳ್ಳುವ ರೀತಿಗೆ ಉತ್ತಮ ನಿದರ್ಶನವಾಗಿದೆ. ವ್ಯವಸ್ಥೆ ಇಟ್ಟಂತೆ ಇರುವ ಮಹಿಳೆಯರು ಯಾವುದೇ ಪ್ರತಿಭಟನೆಯನ್ನು ತೋರುವುದಿಲ್ಲ. ಪುರುಷ ಪ್ರಧಾನ ವ್ಯವಸ್ಥೆಯ ಮೌಲ್ಯಗಳನ್ನು ಜನಪದ ಹೆಣ್ಣು ಮಗಳು ಇಲ್ಲಿ ಎತ್ತಿ ಹಿಡಿದಿದ್ದಾಳೆ. ಲಿಖಿತ ಸಾಹಿತ್ಯದಂತೆ ಜಾನಪದ ಸಾಹಿತ್ಯದಲ್ಲೂ ಮಹಿಳಾ ವಿರೋಧಿ ಧೋರಣೆಗಳು ಸಾಕಷ್ಟಿವೆ.

"ಯತ್ರ ನಾರ್ಯಾಸ್ತು ಪೂಜ್ಯಂತೇ ರಮಂತೇ ತತ್ರ ದೇವತಾ" ಎಂದು ಹೇಳಿದ ಭಾರತೀಯ ಸಂಸ್ಕೃತಿಯು ಹೆಣ್ಣನ್ನು ಅಮಾನವೀಯವಾಗಿ ನೋಡಿದೆ. ಪುರುಷ ಪ್ರಧಾನ ಸಮಾಜದಲ್ಲಿ ಆಕೆ ಭೋಗ ಸಾಧನ ಮಾತ್ರವಾಗಿದ್ದಾಳೆ. ಆಧುನಿಕ ಸಮಾಜದ ಪೂರ್ವದಲ್ಲಿ ಗಂಡಿನ ಬೆನ್ನ ಹಿಂದೆಯ ನೆರಳಂತೆ ಬದುಕುವ ಹೆಣ್ಣಿಗೆ ಅಸ್ತಿತ್ವವು ಇಲ್ಲವಾಗಿತು. ಆದರೆ ಆಧುನಿಕ ಸಮಾಜದಲ್ಲಿ ಹೆಣ್ಣಿನ ಪರಿಸ್ಥಿತಿಯು ಹಿಂದಿನದಕ್ಕಿಂತ ಸ್ವಲ್ಪ ಬದಲಾಗಿದೆ. ಆಧುನಿಕ ವಿದ್ಯಾಭ್ಯಾಸವನ್ನು ಪಡೆದು ಮಹಿಳೆ ಆರ್ಥಿಕವಾಗಿ ಸಬಲಳಾಗುತ್ತಿದ್ದಾಳೆ. ಪುರುಷನ ಸಹಾಯವಿಲ್ಲದೆ ತನ್ನದೇ ಆದ ಸುಭದ್ರ ಬದುಕನ್ನು ಕಟ್ಟಿಕೊಳ್ಳುವ ಆತ್ಮವಿಶ್ವಾಸ ಆಕೆಗಿದೆ. ಈ ನಿಟ್ಟಿನಲ್ಲಿ ತಾನು ಎದುರಿಸಬೇಕಾಗಿರುವ ಅನೇಕ ಸವಾಲುಗಳ ಅರಿವು ಕೂಡ ಮಹಿಳೆಗಿದೆ.

"ಸಮಾಜ ಪ್ರಾರಂಭವಾದಾಗಿನಿಂದಲೂ ಮಹಿಳೆಯು ಪುರುಷನ ಗುಲಾಮಳು ಎಂಬ ಭಾವನೆ ಬೆಳೆದದ್ದು ಅತ್ಯಂತ ಬುದ್ಧಿಗೇಡಿತನ" (ಹಾಲತಿ ಸೋಮಶೇಖರ್, ಮಹಿಳಾ ಚಳುವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನಲೆ, ೨೦೦೭, ಪುಟ ೨೯೩) ಎಂದು ಫ್ರೆಡ್ರಿಕ್ ಎಂಗೆಲ್ಸ್ ಹೇಳುತ್ತಾನೆ. ಅಂದಿನಿಂದ ಇಂದಿನವರೆಗೂ ಪುರುಷನ ಈ ಬುದ್ಧಿಗೇಡಿತನ ಅಳಿಯದೆ ಉಳಿದುಕೊಂಡು ಬಂದಿದೆ. 'ಬೆಂಕಿ ತಾಗಿದರೆ ಮತ್ತು ಹಾವು ಕಚ್ಚಿದರೆ ಅದಕ್ಕೆ ಮದ್ದಿದೆ. ಆದರೆ ಮಹಿಳೆಯಿಂದಾದ ಕೇಡನ್ನು ನಿವಾರಿಸುವ ಮದ್ದಿಲ್ಲ' ಮತ್ತು 'ಎರಡು

ಸಂದರ್ಭಗಳಲ್ಲಿ ಮಹಿಳೆಯು ಪುರುಷನ ಪಾಲಿಗೆ ಸಂತೋಷದಾಯಕ ವಾಗುತ್ತಾಳೆ. ಒಂದು ಮದುವೆಯ ದಿನ ಮತ್ತೊಂದು ಆಕೆಯ ಮರಣದ ದಿನ' ಎನ್ನುವಂತಹ ಮಾತು ಪ್ರಾಚೀನ ಕಾಲದಿಂದಲೂ ಗ್ರೀಕ್‌ರಲ್ಲಿ ಇದೆ. ಒಟ್ಟಾರೆ ಪುರುಷನು ಮಹಿಳೆಯನ್ನು ಒಂದು ಕೇಡು ಎಂಬಂತೆ ಅಂದಿನಿಂದ ಇಂದಿನವರೆಗೂ ಭಾವಿಸಿದ್ದಾನೆ. ಅಸೂಯೆ ಸ್ವಂತ ಆಸ್ತಿಯ ಕಲ್ಪನೆ, ಸ್ವಾರ್ಥ ಇದ್ಯಾವುದು ನಾಗರಿಕತೆಯ ಪೂರ್ವದಲ್ಲಿ ಇಲ್ಲವಾದ್ದರಿಂದ ಸ್ತ್ರೀ-ಪುರುಷರ ಭೇದ ಅಂದು ಇರಲಿಲ್ಲ. ಆದರೆ ನಾಗರೀಕತೆ ಬೆಳೆದಂತೆ ಸ್ತ್ರೀಯು ಗಂಡಿನ ಗುಲಾಮಳಾಗಿದ್ದಾಳೆ. ಹೆಣ್ಣನ್ನು ಬಂಧನದಲ್ಲಿರಿಸಿ ಪುರುಷರು ತಾವೊಬ್ಬರೆ ಸಮಾಜವನ್ನು ಮುನ್ನಡೆಸಲು ಮುಂದಾಗಿದ್ದಾರೆ. ಆದರೆ ಸ್ತ್ರೀ-ಪುರುಷರಿಬ್ಬರ ಸಮಾನತೆಯಿಂದಾಗಿ ಮಾತ್ರ ಸ್ವಸ್ತ ಸಮಾಜವನ್ನು ರೂಪಿಸಲು ಸಾಧ್ಯ ಎಂಬ ಸತ್ಯವನ್ನು ಪುರುಷ ಪ್ರಧಾನ ಸಮಾಜವು ಮರೆತಿದೆ.

ಸ್ವಾತಂತ್ರೋತ್ತರ ಭಾರತದ ಸಮಾಜದಲ್ಲಿ ಉನ್ನತ ವಿದ್ಯಾಭ್ಯಾಸವನ್ನು ಪಡೆಯುವ ಹೆಣ್ಣು ಮಕ್ಕಳ ಸಂಖ್ಯೆ ಹೆಚ್ಚಾಗಿದೆ. ಈ ಹಿಂದೆ ಒಬ್ಬರು, ಇಬ್ಬರು ಉನ್ನತ ವಿದ್ಯಾಭ್ಯಾಸ ಪಡೆಯುತ್ತಿದ್ದರೆ ಇಂದು ಅದರ ಸಂಖ್ಯೆ ಲಕ್ಷಗಟ್ಟಲೆ ಆಗಿದೆ. ಉನ್ನತ ವಿದ್ಯಾಭ್ಯಾಸವನ್ನು ಪಡೆದ ಮಹಿಳೆ ಇಂದು ಗಂಡಿಗೆ ಸಮನಾಗಿ ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾಳೆ. ಹೆಣ್ಣಿಗೆ ಹಾಸಿಗೆಯ ಮೇಲೆ ಪ್ರೀತಿ, ತಮ್ಮ ದೇಹ ಮತ್ತು ಆಭರಣಗಳ ಮೇಲೆ ವಿಪರೀತ ಆಸೆ, ಸಿಟ್ಟು, ಮೋಸ, ಮತ್ಸರ, ದುರ್ಗುಣಗಳು ಇರುತ್ತವೆ. ಆದ್ದರಿಂದ ಹೆಣ್ಣನ್ನು ಬಹಳ ಬಿಗುವಿನಲ್ಲಿಡಬೇಕು. ಹೆಣ್ಣು ಯಾವುದೇ ಧಾರ್ಮಿಕ ವಿಧಿಗಳನ್ನು ಅನುಸರಿಸಲು ಅನರ್ಹಳು. ವೇದಗಳನ್ನರಿಯದವಳು, ಪಾವನಳಲ್ಲ. ಅಲ್ಲದೆ ಆಕೆಗೆ ತನ್ನದೆಂಬ ಆಸ್ತಿ ಯಾವುದೂ ಇಲ್ಲ. ಹೆಂಡತಿ, ಮಗಳು ಮತ್ತು ಗುಲಾಮರು ಗಳಿಸಿದ ಆಸ್ತಿ ಯಜಮಾನರ ಸ್ವತ್ತು ಎಂದು ಮನು ಅಭಿಪ್ರಾಯ ಪಟ್ಟಿದ್ದಾನೆ. ಆದರೆ ಇಂದು ಮಹಿಳೆ ಮನುವಿನ ಮಾತನ್ನು ಅಳಿಸಲು ಮುಂದಾಗಿದ್ದಾಳೆ. ಜೀವೋತ್ಪತ್ತಿಯನ್ನು ಮಾತ್ರದವಲ್ಲದೆ ಹೆಣ್ಣು ಭೌತಿಕ ಉತ್ಪಾದನೆಯನ್ನು ಮಾಡಬಲ್ಲಳು ಎಂದು ಇಂದು ತೋರಿಸುತ್ತಿದ್ದಾಳೆ. ಪುರುಷರಂತೆ ನಿಗದಿತ ಸಮಯದ ದುಡಿಮೆ, ನಿಗದಿತ ಉತ್ಪತ್ತಿಯನ್ನು ಮಹಿಳೆ ಇಂದು ಮಾಡುತ್ತಿದ್ದಾಳೆ.

ಮಹಿಳೆಯರು ಹೊರಗೆ ಹೋಗಿ ದುಡಿಯುವುದು ಅಪರಾಧ ಎಂಬಂತೆ ಈ ಹಿಂದೆ ಭಾವಿಸಲಾಗುತ್ತಿತ್ತು. ಆದರೆ ಬದಲಾದ ಆಧುನಿಕ ಸಮಾಜದಲ್ಲಿ ಗಂಡು ಹೆಣ್ಣು ಇಬ್ಬರು ದುಡಿಯುವುದು ಅನಿವಾರ್ಯವಾಗಿದೆ. ಇಡೀ ವಿಶ್ವವನ್ನು 'ಕೊಳ್ಳುಬಾಕ' ಸಂಸ್ಕೃತಿಯು ಆವರಿಸಿದೆ. ಈ ಹಿಂದೆ ಮೂಲಭೂತ ಅಗತ್ಯಗಳನ್ನು ಪಡೆದರೆ ಸಾಕು

ಎಂದು ತಿಳಿಯುತ್ತಿದ್ದ ಮನುಷ್ಯ ಇಂದು ಕಂಡಿದ್ದೆಲ್ಲವನ್ನು ಪಡೆಯಲು ಪ್ರಯತ್ನಿಸುತ್ತಿದ್ದಾನೆ. ಅದಕ್ಕಾಗಿ ಆತನಿಗೆ ಹಣಬೇಕು. ಈ ಹೆಚ್ಚಿನ ಹಣ ಬೇಕೆಂದರೆ ಕುಟುಂಬದಲ್ಲಿ ಗಂಡ ಹೆಂಡತಿಯರಿಬ್ಬರು ದುಡಿಯಬೇಕೆಂಬ ನಿರ್ಧಾರಕ್ಕೆ ಇಬ್ಬರು ಬಂದಿದ್ದಾರೆ. ಆದ್ದರಿಂದ ಮಹಿಳೆ ಇಂದು ಹೊರಗೆ ದುಡಿಯುತ್ತಿದ್ದಾಳೆ. ಇದರಿಂದ ಮನೆಯ ಆರ್ಥಿಕ ಪರಿಸ್ಥಿತಿ ಸುಧಾರಿಸಿದೆ. ಈ ಹಿಂದೆ ಮಹಿಳೆ ಅರ್ಥಿಕವಾಗಿಯೂ ಪುರುಷನನ್ನೇ ಅವಲಂಬಿಸಿದ್ದಳು. ಆದರೆ ಇಂದು ಮಹಿಳೆ ತನ್ನ ಆರ್ಥಿಕ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಪುರುಷನನ್ನು ಅವಲಂಬಿಸಬೇಕಿಲ್ಲ. ತಾನೇ ದುಡಿಯುತ್ತಿರುವುದರಿಂದ ಮಹಿಳೆ ಇಂದು ಆರ್ಥಿಕವಾಗಿ ಸಶಕ್ತಳಾಗಿದ್ದಾಳೆ. ಮನೆಯ ಒಳಗೆ ಮತ್ತು ಹೊರಗೆ ನಿರಂತರವಾಗಿ ದುಡಿಯುವ ಮಹಿಳೆಯ ಎದುರಿಗೆ ಅನೇಕ ಸವಾಲುಗಳಿವೆ. ಸಮಾಜ ಬದಲಾಗಿದೆ. ಆಧುನಿಕಗೊಂಡಿದೆ. ಮಹಿಳೆ ಕೂಡ ಈ ಹಿಂದೆ ತಾನು ಇದ್ದ ಪರಿಸ್ಥಿತಿಯಿಂದ ಹೊರ ಬರುವ ಪ್ರಯತ್ನ ಮಾಡುತ್ತಿದ್ದಾಳೆ. ತಾನು ಕೂಡ ಪುರುಷನಿಗೆ ಔದ್ಯೋಗಿಕ ಕ್ಷೇತ್ರದಲ್ಲಿ ಕಡಿಮೆಯಿಲ್ಲ ಎಂಬುದನ್ನು ಸಾಧಿಸಿ ತೋರಿಸಿದ್ದಾಳೆ. ಆದರೆ ಪುರುಷ ಮಾತ್ರ ಬದಲಾಗಿಲ್ಲ. ಆತನಲ್ಲಿ ಮನೆ ಮಾಡಿದ್ದ ಮಹಿಳಾ ವಿರೋಧಿ ಮನೋಭಾವನೆಗಳು ಇಂದು ಮರೆಯಾಗಿಲ್ಲ. ಆದ್ದರಿಂದಲೇ ಆತ ಸುಶಿಕ್ಷಿತಳಾದ, ಆರ್ಥಿಕವಾದ ಸಬಲಳಾದ ಮಹಿಳೆಯನ್ನು ಇಂದು ಶೋಷಿಸಲು ಮುಂದಾಗಿದ್ದಾನೆ.

ಬಾಲ್ಯವಿವಾಹ, ಸತಿ ಪದ್ಧತಿ, ಬಹುಪತ್ನಿತ್ವ, ಅತ್ಯಾಚಾರ, ಹೆಣ್ಣಿನ ಅಪಹರಣ, ಹೆಣ್ಣನ್ನು ಮಾರುವುದು, ಆಕೆಯ ದೇಹದ ಅಂಗಾಂಗಗಳನ್ನು ಕತ್ತರಿಸುವುದು ಈ ಮೊದಲಾದ ಕಾರಣಕ್ಕಾಗಿ ಈ ಹಿಂದೆ ಹೆಣ್ಣು ನೋವನ್ನು ಪಟ್ಟಿದ್ದಾಳೆ. ಇವುಗಳ ಉಲ್ಲೇಖ ಇತಿಹಾಸ, ಮಹಾಕಾವ್ಯ, ಪುರಾಣಗಳಲ್ಲಿ ನಮಗೆ ಸಿಗುತ್ತದೆ. ಇದೇ ರೀತಿಯ ದೌರ್ಜನ್ಯ ಈ ಆಧುನಿಕ ಸಮಾಜದಲ್ಲಿ ಆಧುನಿಕ ರೂಪ ಪಡೆದುಕೊಂಡಿವೆ. ಹೆಣ್ಣಿನ ಶೀಲ ಕೆಡಿಸುವ ಪುರುಷನಿಗೆ ಯಾವುದೇ ಶಿಕ್ಷೆ ಈ ಹಿಂದೆ ಇರಲಿಲ್ಲ. ಇಂದು ಕೂಡ ಇಲ್ಲವಾಗಿದೆ. ಅತ್ಯಾಚಾರ ಎಂಬುದು ಸರ್ವೇ ಸಾಮಾನ್ಯವಾಗಿದೆ. ಅತ್ಯಾಚಾರಿಗಳಿಗೆ ಕಠಿಣ ಶಿಕ್ಷೆ ನೀಡುವ ಬದಲು, ಸಾಮೂಹಿಕ ಅತ್ಯಾಚಾರಕ್ಕೆ ಬಲಿಯಾದ ಯುವತಿ ದುಷ್ಕರ್ಮಿಗಳ ಬಳಿ "ಅಣ್ಣ ನನ್ನನ್ನು ರಕ್ಷಿಸಿ" ಎಂದು ಬೇಡಿಕೊಂಡಿದ್ದಲ್ಲಿ, ಸರಸ್ವತಿ ಮಂತ್ರ ಜಪಿಸಿದ್ದಲ್ಲಿ ಘಟನೆ ನಡೆಯದಂತೆ ತಡೆಯಬಹುದಿತ್ತು. ಈ ಘಟನೆಯಲ್ಲಿ ಆಕೆಯದ್ದೂ ಅಷ್ಟೇ ಹೊಣೆಯಿದೆ' ಎಂದು ಅತ್ಯಾಚಾರಿಗಳ ಪರವಾಗಿ ಮಾತಾಡುವ ಮಂದಿ ಸಾಕಷ್ಟಿದ್ದಾರೆ. ಅತ್ಯಾಚಾರ, ಆ್ಯಸಿಡ್ ದಾಳಿ, ಲೈಂಗಿಕ ಕಿರುಕುಳ, ವರದಕ್ಷಿಣೆ ಕಿರುಕುಳದಂತಹ ನಾನಾ ತೊಂದರೆಗಳನ್ನು ಆಧುನಿಕ ಸಮಾಜದ ಮಹಿಳೆ

ಅನುಭವಿಸುತ್ತಿದ್ದಾಳೆ. ಆಧುನಿಕ ಸಮಾಜದಲ್ಲಿ ಹೆಣ್ಣಿನ ಮೇಲಾಗುತ್ತಿರುವ ಶೋಷಣೆಯು ವಿಭಿನ್ನ ರೂಪವನ್ನು ಪಡೆದುಕೊಂಡಿದೆ.

ಜಾಗತೀಕರಣ, ಉದಾರೀಕರಣ, ಖಾಸಗೀಕರಣಗಳಿಂದ ಇಂದು ವಿಶ್ವವು ಒಂದು ಚಿಕ್ಕ ಹಳ್ಳಿಯಂತಾಗಿದೆ. ಈ ರೀತಿ ಸಂಕುಚಿತಗೊಂಡಿರುವ ವಿಶ್ವದಲ್ಲಿ ಕೊಳ್ಳುಬಾಕ ಸಂಸ್ಕೃತಿಯು ಕೂಡ ಹೆಚ್ಚಾಗಿದೆ. ಉತ್ಪಾದಕರು ಗ್ರಾಹಕರನ್ನು ಸೆಳೆಯಲು ನಾನಾ ರೀತಿಯ ಕಸರತ್ತುಗಳನ್ನು ನಡೆಸುತ್ತಾರೆ. ಅದರಲ್ಲಿ ಜಾಹೀರಾತು ಕೂಡ ಒಂದಾಗಿದೆ. ಉತ್ಪಾದಕ ತಾನು ಉತ್ಪಾದಿಸಿದ ಸರಕುಗಳ ಬಗ್ಗೆ ಆಕರ್ಷಕವಾಗಿ ಹೇಳಿ ಗ್ರಾಹಕರು ಅದನ್ನು ಖರೀದಿಸುವ ಹಾಗೆ ಮಾಡುತ್ತಾನೆ. ಇದಕ್ಕಾಗಿ ಆತ ಜಾಹೀರಾತಿನ ಮೊರೆ ಹೋಗಿದ್ದಾನೆ. ಜಾಹೀರಾತು ಇಲ್ಲದ ಜಗತ್ತನ್ನು ನಾವು ಊಹಿಸಿಕೊಳ್ಳುವುದಕ್ಕೂ ಸಾಧ್ಯವಿಲ್ಲದ ಹಾಗೆ ಜಾಹೀರಾತು ಇಂದು ಜಗತ್ತನ್ನು ಆವರಿಸಿದೆ. ಲಾಭದಲ್ಲಿ ಕಣ್ಣಿಟ್ಟಿರುವ ಉದ್ಯಮಿ ತನ್ನ ಮತ್ತು ಗ್ರಾಹಕರು ನಡುವಿನ ಸೇತುವೆಯಾಗಿರುವ ಜಾಹೀರಾತನ್ನು ಹೆಚ್ಚು ಆಕರ್ಷಕವಾಗಿಸಲು ಹೆಣ್ಣನ್ನು ಬಳಸಿ ಕೊಳ್ಳುತ್ತಿದ್ದಾನೆ. ಈ ಹಿಂದೆ ಪುರಾಣ, ಮಹಾಕಾವ್ಯಗಳಲ್ಲಿ ಹೆಣ್ಣಿನ ದೈಹಿಕ ಸೌಂದರ್ಯವನ್ನು ವರ್ಣಿಸುತ್ತಿದ್ದಂತೆ, ಇಂದು ಉತ್ಪಾದಕರು ಹೆಣ್ಣಿನ ದೈಹಿಕ ಸೌಂದರ್ಯವನ್ನು ಬಂಡವಾಳವಾಗಿ ಬಳಸಿಕೊಳ್ಳುತ್ತಿದ್ದಾರೆ. ಮಹಿಳೆ ಇಲ್ಲದ ಜಾಹೀರಾತು ಸಾಧ್ಯವೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಮಹಿಳೆ ಇಂದು ಜಾಹೀರಾತಿನ ಪ್ರಪಂಚದಲ್ಲಿ ಭೋಗ ಸಾಧನವಾಗಿ ಬಳಕೆಯಾಗುತ್ತಿದ್ದಾಳೆ.

ಹೆಣ್ಣು ಅಬಲೆ ಎಂಬ ಸಾಂಪ್ರದಾಯಿಕ ಸಮಾಜದ ಮೌಲ್ಯವನ್ನು ಜಾಹೀರಾತು ಎತ್ತಿ ಹಿಡಿಯುತ್ತಿದೆ. ಜಾಹೀರಾತಿನಲ್ಲಿ ಹೆಣ್ಣನ್ನು ಅಬಲೆ ಎನ್ನುವುದಕ್ಕೆ ಸಾಕ್ಷಿ ಒದಗಿಸುವಂತೆ ಘಟನೆಗಳನ್ನು ಜೋಡಿಸಲಾಗುತ್ತಿದೆ. ಉದಾಹರಣೆಗೆ ಒಂದು ಬಟ್ಟೆ ಒಗೆಯುವ ಪೌಡರಿನ ಜಾಹೀರಾತಿನಲ್ಲಿ ಕೆಸರಿನಲ್ಲಿ ಜಾರಿ ಬಿದ್ದ ತಂಗಿಯನ್ನು ಸಮಾಧಾನ ಪಡಿಸಲು ಅಣ್ಣನು ಆ ಕೆಸರಿಗೆ ಹೊಡೆಯುವ ಸನ್ನಿವೇಶವಿದೆ. ಜಾರಿ ಬಿದ್ದ ತಂಗಿಯ ಕೈಯಿಂದಲೆ ಕೆಸರಿಗೆ ಹೊಡೆಸಬಹುದಿತ್ತು. ಆದರೆ ಉತ್ಪಾದಕರು ಸಾಂಪ್ರದಾಯಿಕ ಸಮಾಜದ ವಕ್ತಾರರಾಗಿರು ವುದರಿಂದ ಅದನ್ನು ಅಣ್ಣನ ಕೈಯಿಂದಲೇ ಮಾಡಿಸುತ್ತಾರೆ. ಇಬ್ಬರು ಪುಟ್ಟ ಹುಡುಗ-ಹುಡುಗಿಯನ್ನು ಹಾಕಿಕೊಂಡು ತೆಗೆದ ಜಾಹೀರಾತು ಇದಾಗಿದ್ದರಿಂದ ಸಹಜವಾಗಿಯೇ ಮಕ್ಕಳು ಆಕರ್ಷಿತರಾಗುತ್ತಾರೆ. ಆ ಜಾಹೀರಾತು ಬಿಂಬಿಸುವ ಸಾಂಪ್ರದಾಯಿಕ ಸಮಾಜದ ಅರ್ಥಹೀನ ಮೌಲ್ಯವನ್ನೇ ಮಕ್ಕಳು ಅರ್ಥಮಾಡಿಕೊಂಡು ಸಾಂಪ್ರದಾಯಿಕ ಸಮಾಜದ ಅರ್ಥಹೀನ

ಮೌಲ್ಯಗಳನ್ನು ಬೆಳೆಸುತ್ತಾರೆ. ಇಂತಹ ಅಪಾಯಕಾರಿ ಸಂದೇಶವನ್ನು ಉತ್ಪಾದಕರು ಯಾವುದೇ ವಿವೇಚನೆ ಇಲ್ಲದೆ ಮಾಡುತ್ತಿದ್ದಾರೆ. ಆರ್ಥಿಕತೆಯ ಭಾಗವಾಗಿರುವ ಜಾಹೀರಾತು ನಮ್ಮ ಸಂಸ್ಕೃತಿಯನ್ನು ಬಿಂಬಿಸುತ್ತದೆ. ಮಹಿಳೆಯನ್ನು ಹೀನಾಯವಾಗಿ ಕಾಣುವ ಜಾಹೀರಾತುಗಳು ಮಹಿಳೆಯ ವ್ಯಕ್ತಿತ್ವವನ್ನು ಇಂದು ಹಾಳು ಮಾಡುತ್ತಿವೆ. ಜೊತೆ ಜೊತೆಗೆ ಸಮಾಜದ ಸ್ವಾಸ್ಥ್ಯವನ್ನು ಹಾಳುಮಾಡುತ್ತಿವೆ. ಲಾಭವನ್ನೇ ಕೇಂದ್ರವಾಗಿಟ್ಟುಕೊಂಡ ಉತ್ಪಾದಕನು ತಯಾರಿಸುವ ಜಾಹೀರಾತಿನಿಂದ ಇನ್ನೆಂತಹ ಸ್ವಾಸ್ಥ್ಯ ಸಮಾಜವನ್ನು ನಿರೀಕ್ಷಿಸಲು ಸಾಧ್ಯ?.

ಸಿನಿಮಾ, ಟಿ.ವಿ.ಧಾರಾವಾಹಿಗಳು ಪ್ರಬಲ ಮಾಧ್ಯಮಗಳಾಗಿವೆ. ಸಮಾಜಕ್ಕೆ ಅರಿವಿನ ಗಾಳಿಯನ್ನು ಉಂಟು ಮಾಡಬಲ್ಲ ಮತ್ತು ಸುಲಭವಾಗಿ ಜನರನ್ನು ತಲುಪಬಲ್ಲ ಮಾಧ್ಯಮ ಇವಾಗಿವೆ. ಆದರೆ ಈ ಮಾಧ್ಯಮಗಳಲ್ಲೂ ಮಹಿಳೆ ದ್ವಿತೀಯ ದರ್ಜೆಯ ಪ್ರಜೆಯಾಗಿ ಬಳಕೆಯಾಗಿದ್ದಾಳೆ. ಪತಿಯೇ ಪರದೈವ ಎಂಬಂತೆ, ತ್ಯಾಗಮಯಿಯಂತೆ, ಗಂಡು ಬೀರಿಯಂತೆ ಹೆಣ್ಣು ಇಲ್ಲಿ ಬಿಂಬಿತಳಾಗಿದ್ದಾಳೆ. ಸಮಾಜದಲ್ಲಿನ ಹೆಣ್ಣು ಮಕ್ಕಳಿಗೆ ಧೈರ್ಯ ತುಂಬುವ ಕೆಲಸವನ್ನು ಈ ಮಾಧ್ಯಮಗಳು ಮಾಡದೆ ಸಾಂಪ್ರದಾಯಿಕ ಸಮಾಜದ ಮಹಿಳಾ ವಿರೋಧಿ ಧೋರಣೆಗಳನ್ನು ಎತ್ತಿ ಹಿಡಿಯುತ್ತಿವೆ.

ಇದು ಸಾಲದು ಎಂಬಂತೆ ಈ ಮಾಧ್ಯಮಗಳಲ್ಲಿ ಹೆಣ್ಣನ್ನು ಭೋಗದ ವಸ್ತುವಾಗಿ ಚಿತ್ರಿಸಲಾಗುತ್ತಿದೆ. ಹೆಣ್ಣಿನ ಸೌಂದರ್ಯವನ್ನು ಬಂಡವಾಳವಾಗಿ ಈ ಮಾಧ್ಯಮಗಳು ಹೊಂದಿವೆ. ಅಶ್ಲೀಲತೆ ಎನ್ನಿಸುವಷ್ಟು ಹೆಣ್ಣಿನ ಮೈಮಾಟವು ಮಾಧ್ಯಮಗಳಲ್ಲಿ ವಿಜೃಂಭಿಸುತ್ತಿ. 'ಐಟಂ ಸಾಂಗ್'ಗಳ ಮೂಲಕ ಹೆಣ್ಣನ್ನು ಮತ್ತು ಆಕೆಯ ಮೈಸಿರಿಯನ್ನು ಬಳಸಿಕೊಳ್ಳಲಾಗುತ್ತಿದೆ. ಕಥೆಗೆ ಪೂರಕವಾಗಿಲ್ಲದಿದ್ದರೂ ಈ 'ಐಟಂ ಸಾಂಗ್'ಗಳು ಸಿನಿಮಾಕ್ಕೆ ಬಂದರಂತೆ, ಇರುವುದು ಈಗ ಸಾಮಾನ್ಯವಾಗಿದೆ. ಚಿಕ್ಕ ಮಕ್ಕಳ ಬಾಯಿಯಲ್ಲಿ ಶಿಶುಗೀತೆಗಳಂತೆ ಈ 'ಐಟಂ ಸಾಂಗ್'ಗಳು ನಲಿದಾಡುತ್ತಿವೆ. ಸ್ತ್ರೀವಾದದ ಮೊದಲ ಸ್ತ್ರೀ ಮೇರಿವುಲ್ ಸ್ಟನ್ ಕ್ರಾಫ್ಟ್ 'The vindication of the Rights of women' ಎಂಬ ಪುಸ್ತಕದಲ್ಲಿ "ಗಂಡಸನ ನನ್ನ ಸಹಭಾಗಿಯೆಂದು ಪ್ರೀತಿಸುತ್ತೇನೆ, ಆದರೆ ಅವನ ಭರ್ಜಿಯ ತಿವಿತವನ್ನು ನನ್ನ ಬಳಿ ಬರಲು ಬಿಡುವುದಿಲ್ಲ" (ಹಾಲತಿ ಸೋಮಶೇಖರ್, ಮಹಿಳಾ ಚಳುವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನಲೆ, ೨೦೦೭, ಪುಟ ೩೯೩) ಎಂದು ವಾದಿಸುತ್ತಾಳೆ. ಇಂತಹ ಆಶಯವನ್ನು ಬಿಂಬಿಸುವ ಕೆಲಸವನ್ನು ಮಾಧ್ಯಮಗಳು ಇಂದು ಮಾಡುತ್ತಿಲ್ಲ. ಯಾವುದೇ

ಸಾಮಾಜಿಕ ಪ್ರಜ್ಞೆಯಿಲ್ಲದೆ ಇವು ಇಂದು ಕೆಲಸ ಮಾಡುತ್ತಿರುವುದರಿಂದ ಮಹಿಳೆಯ ಶೋಷಣೆಯಲ್ಲಿ ಯಾವುದೇ ಬದಲಾವಣೆಯನ್ನು ನಾವು ಕಾಣಲಾಗುತ್ತಿಲ್ಲ.

ಆಧುನಿಕ ವಿದ್ಯಾಭ್ಯಾಸವನ್ನು ಪಡೆದ ಮಹಿಳೆ ೨೦ನೇ ಶತಮಾನದ ಆರಂಭದ ವೇಳೆಗೆ ವೈದ್ಯೆಯಾಗಿ, ಗಗನಯಾತ್ರಿಯಾಗಿ, ವಿಮಾನ ಚಾಲಕಿಯಾಗಿ, ಬಸ್ ಕಂಡಕ್ಟರ್‌ಯಾಗಿ, ಆಟೋ ಚಾಲಕಿಯಾಗಿ, ಸೈನಿಕಳಾಗಿ, ವಿಜ್ಞಾನಿಯಾಗಿ, ಶಿಕ್ಷಕಿಯಾಗಿ ಮೊದಲಾದ ಎಲ್ಲಾ ಕ್ಷೇತ್ರಗಳಲ್ಲೂ ಪುರುಷನಿಗೆ ಸರಿಸಮಾನವಾಗಿ ಪ್ರವೇಶವನ್ನು ಬೆಳೆಸಿಕೊಂಡಿದ್ದಾಳೆ. ಸ್ತ್ರೀಯು ಬದಲಾವಣೆಯ ಹಾದಿಯಲ್ಲಿ ಸಾಗುತ್ತಿದ್ದರೂ ಪುರುಷನು ಮಾತ್ರ ಅದೇ ರೀತಿಯ ದಬ್ಬಾಳಿಕೆಯಲ್ಲಿ ತೊಡಗಿದ್ದಾನೆ. ಪುರುಷನು ವಿದ್ಯಾವಂತನಾಗಿದ್ದರೂ, ಉನ್ನತ ಸ್ಥಾನದಲ್ಲಿದ್ದರೂ ಹೆಂಡತಿಯನ್ನು ದೌರ್ಜನ್ಯಕ್ಕೆ ಒಳಪಡಿಸುವ ಮನಸ್ಥಿತಿಯಿಂದ ಆತ ಹೊರಬಂದಿಲ್ಲ. ಬ್ರಿಟನ್‌ನ ಭಾರತೀಯ ಹೈಕಮಿಷನರ್ ಕಚೇರಿಯಲ್ಲಿ ೩ನೇ ಮುಖ್ಯ ಅಧಿಕಾರಿಯಾಗಿದ್ದ ಅನಿಲ್ ವರ್ಮಾ ಕ್ಷುಲ್ಲಕ ಕಾರಣಕ್ಕಾಗಿ ಪತ್ನಿ ಪರೋಮಿತಾಳನ್ನು ಥಳಿಸಿರುವ ಘಟನೆ ಇತ್ತೀಚೆಗೆ ದೊಡ್ಡ ಸುದ್ಧಿಯಾಗಿತ್ತು. ಗಂಡ-ಹೆಂಡತಿ ವಿದ್ಯಾವಂತ ರಾಗಿದ್ದರೂ, ಉದ್ಯೋಗಸ್ಥರಾಗಿದ್ದರೂ ಗಂಡನ ಈ ಹೊಡೆತಕ್ಕೆ ಆತನಿಗಿರುವ ದಬ್ಬಾಳಿಕೆಯ ಮನೋಭಾವವೇ ಕಾರಣವಾಗಿದೆ. ಪುರುಷನ ಈ ಹಿಂಸಾಪ್ರವೃತ್ತಿಯು ಬದಲಾಗಬೇಕಿದೆ. ಪುರುಷನು ಕೂಡ ಹೆಣ್ಣನ್ನು ತನ್ನಂತೆ ಎಂದು ಭಾವಿಸಬೇಕಾಗಿದೆ. ಗಂಡ-ಹೆಂಡತಿಯರ ಸಾಮರಸ್ಯ ಬೆಳೆಯಬೇಕಾಗಿದೆ. ಹೆಣ್ಣು ಆದರ್ಶ ಮಹಿಳೆಯಾಗಿದ್ದಾಳೆ. ಗಂಡು ಆದರ್ಶ ಪುರುಷನಾಗಬೇಕಾದ ಅನಿವಾರ್ಯತೆ ಇಂದು ಇದೆ.

"ಹೆಣ್ಣಿಗೆ ಸ್ವಾತಂತ್ರ್ಯ ಬರದೆ ಯಾವ ಮಣ್ಣಿಗೂ ಸ್ವಾತಂತ್ರ್ಯ ಸಿಕ್ಕದು" (ಅನುಸೂಯ ಕಾಂಬಳೆ (ಸಂ), ವಿಚಾರ ಸಾಹಿತ್ಯ ಮತ್ತು ಹೆಣ್ಣು, ೨೦೦೯, ಪುಟ ೨೦೯) ಎಂದು ದ್ರಾವಿಡ ಚಳುವಳಿಯ ನಾಯಕರಾದ ಪೆರಿಯಾರ್ ರಾಮಸ್ವಾಮಿಯವರು ಹೇಳಿದ್ದಾರೆ. ಆದರಂತೆ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದರೂ ಬಂದಂತಾಗಿಲ್ಲ. ಏಕೆಂದರೆ ಈ ಸಮಾಜದ ಮಹಿಳೆ ಬಂಧನದಲ್ಲಿದ್ದಾಳೆ. "Man is born Fill Free; But Everywhere He Is In Chains" ಎನ್ನುವ ಇಂಗ್ಲಿಷ್ ಮಾತಿನಂತೆ ಮಹಿಳೆಯು ಪುರುಷ ಪ್ರಧಾನ ಸಮಾಜದ ದೌರ್ಜನ್ಯದ ಸರಪಳಿಯಲ್ಲಿ ಬಂಧಿಯಾಗಿದ್ದಾಳೆ. ಇಂದು ಮಹಿಳೆ ತನ್ನನ್ನು ಕಟ್ಟಿ ಹಾಕಿರುವ ಸರಪಳಿಯನ್ನು ಕಿತ್ತೊಗೆಯಲು ಪ್ರಯತ್ನ ಪಡುತ್ತಿದ್ದಾಳೆ. ಅವಳ ಈ ಪ್ರಯತ್ನಕ್ಕೆ ಪುರುಷನು ಕೂಡ ತನ್ನ ಅಹಂಕಾರವನ್ನು ಬಿಟ್ಟು ಜೊತೆಯಾದರೆ ಸ್ತ್ರೀ ಸಮಸ್ಯೆ ಕೊನೆಗಾಣುತ್ತದೆ. ಸ್ತ್ರೀಯನ್ನು ತಾಯಿಯೆಂದು ಗೌರವಿಸಿದ ದೇಶದಲ್ಲಿ ಹೆಣ್ಣನ್ನು

ಅವಮಾನಕರವಾಗಿ ನಡೆಸಿಕೊಳ್ಳಲಾಗುತ್ತಿದೆ. ಇದನ್ನು ಸ್ತ್ರೀ-ಪುರುಷರಿಬ್ಬರು ಸೇರಿ ಪ್ರಾಮಾಣಿಕ ಪ್ರಯತ್ನದಿಂದ ಪರಿಹರಿಸಿಕೊಳ್ಳಬೇಕಾಗಿದೆ. ಇಲ್ಲವಾದರೆ ಸಮಾಜ ಎಂಬ ಯಂತ್ರವು ಪುರುಷ ಎಂಬ ಒಂದು ಚಕ್ರದಿಂದಲೇ ಮುನ್ನೆಡೆಯಲು ಸಾಧ್ಯವಾಗದೆ ನಿಂತಲ್ಲೇ ನಿಲ್ಲಬೇಕಾಗುತ್ತದೆ.

# ಅಧ್ಯಾಯ – ೪

## ಶಾಂತಿನಾಥ ದೇಸಾಯಿ ಅವರ ಕಥನ ಸಾಹಿತ್ಯದಲ್ಲಿ ಮಹಿಳೆ

ಟಿ.ಎಸ್.ಎಲಿಯೆಟ್‌ನ "ಬಂಜೆನೆಲ ಮತ್ತು ಇತರ ಕವನಗಳು" (Waste Land) ಎಂಬ ಕವನ ಸಂಕಲನ ೨೦ನೇ ಶತಮಾನದಲ್ಲಿ ಪ್ರಕಟವಾಯಿತು. ಟಿ.ಎಸ್.ಎಲಿಯೆಟ್‌ನ ಈ ಕವನ ಸಂಕಲನದ ಮುಖ್ಯ ವಸ್ತುವಾದ ನಗರ ಜೀವನದ ನೀರಸತೆ ಇಡೀ ವಿಶ್ವದ ಸಾಹಿತಿಗಳನ್ನು ಕಾಡಲಾರಂಭಿಸಿತು. ವಿಶ್ವ ಸಾಹಿತ್ಯ ಕ್ಷೇತ್ರದಲ್ಲಿ ಟಿ.ಎಸ್.ಎಲಿಯೆಟ್‌ನ Waste Land ಒಂದು ಹೊಸ ಯುಗಕ್ಕೆ ನಾಂದಿಯಾಯಿತು. ಇದಕ್ಕೆ ಕನ್ನಡ ಸಾಹಿತ್ಯ ಕ್ಷೇತ್ರವು ಹೊರತಾಗಿರಲಿಲ್ಲ. ೧೯೫೦ರಲ್ಲಿ ಗೋಕಾಕರು ನವ್ಯ ಸಾಹಿತ್ಯದ ಆಗಮನದ ಅವಶ್ಯಕತೆಯನ್ನು ಮುಂಬಯಿಯ ಸಾಹಿತ್ಯ ಸಮ್ಮೇಳನದಲ್ಲಿ ಹೇಳಿದ್ದೇ, ಕನ್ನಡದಲ್ಲಿ ನವ್ಯ ಸಾಹಿತ್ಯ ಪಂಥವು ಪ್ರವೇಶ ಮಾಡಲು ಸಾಧ್ಯವಾಯಿತು. ೧೯೫೦ರಿಂದಲೇ ಸಣ್ಣಕತೆಗಳನ್ನು ಬರೆಯಲು ಆರಂಭಿಸಿದ ಶಾಂತಿನಾಥ ದೇಸಾಯಿಯವರು ಸಹ ನವ್ಯ ಕಾಲ ಘಟ್ಟದ ಪ್ರಭಾವಕ್ಕೆ ಒಳಗಾದರು. ಪಾಶ್ಚಾತ್ಯ ಪ್ರಭಾವದಿಂದಲೇ ಕನ್ನಡದಲ್ಲಿ ನವ್ಯ ಪರಂಪರೆಯು ಆರಂಭವಾದ್ದರಿಂದ ಇಲ್ಲಿನ ಸಾಹಿತಿಗಳು ಪಾಶ್ಚಾತ್ಯ ವಿದ್ವಾಂಸರ ವಿಚಾರಧಾರೆಗೆ ಸಹಜವಾಗಿಯೇ ಮನಸೋತರು. ಜೊತೆಗೆ ಆ ವಿಚಾರಧಾರೆಗಳನ್ನು ತಮ್ಮ ಸಾಹಿತ್ಯದಲ್ಲಿ ತರಲು ಪ್ರಯತ್ನಿಸಿದರು. ಇತರ ಕನ್ನಡ ನವ್ಯ ಸಾಹಿತಿಗಳಂತೆ ಶಾಂತಿನಾಥ ದೇಸಾಯಿಯವರು ಕೂಡ ಟಾಲ್‌ಸ್ಟಾಯ್, ದಾಸ್ತೊವಸ್ಕಿ, ಕ್ಯಾಥರಿನ್, ಮ್ಯಾನ್‌ಫೀಲ್ಡ್, ಯೂಂಗ್ ಫ್ರಾಯ್ಡ್, ಎಂ.ಎನ್.ರಾಯ್, ಆಲ್ಡ್ ಹಕಸ್ಲೆ, ಸ್ಟೈನ್‌ಬೆಕ್, ಮೊಪಾಸ, ಲಾರೆನ್ಸ್, ರಸೆಲ್, ಕಿನ್ಪೆರಕ್, ಆಂದ್ರೆಜೀಡ, ಕಾನ್ರಾಡ್, ಚೆಕಾವ್, ವರ್ಜಿನಿಯಾ ವುಲ್ಫ್ ಮುಂತಾದ ಪಾಶ್ಚಾತ್ಯ ಸಾಹಿತಿಗಳ ಪ್ರಭಾವಕ್ಕೆ ಒಳಗಾದರು. ದೇಸಾಯಿಯವರೇ ಹೇಳುವಂತೆ ಮುಂಬೈ ಜೀವನದ ನಿಕಟ ಅನುಭವ, ಇಂಗ್ಲಿಷ್ ಸಾಹಿತ್ಯದ ಪರಿಚಯ, ನನ್ನ ಸ್ವಂತ ಮನಸ್ಸಿನ ಜಟಿಲ ಸಂಕೀರ್ಣತೆ, ತೀಕ್ಷ್ಣ ಆತ್ಮ ಪ್ರಜ್ಞೆ, ನನ್ನ ದಾರಿಯನ್ನು ನಾನೇ ಕಂಡುಕೊಳ್ಳುವ ಹವ್ಯಾಸ, ನನ್ನ ಅನುಭವಗಳ ಮುಖಾಂತರ ಹೊಸ ಮೌಲ್ಯಗಳನ್ನು ಶೋಧಿಸುವ ಪ್ರವೃತ್ತಿ ಈ ಎಲ್ಲಾ ಅಂಶಗಳು ಶಾಂತಿನಾಥ ದೇಸಾಯಿಯವರು ನವ್ಯ ಪಂಥದಲ್ಲಿ ತಮ್ಮನ್ನು ತಾವು ಗುರುತಿಸಿಕೊಳ್ಳುವುದಕ್ಕೆ ಸಹಾಯ ಮಾಡಿವೆ. ಆರು ಕಥಾಸಂಕಲನಗಳು, ಐದು ಕಾದಂಬರಿಗಳು, ಎರಡು ನಾಟಕಗಳನ್ನು, ಮೂರು ವಿಮರ್ಶಾ ಗ್ರಂಥಗಳನ್ನು ಶಾಂತಿನಾಥ ದೇಸಾಯಿಯವರು ರಚಿಸಿದ್ದಾರೆ. ಕನ್ನಡದ ಮೊಟ್ಟ ಮೊದಲ ನವ್ಯ

ಕಾದಂಬರಿಕಾರರೆಂದು ಖ್ಯಾತಿಗೊಳಗಾದ ದೇಸಾಯಿಯವರು ನವ್ಯ ಸಾಹಿತ್ಯದಲ್ಲಿ ತಮ್ಮದೇ ಆದ ವಿಶಿಷ್ಟತೆಯನ್ನು ಮೂಡಿಸಿದ್ದಾರೆ.

ಶಾಂತಿನಾಥ ದೇಸಾಯಿಯವರು ತಮ್ಮ ಕಥನ ಸಾಹಿತ್ಯದಲ್ಲಿ ಮನುಷ್ಯನ ವಿವಿಧ ಮುಖಗಳನ್ನು ಪರಿಚಯಿಸಿದ್ದಾರೆ. ಅಸ್ತಿತ್ವವಾದ, ಮಾರ್ಕ್ಸ್‌ವಾದ, ಮನೋವಿಜ್ಞಾನ ಈ ಮೊದಲಾದವುಗಳನ್ನು ತಮ್ಮ ಕಥನ ಸಾಹಿತ್ಯದಲ್ಲಿ ತಂದು ಕೃತಿಯ ಪಾತ್ರಗಳ ಅಂತರಂಗದಲ್ಲಿ ಅಡಗಿರುವ ಸತ್ಯದ ಶೋಧವನ್ನು ಮಾಡುತ್ತಾರೆ. ಮಾನವೀಯತೆ ಮತ್ತು ಅಸ್ತಿತ್ವವಾದವನ್ನು ನಂಬಿರುವ ಇವರು ತಮ್ಮ ನಿಲುವಿನ ಬಗ್ಗೆ " I am a marxist oriented. But I am basically existentialist and humanist. ನಾನು ಯಾವತ್ತೂ ವಾಸ್ತವದಿಂದ ಹೊರತಾದ ಮೌಲ್ಯಗಳನ್ನು ಇಚ್ಛೆಪಡುವುದಿಲ್ಲ. ಮಾರ್ಕ್ಸ್‌ನನ್ನು ಒಪ್ಪಿಕೊಂಡಿದ್ದೇನಾದರೂ ಪೂರ್ಣವಾಗಿ ಮಾನವೀಯತೆ ಹಾಗೂ ಅಸ್ತಿತ್ವವಾದಕ್ಕೆ ಅಂಟಿಕೊಂಡವನು ನಾನು. ಅಂದರೆ, ಮಾರ್ಕ್ಸ್‌ವಾದದಲ್ಲಿ ಅವೆಲ್ಲ ಇಲ್ಲ ಅಂತ ಅರ್ಥವಲ್ಲ. ನನ್ನ ಪ್ರಭಾವದಿಂದಲೇ ಮಾರ್ಕ್ಸ್‌ನನ್ನು ಗಾಢವಾಗಿ ಹಚ್ಚಿಕೊಂಡ ನನ್ನ ಅನೇಕ ವಿದ್ಯಾರ್ಥಿಗಳು ತಮ್ಮ ಎಲ್ಲ ಕ್ಷಣಗಳನ್ನು ಈಗ ಪೂರ್ಣವಾಗಿ ಅವನೊಡನೆ ಗುರುತಿಸಿಕೊಳ್ಳುತ್ತಿದ್ದಾರೆ" (ಶಾಂತಿನಾಥ ದೇಸಾಯಿಯವರ ಸಂದರ್ಶನ, ೧೯೮೮, ತುಷಾರ ಪತ್ರಿಕೆ, ಪುಟ ೧೧) ಎಂದಿದ್ದಾರೆ. ಪಾಶ್ಚಾತ್ಯ ಸಿದ್ಧಾಂತಗಳ ಜೊತೆಗೆ ದೇಸಾಯಿಯವರು ಮಾನವೀಯತೆ ಅಂಶವನ್ನು ಕೇಂದ್ರವಾಗಿಟ್ಟುಕೊಂಡು ಕೃತಿ ರಚನೆ ಮಾಡಿದ್ದಾರೆ. ಆಧುನಿಕತೆಗೆ ತಮ್ಮ ಕೃತಿಗಳಲ್ಲಿ ಪ್ರಮುಖ ಸ್ಥಾನವನ್ನು ನೀಡಿರುವುದರ ಜೊತೆಗೆ ವ್ಯಕ್ತಿಯ ಲೈಂಗಿಕತೆಗೂ ಗಮನವನ್ನು ಹರಿಸಿದ್ದಾರೆ. ಲೈಂಗಿಕತೆಯು ಮನುಷ್ಯ ಸಂಬಂಧಗಳನ್ನು ಮತ್ತಷ್ಟು ಹತ್ತಿರಕ್ಕೆ ತರುತ್ತವೆ ಎಂಬ ಧೋರಣೆಯನ್ನು ಇವರು ಹೊಂದಿದ್ದಾರೆ. ಇವರ ಕಥನ ಸಾಹಿತ್ಯದ ನಾಯಕರು ಅಪರಿಪೂರ್ಣರು. ಯಾವುದೋ ಒಂದು ದ್ವಂದ್ವ, ಅಸಹಾಯಕತೆಯಲ್ಲಿ ಯಾವಾಗಲೂ ನರಳುತ್ತಿರುತ್ತಾರೆ. ಅವರಿಗೆ ಅವರ ಜೀವನದ ದರ್ಶನ ಮಾಡಿಸಲು ಮಹಿಳೆ ಅಲ್ಲಿ ಬಳಕೆಯಾಗುತ್ತಾಳೆ. ಪುರುಷನ ವ್ಯಕ್ತಿತ್ವದ ಬೆಳವಣಿಗೆಗೆ ಮಹಿಳೆ ಕಾರಣಳಾಗುತ್ತಾಳೆ. ಆದ್ದರಿಂದಲೇ ಶಾಂತಿನಾಥ ದೇಸಾಯಿಯವರು ತಮ್ಮ ಕಥನಸಾಹಿತ್ಯದಲ್ಲಿ ಮಹಿಳೆಗೆ ಪ್ರಮುಖ ಸ್ಥಾನವನ್ನು ನೀಡಿದ್ದಾರೆ. ಎಲ್ಲಾ ಬದಲಾವಣೆಗಳನ್ನು ಮಹಿಳೆಯ ಮೂಲಕವೇ ತರುವ ಪ್ರಯತ್ನವನ್ನು ದೇಸಾಯಿಯವರು ಮಾಡುತ್ತಾರೆ.

ಶಾಂತಿನಾಥ ದೇಸಾಯಿಯವರ ಕಥನ ಸಾಹಿತ್ಯದ ನಾಯಕರು ಅನಾಥ ಪ್ರಜ್ಞೆ, ದ್ವಂದ್ವ, ಅಸಹಾಯಕತೆ, ಸಣ್ಣತನ, ದುರ್ಬಲ ಮನಸ್ಸು, ಆದರ್ಶಗಳಿಲ್ಲದ, ಬದುಕನ್ನು

ಗಂಭೀರವಾಗಿ ಸ್ವೀಕರಿಸದ ಭಾವನೆಗಳಿಂದ ಕೂಡಿರುತ್ತಾರೆ. ಇವರ 'ಮುಕ್ತಿ' ಕಾದಂಬರಿಯ ಗೌರೀಶ ಅಸಹಾಯಕತೆ ಮತ್ತು ದ್ವಂದ್ವತೆಯ ಪ್ರತೀಕವಾಗಿದ್ದಾನೆ. 'ಮುಕ್ತಿ'ಯ ಗೌರೀಶ ನವ್ಯ ಕಾದಂಬರಿಯ ಮಾದರಿ ನಾಯಕನಂತೆ ದುರ್ಬಲ ಭಾವನಾಜೀವಿ, ಸಂವೇದನಾಶೀಲತೆ ಯುಳ್ಳವನು. ಶ್ರೀಕಾಂತನ ಪಾತ್ರದಲ್ಲಿರುವ ಅದಮ್ಯವಾದ ಜೀವನೋತ್ಸಾಹ, ತನ್ನ ಅನುಭವಗಳ ಜವಾಬ್ದಾರಿಯನ್ನು ಯಾರ ನೆರವೂ ಇಲ್ಲದೆ ನಿರ್ವಹಿಸುವ ಎದೆಗಾರಿಕೆ, ಅವನ ಪಾತ್ರವನ್ನು ಅಪೂರ್ವವಾಗಿಸುವಂತೆ, ಗೌರೀಶನ ಅಸಹಾಯಕತೆಯನ್ನು ಎತ್ತಿ ತೋರಿಸುತ್ತವೆ. ತನ್ನ ಅನುಭವಗಳಿಗೆ ಒಂದು ಆಕಾರ ಕೊಟ್ಟು ಎದುರಿಗಿಟ್ಟುಕೊಂಡು ನೋಡಬೇಕೆನ್ನುವ ಅವನ ಸಂಕಲ್ಪದಲ್ಲಿ ಧೈರ್ಯಕ್ಕಿಂತ ಕುತೂಹಲವೇ ಹೆಚ್ಚಾಗಿರುವಂತಿದೆ (ಗಿರಡ್ಡಿ ಗೋವಿಂದರಾಜ, ಕಾದಂಬರಿ ವಸ್ತು ಮತ್ತು ತಂತ್ರ, ೧೯೮೭, ಪುಟ ೧೫೨) ಎಂದು ಗಿರಡ್ಡಿ ಗೋವಿಂದ ರಾಜರವರು ತಮ್ಮ 'ಕಾದಂಬರಿ ವಸ್ತು ಮತ್ತು ತಂತ್ರ' ಎಂಬ ಕೃತಿಯಲ್ಲಿ ಗೌರೀಶನ ಪಾತ್ರವನ್ನು ವಿಶ್ಲೇಷಿಸಿದ್ದಾರೆ. ಇಂತಹ ವ್ಯಕ್ತಿತ್ವವನ್ನು ಹೊಂದಿರುವ ಗೌರೀಶನಿಗೆ ಕಾಮಿನಿ ಮತ್ತು ಡಾಲಿ ಮಾರ್ಗದರ್ಶಕರಾಗಿದ್ದಾರೆ. ಗೌರೀಶನ ಮುಗ್ಧತೆಯನ್ನು ಹೋಗಲಾಡಿಸಲು ಕಾಮಿನಿ ಪ್ರಯತ್ನಿಸಿದರೆ, ಡಾಲಿ ತನ್ನ ನಿಷ್ಕಲ್ಮಶ ಮಾತೃ ಹೃದಯದ ಪ್ರೀತಿಯಿಂದ ಗೌರೀಶನ ಬರಡಾದ ಬದುಕಿಗೆ ಜೀವ ತುಂಬುತ್ತಾಳೆ.

ಮಾನವನ ಜೀವನದಲ್ಲಿ 'ಲೈಂಗಿಕತೆ' ಒಂದು ಭಾಗವಾಗಿದೆ. ಈ ಲೈಂಗಿಕತೆ ಸ್ತ್ರೀ-ಪುರುಷರನ್ನು ಒಂದು ಮಾಡುವ ಮೂಲಕ ಸೃಷ್ಟಿ ಕ್ರಿಯೆಗೆ ಕಾರಣವಾಗುತ್ತದೆ. ಶಾಂತಿನಾಥ ದೇಸಾಯಿಯವರ ಕಥನ ಸಾಹಿತ್ಯದಲ್ಲಿ ಲೈಂಗಿಕತೆ ಒಂದು ಪ್ರಮುಖ ಪಾತ್ರ ವಹಿಸುತ್ತದೆ. ಲೈಂಗಿಕತೆ ಎಂದರೆ ಗಂಡು-ಹೆಣ್ಣಿನ ಹಸಿ ಹಸಿ ದೈಹಿಕ ಚಿತ್ರಣ ಎಂದು ಸಾಮಾನ್ಯವಾಗಿ ಅನ್ನಿಸುತ್ತದೆ. ಆದರೆ ಶಾಂತಿನಾಥ ದೇಸಾಯಿಯವರ ಕಥನ ಸಾಹಿತ್ಯದಲ್ಲಿ ಲೈಂಗಿಕತೆ ಕೇವಲ ಗಂಡು-ಹೆಣ್ಣಿನ ದೈಹಿಕ ಚಿತ್ರಣವಲ್ಲ. ಬದಲಿಗೆ ಮನುಷ್ಯ ಸಂಬಂಧವನ್ನು ಮತ್ತಷ್ಟು ಗಟ್ಟಿಯಾಗಿಸುವ ಮಾನವನ ಸಹಜ ಪ್ರವೃತ್ತಿಗಳಲ್ಲಿ ಒಂದು ಎಂಬ ಭಾವ. ಇವರ ಕಥನ ಸಾಹಿತ್ಯದಲ್ಲಿ ವ್ಯಕ್ತವಾಗಿದೆ. ಪರಪುರುಷರ ಜೊತೆಗೆ ಕಾಮಿನಿ ಸಂಬಂಧ ಇಟ್ಟುಕೊಂಡಿದ್ದಾಳೆಂದು ತಿಳಿದ ಗೌರೀಶ ಮುಂಬೈಗೆ ಹೋಗಿ ನೌಕರಿ ಹಿಡಿಯುತ್ತಾನೆ. ಅಲ್ಲಿ ಆತನಿಗೆ ಡಾಲಿ ಪರಿಚಯವಾಗುತ್ತಾಳೆ. ಮಾತೃತ್ವ, ಮಾನವೀಯತೆ, ನಿಷ್ಕಲ್ಮ, ಪ್ರೀತಿಯ ಸಂಕೇತವಾದ ಡಾಲಿ ಗೌರೀಶನಿಗೆ ಹೋಲಿಕೆ ಮಾಡಿದರೆ ಅತ್ಯಂತ ಪ್ರಬುದ್ಧ ಹೆಣ್ಣು. "ಅಯ್ಯೋ.... ನಾನು ಓಡಿ ಹೋಗಬೇಕು. ನನ್ನನ್ನು ನಾನು ರಕ್ಷಿಸಲು ಎಲ್ಲಿಯಾದರೂ ದೂರ ದೂರ ಓಡಿ

ಹೋಗುತ್ತಿರುವೆನೆಂದೇ ನನ್ನ ಭಾವನೆ" (ಶಾಂತಿನಾಥ ದೇಸಾಯಿ, ಮುಕ್ತಿ, ೨೦೦೨, ಪುಟ ೦೮) ಎಂಬ ಪಲಾಯನವಾದಿ ವ್ಯಕ್ತಿತ್ವ ಹೊಂದಿರುವ ಗೌರೀಶನಿಗೆ ಬುದ್ಧಿ ಹೇಳುವ ಪ್ರಯತ್ನವನ್ನು ಡಾಲಿ ಮಾಡುತ್ತಾಳೆ. "ಮುಕ್ತಿ ಎಲ್ಲವನ್ನು ಬಿಟ್ಟು ಓಡಿ ಹೋಗುವುದರಲ್ಲಿಲ್ಲ.... ಪ್ರೀತಿಯಲ್ಲಿ, ದಯಾ, ಧರ್ಮದಲ್ಲಿ, ತ್ಯಾಗದಲ್ಲಿ, ಕ್ಷಮಾ ಬುದ್ಧಿಯಲ್ಲಿ ನಿಜವಾದ ಉದ್ಧಾರವಿದೆ... ತಿಳಿದು ನೋಡು" (ಶಾಂತಿನಾಥ ದೇಸಾಯಿ, ಮುಕ್ತಿ, ೨೦೦೨, ಪುಟ ೨೯) ಎಂದು ಡಾಲಿ ಆತನಿಗೆ ಸಲಹೆ ನೀಡುತ್ತಾಳೆ. ಅಷ್ಟೇ ಅಲ್ಲದೆ ಇಂತಹ ಪ್ರಬುದ್ಧ ಮನಸ್ಸಿನ ಡಾಲಿ ಬರಡಾದ ಬದುಕಿಗೆ ಚೈತನ್ಯ ತುಂಬುತ್ತಾಳೆ. "ಸ್ತ್ರೀಯ ಸಹಾನುಭೂತಿ ಬೇಕು ಎಂಬ ಹಂಬಲ, ಕಾತರ- ಈ ಎರಡೂ ಭಾವನೆಗಳಿಗೆ ಉತ್ತರ ರೂಪವಾಗಿ ಬಂದವಳು ಡಾಲಿ!. ಅವಳ ಸಹವಾಸದಲ್ಲಿ ಒಂದು ಬಗೆಯ ಅಸಾಧಾರಣ ನಾವೀನ್ಯದ ಅನುಭವ ನನಗುಂಟಾಯಿತು. ಅದರ ಜೊತೆಗೆ ನನ್ನ ಬೆಂದ ಹೃದಯಕ್ಕೆ ಬೇಕಾದ ಶುಶ್ರೂಷೆ ಅವಳಲ್ಲಿ ದೊರೆಯಿತು" (ಶಾಂತಿನಾಥ ದೇಸಾಯಿ, ಮುಕ್ತಿ, ೨೦೦೨, ಪುಟ ೨೧೦) ಎಂಬ ಮಾತು ಲೈಂಗಿಕತೆ ಮಾನವನ ಸಂಬಂಧವನ್ನು ಮತ್ತಷ್ಟು ಗಟ್ಟಿಯಾಗಿಸುತ್ತದೆ ಎಂಬುದಕ್ಕೆ ಪೂರಕವಾಗಿದೆ. ಕೊನೆಯಲ್ಲಿ ಕಾಮಿನಿ ತನ್ನನ್ನು ಮದುವೆಯಾಗುವಂತೆ ಕೇಳಿದರೂ ದುರ್ಬಲನಾದ ತನ್ನಲ್ಲಿ ಕಾಮಿನಿಯನ್ನು ಸಲಹುವ ಶಕ್ತಿ ಇಲ್ಲ ಎಂಬ ಕಾರಣ ಕೊಡುತ್ತಾನೆ. ಆದರೂ ಡಾಲಿಯಂತಹ ಹೆಣ್ಣು ತನಗೆ ಸಂಗಾತಿಯಾಗಬೇಕೆಂದು ಮನಸ್ಸಿನಲ್ಲಿಯೇ ಗೌರೀಶ ಬಯಸುತ್ತಾನೆ. ಮೊದಲು ಗೌರೀಶ ಕಾಮಿನಿಯನ್ನು ಪ್ರೀತಿಸಿದರೂ ಡಾಲಿಯ ನಿಷ್ಕಲ್ಮಶ ಪ್ರೀತಿ ಕಾಮಿನಿಯನ್ನು ತಿರಸ್ಕರಿಸುವಂತೆ ಮಾಡುತ್ತದೆ.

ನಮ್ಮ ಸಮಾಜದಲ್ಲಿರುವ ಜಾತಿ ವ್ಯವಸ್ಥೆಯನ್ನು ಶಾಂತಿನಾಥ ದೇಸಾಯಿಯವರು ಬಹುವಾಗಿ ಟೀಕಿಸುತ್ತಾರೆ. ಜಾತಿ, ಧರ್ಮಗಳಿಂದ ಮುಕ್ತವಾದ ಸಮಾಜ ನಿರ್ಮಾಣ ವಾಗಬೇಕೆಂದು ದೇಸಾಯಿಯವರು ಪ್ರತಿಪಾದಿಸುತ್ತಾರೆ. ಈ ಬದಲಾವಣೆಗೆ ದೇಸಾಯಿಯವರು ಮಹಿಳೆಯನ್ನೇ ಕೇಂದ್ರವಾಗಿಟ್ಟುಕೊಂಡಿದ್ದಾರೆ. 'ಓಂಣಮೋ' ಕಾದಂಬರಿಯ ಆ್ಯನ್ ಮೂಲಕ ಸಮಾಜದಲ್ಲಿನ ಜಾತಿಯನ್ನು ಹೋಗಲಾಡಿಸ ಬೇಕೆನ್ನುತ್ತಾರೆ. ಆ್ಯನ್ ಮೂಲತಃ ಕ್ರಿಶ್ಚಿಯನ್‌ಳಾದರೂ ಭಾರತದಲ್ಲಿನ ಜೈನ ಧರ್ಮದ ಪ್ರಭಾವಕ್ಕೊಳಗಾಗಿ ಸ್ವಇಚ್ಛೆಯಿಂದಲೇ ಜೈನಧರ್ಮಕ್ಕೆ ಮತಾಂತರಗೊಳ್ಳುತ್ತಾಳೆ. ಇಷ್ಟೇ ಅಲ್ಲದೆ ಜೈನ ಧರ್ಮದ ಮೇಲೆ ಸಂಶೋಧನೆಯನ್ನು ಕೈಗೊಂಡು ಮತ್ತಷ್ಟು ಜೈನ ಧರ್ಮವನ್ನು ಅರಿಯುವ ಪ್ರಯತ್ನ ಮಾಡುತ್ತಾಳೆ. ತನ್ನ ಸಂಶೋಧನಾ ಕ್ಷೇತ್ರವನ್ನಾಗಿ ಶ್ರವಣಬೆಳಗೊಳವನ್ನು ಆ್ಯನ್ ಆರಿಸಿಕೊಳ್ಳುತ್ತಾಳೆ. ಆದರೆ ಶ್ರವಣಬೆಳಗೊಳದಲ್ಲಿ ಅನ್ಯಧರ್ಮೀಯರಿಗೆ ಅವಕಾಶವಿಲ್ಲದ್ದರಿಂದ ಬೇಸರಗೊಂಡ ಆ್ಯನ್ ಆ ಸ್ಥಳವನ್ನು

ಬಿಟ್ಟು ಬರುತ್ತಾಳೆ. ಜಾತಿಯನ್ನು ಕೇಂದ್ರವಾಗಿಟ್ಟುಕೊಂಡು ವ್ಯಕ್ತಿಯ ಸಾಧನೆ, ಸಾಮರ್ಥ್ಯವನ್ನು ಪರಿಗಣಿಸಬಾರದು. ಎಲ್ಲಾ ಜಾತಿ, ವರ್ಗ, ಧರ್ಮದವರಿಗೂ ಸಮಾನವಾದ ಅವಕಾಶ ದೊರೆತಾಗ ಮಾತ್ರ ಸಮಗ್ರ ಸಮಾಜದ ಬೆಳವಣಿಗೆಯಾಗುತ್ತದೆ. ಆದರೆ ನಮ್ಮ ಸಮಾಜದಲ್ಲಿ ಜಾತಿ ಎನ್ನುವುದು ಬೆಳವಣಿಗೆಗೆ ಅಡ್ಡಿಯಾಗಿದೆ. ಅದನ್ನು ನಿವಾರಿಸಿ ಸಮಾನತೆಯ ಸಮಾಜವನ್ನು ನಿರ್ಮಿಸಬೇಕು. ಕುವೆಂಪು ಹೇಳಿದಂತೆ 'ಸರ್ವರಿಗೆ ಸಮಬಾಳು, ಸರ್ವರಿಗೆ ಸಮಪಾಲು' ಇರುವ ಸಮಾಜದ ಪುನರ್ ನಿರ್ಮಾಣವಾಗ ಬೇಕೆಂಬುದು ಶಾಂತಿನಾಥ ದೇಸಾಯಿಯವರ ಸಾಹಿತ್ಯದ ಧೋರಣೆಯಾಗಿದೆ. ಇವರ ಈ ಧೋರಣೆಯ ಸಾಕಾರಕ್ಕೆ ಆ್ಯನ್ ಪಾತ್ರವನ್ನು ಅವರು ಸೃಷ್ಟಿಸಿದ್ದಾರೆ. ಜಾತಿಯನ್ನು ಸಂಪೂರ್ಣವಾಗಿ ಹೋಗಲಾಡಿಸಲು ಸಾಧ್ಯವಿಲ್ಲದಿದ್ದರೂ ಆ್ಯನ್ ಅದನ್ನು ವಿರೋಧಿಸುತ್ತಾಳೆ. ಇದು ಬದಲಾವಣೆಯ ಮೊದಲ ಘಟ್ಟ. ಅದನ್ನು ಆ್ಯನ್ ಮೂಲಕ ದೇಸಾಯಿಯವರು ಸಾಧಿಸುತ್ತಾರೆ. ಇಂತಹ ಬದಲಾವಣೆಯ ಧ್ವನಿ ಮಹಿಳೆಯ ಮೂಲಕ ಬಂದಿರುವುದು ಗಮನಾರ್ಹ ಸಂಗತಿಯಾಗಿದೆ.

"ಗಂಡಸರು ತಮ್ಮ ವರ್ಗಕ್ಕೆ ಅನುಕೂಲವಾಗುವಂತೆಯೇ ಕಾನೂನುಗಳನ್ನು ರಚಿಸಿಕೊಂಡಿದ್ದಾರೆ. ಅವರೇ ನ್ಯಾಯಾಧೀಶರಾಗಿ ಆ ಕಾನೂನುಗಳನ್ನು ಜಾರಿಗೊಳಿಸುತ್ತಿ ದ್ದಾರೆ" (ಎಚ್.ಎಸ್. ಪಾರ್ವತಿ, ಸೆಕೆಂಡ್ ಸೆಕ್ಸ್ ಒಂದು ಕನ್ನಡದ ಓದು, ೨೦೦೭, ಪುಟ ೩೪) ಎಂದು ೧೭ನೇ ಶತಮಾನದ ಫೆಮಿನಿಸ್ಟ್ ಪಾಲಿನ್‌ಡೆ ಲಾ ಬಾರ್ (Paulinde La Bare) ಹೇಳುತ್ತಾಳೆ. ಹಾಗೆ ಪುರುಷರು ರಚಿಸಿಕೊಂಡ ಅನುಕೂಲಗಳಲ್ಲಿ ವಿಧುರ ವಿವಾಹವೂ ಒಂದಾಗಿದೆ. ಹೆಂಡತಿ ಸತ್ತ ಮೇಲೆ ಗಂಡು ಯಾವುದೇ ಮುಲಾಜಿಲ್ಲದೆ ಯಾವ ವಯಸ್ಸಿನಲ್ಲಾದರೂ ಇನ್ನೊಂದು ಮದುವೆಯಾಗಬಹುದು. ಆದರೆ ಮಹಿಳೆಗೆ ಆ ರೀತಿಯ ಅವಕಾಶವನ್ನು ಈ ಸಮಾಜ ನೀಡಿಲ್ಲ. ಬದಲಿಗೆ ಮಹಿಳೆಯು ವಿಧವೆಯಾಗುವುದು ಪೂರ್ವಜನ್ಮದ ಪಾಪದ ಫಲ ಎಂಬಂತೆ ಈ ಸಮಾಜವು ಬಿಂಬಿಸಿದೆ. ಆದ್ದರಿಂದಲೇ ದೇಸಾಯಿಯವರು 'ಓಂಣಮೋ' ಕಾದಂಬರಿಯ ನಿರ್ಮಲೆ ಪೂರ್ವಜನ್ಮದ ಕರ್ಮದ ಮೂಲಕ ನನಗೆ ಈ ದುಃಖ ಬಂದಿದೆಯಂತೆ ಚಿಕ್ಕ ವಯಸ್ಸಿನಲ್ಲಿಯೇ ಗಂಡನನ್ನು ಕಳೆದುಕೊಂಡಿರುವುದಕ್ಕೆ ಕಾರಣ ಹೇಳುತ್ತಾಳೆ. ಪುರುಷ ನಿರ್ಮಿಸಿದ ಸಮಾಜದ ರೀತಿ ನೀತಿಗಳನ್ನೇ ದೇವರ ವಾಕ್ಯ ಎಂದು ನಂಬಿದ್ದ ನಿರ್ಮಲೆ ಅದನ್ನು ವಿರೋಧಿಸುವ ಗೋಜಿಗೆ ಹೋಗದೆ ಕಣ್ಣಿಗೆ ಒತ್ತಿಕೊಂಡು ಪಾಲಿಸಿಕೊಂಡು ಬರುತ್ತಿರುತ್ತಾಳೆ. ಹೆಣ್ಣಿಗೆ ಮಾತ್ರ ಇಂತಹ ಕಟ್ಟಳೆಗಳು ಎಂದು ನಂಬಿರುವ ನಿರ್ಮಲೆ "ನಾನು ಹೆಣ್ಣಾಗಿ ಹುಟ್ಟಿದ್ದು ತಪ್ಪು, ನಾನು ಸತ್ತರೆ ನನ್ನ ಜೀವ ಮತ್ತೊಂದು ದೇಹ

ಧರಿಸುವುದೇ ಆದರೆ ಅದು ಗಂಡಸಿನ ದೇಹವಾಗಲೆಂದು ಆಶಿಸುತ್ತಾಳೆ." (ಶಾಂತಿನಾಥ ದೇಸಾಯಿ, ಓಂಣಮೋ, ೧೯೯೮, ಪುಟ ೫೪) ಸ್ತ್ರೀ ಅಸಮಾನತೆ, ವಿಧವಾ ವಿವಾಹದ ನಿಷೇಧ ಇವುಗಳ ಬಗ್ಗೆ ದೇಸಾಯಿಯವರು ವಿರೋಧವನ್ನು ವ್ಯಕ್ತಪಡಿಸುತ್ತಾರೆ. ಆದ್ದರಿಂದಲೇ ಮಹಿಳೆ ತನ್ನ ಸುತ್ತ ಈ ಸಮಾಜ ಹಾಕಿರುವ ಮೂಢ ಸಂಪ್ರದಾಯ ಕಂದಾಚಾರಗಳಿಂದ ಮುಕ್ತವಾಗಬೇಕೆಂದು 'ಓಂಣಮೋ'ದಲ್ಲಿ ದೇಸಾಯಿಯವರು ಪ್ರತಿಪಾದಿಸುತ್ತಾರೆ. "ಅದೆಲ್ಲ ಸುಳ್ಳು ನಿನ್ನ ಜೀವನ ನಿನ್ನ ಕೈಯಲ್ಲಿದೆ ಈ ಹಳೇ ಬಂಧನಗಳನ್ನು ಹರಿದು ಹಾಕಿ ನಿನ್ನದೇ ಸ್ವತಂತ್ರ ಜೀವನ ನಿರ್ಮಾಣ ಮಾಡುವ ಶಕ್ತಿ ನಿನ್ನಲ್ಲಿದೆ" (ಶಾಂತಿನಾಥ ದೇಸಾಯಿ, ಓಂಣಮೋ, ೧೯೯೮, ಪುಟ ೫೫) ಎಂದು ಹೇಳುವ ಮೂಲಕ ದೇಸಾಯಿಯವರು ಮಹಿಳೆಯು ಸಂಪ್ರದಾಯದ ಹೆಸರಿನಲ್ಲಿ ತನ್ನ ಮೇಲಾಗುತ್ತಿರುವ ಶೋಷಣೆಯನ್ನು ವಿರೋಧಿಸಬೇಕೆಂದು ಸಲಹೆಯನ್ನು ನೀಡುತ್ತಾರೆ. ಆ ಮೂಲಕ ಸ್ತ್ರೀ ಸಮಾನತೆ ಮತ್ತು ಸ್ತ್ರೀ ಶೋಷಣೆಯ ಮುಕ್ತ ಸಮಾಜ ನಿರ್ಮಾಣವಾಗಬೇಕೆಂದು ದೇಸಾಯಿಯವರು ಆಶಿಸುತ್ತಾರೆ.

ಗಂಡನ ಆಯ್ಕೆಯ ಸ್ವತಂತ್ರವೇ ಹೆಣ್ಣಿಗೆ ಈ ಸಮಾಜದಲ್ಲಿ ಇಲ್ಲ. ಮನೆಯವರು ಹೇಳಿದ ಗಂಡನ್ನು ತನ್ನ ಬಾಳ ಸಂಗಾತಿಯಾಗಿ ಮಹಿಳೆ ಒಪ್ಪಿಕೊಳ್ಳುತ್ತಾಳೆ. ಅಂತಹದರಲ್ಲಿ ಆ ಗಂಡನಿಂದ ದೈಹಿಕ ಸುಖ ಸಿಗಲಿಲ್ಲವೆಂದರೂ ಅವನನ್ನೇ ಒಪ್ಪಿಕೊಂಡು ಸಂಸಾರ ನಡೆಸುತ್ತಾಳೆ. ಆದರೆ ಈ ಸಮಾಜ ಪುರುಷನಿಗೆ ಲೈಂಗಿಕ ಸ್ವಾತಂತ್ರ್ಯವನ್ನು ನೀಡಿದೆ. ಆತ ದೈಹಿಕ ಸುಖವನ್ನು ಯಾವಾಗ ಬೇಕಾದರೂ, ಎಲ್ಲಿ ಬೇಕಾದರೂ, ಯಾರ ಹತ್ತಿರ ಬೇಕಾದರೂ ಪಡೆಯಬಹುದಾಗಿದೆ. ಮನುಷ್ಯನ ಸಹಜ ಪ್ರವೃತ್ತಿಯಾದ ಲೈಂಗಿಕತೆಯನ್ನು ಲಿಂಗಬೇಧವಿಲ್ಲದೆ ಪಡೆಯುವಂತಾಗಬೇಕೆಂಬುದು ದೇಸಾಯಿಯವರ ನಿಲುವಾಗಿದೆ. ದೇಸಾಯಿಯವರ 'ರಾಕ್ಷಸ' ಕಥೆಯ ನಳಿನಿಗೆ ರೈಲಿನಲ್ಲಿ ಕಮಲಾಕರ ಎಂಬ ವ್ಯಕ್ತಿಯ ಪರಿಚಯವಾಗುತ್ತದೆ. ಮದುವೆಯಾದರೂ ತನ್ನ ಗಂಡನಿಂದ ಲೈಂಗಿಕ ತೃಪ್ತಿ ಪಡೆಯಲು ಆಕೆಗೆ ಸಾಧ್ಯವಾಗಲಿಲ್ಲ. "ಹಾಳು? ಇಲ್ಲ ರಾಜಾ ಇದಕ್ಕೆ ಮೊದಲು ಜೀವಿಸಿರಲೇ ಇಲ್ಲ. ಒಂದು ರೀತಿಯ ನಿದ್ದೆಯಲ್ಲಿದ್ದೆ – ಶವದಂತಿದ್ದೆ" (ಶಾಂತಿನಾಥ ದೇಸಾಯಿ, ಸಮಗ್ರ ಕತೆಗಳು, ೨೦೦೧ ಪುಟ ೨೫) ಎಂಬ ಮಾತು ನಳಿನಿಯ ದಾಂಪತ್ಯದ ಅಸುಖಕ್ಕೆ ಹಿಡಿದ ಕನ್ನಡಿಯಾಗಿದೆ. ಇಂತಹ ನಳಿನಿ ರೈಲಿನಲ್ಲಿ ಪರಿಚಯವಾದ ಕಮಲಾಕರ ಎಂಬ ವ್ಯಕ್ತಿಯ ಜೊತೆ ದೈಹಿಕ ಸಂಪರ್ಕ ಬೆಳೆಸಲು ಮುಂದಾಗುತ್ತಾಳೆ. "ನೀನು ಬಂದಿ, ಪ್ರಾಣ ತುಂಬಿದಿ ನಾನು ಜೀವಂತಳಾದೆ – ಎಚ್ಚೆತ್ತೆ, ಎದ್ದೆ ಕುಣಿದಾಡಿದೆ, ನಲಿದಾಡಿದೆ". (ಶಾಂತಿನಾಥ ದೇಸಾಯಿ, ಸಮಗ್ರ ಕತೆಗಳು, ೨೦೦೧, ಪುಟ ೨೫) ಎಂದು ಕಮಲಾಕರನ ದೈಹಿಕ ಸುಖದಿಂದ ಅವಳ ಜೀವನ

ಚೈತನ್ಯದಿಂದ ತುಂಬಿಕೊಳ್ಳುವುದನ್ನು ಹೇಳಿ ಕೊಳ್ಳುತ್ತಾಳೆ. ಗಂಡನಿಂದ ಸಿಗದ ಲೈಂಗಿಕ ತೃಪ್ತಿ ನಳಿನಿಗೆ ಕಮಲಾಕರನಿಂದ ಸಿಗುತ್ತದೆ. ಗಂಡಿಗೆ ಇರದ ಲೈಂಗಿಕ ಬಂಧನ ಹೆಣ್ಣಿಗೂ ಇರಬಾರದು. ಲೈಂಗಿಕ ಸ್ವಾತಂತ್ರ್ಯ ಲಿಂಗಬೇಧವಿಲ್ಲದೆ ಸಮಾಜದಲ್ಲಿರಬೇಕು. ಲೈಂಗಿಕ ತೃಪ್ತಿ ಸಿಗದೆ ಮನಸ್ಸಿನಲ್ಲಿಯೇ ಆ ಆಸೆಯನ್ನು ಇಟ್ಟುಕೊಳ್ಳುವುದರಲ್ಲಿ ಅರ್ಥವಿಲ್ಲ ಎಂಬುದನ್ನು ಇಲ್ಲಿ ದೇಸಾಯಿಯವರು ಅಭಿವ್ಯಕ್ತಿಸಿದ್ದಾರೆ.

ಪುರುಷ ಕೇಂದ್ರ ಈ ಸಮಾಜದಲ್ಲಿ ಗಂಡು ಜೀವನದ ಯಾವುದೇ ಘಟ್ಟದಲ್ಲಿದ್ದರೂ ಅವನಲ್ಲಿ ಕಾಮದ ತುಡಿತವಿದ್ದರೆ ಅದನ್ನು ಈಡೇರಿಸಿಕೊಳ್ಳಲು ನಾನಾ ದಾರಿಗಳನ್ನು ಹುಡುಕುತ್ತಾನೆ. ಅವನ ಆ ಪ್ರಯತ್ನಕ್ಕೆ ಸಮಾಜದ ಸಮ್ಮತವೂ ಇರುತ್ತದೆ. ಆದರೆ ಹೆಣ್ಣಿಗೆ ಅಂತಹ ಅವಕಾಶ ದಕ್ಕುವುದು ಕಡಿಮೆ. ಆದರೆ ದೇಸಾಯಿಯವರ 'ಯಥಾಕಾಷ್ಠಂಚ ಕಾಷ್ಠಂಚ' ಕತೆಯಲ್ಲಿ ಇದು ಸಾಧ್ಯವಾಗಿದೆ. ಮಧ್ಯವಯಸ್ಸಿನ ವಿಧವೆಯಾದ ಶಾರದಾಬಾಯಿಯ ಲೈಂಗಿಕ ಆಸೆಯೇ ಕತೆಯ ವಸ್ತುವಾಗಿದೆ. ಗಂಡ ಸತ್ತ ೪ ವರ್ಷಗಳಿಂದಲೂ ಲೈಂಗಿಕತೆಯಿಂದ ದೂರವಾಗಿದ್ದ ಶಾರದಾದೇವಿ ಕಾಲೇಜಿನ ಕಾರ್ಯಕ್ರಮಕ್ಕೆ ಬಂದಿದ್ದ ಡಾ. ಕೃಷ್ಣಕುಮಾರ್‌ನಲ್ಲಿ ತನ್ನ ಆಸೆಯನ್ನು ವ್ಯಕ್ತಪಡಿಸುತ್ತಾಳೆ. ಮೊದ ಮೊದಲು ಆತ ನಿರಾಕರಿಸಿದರೂ ನಂತರ ಆಕೆಯ ಆಸೆಯನ್ನು ಈಡೇರಿಸುತ್ತಾನೆ. ಈ ನಡುವೆ ಗಂಡ ಸತ್ತ ನಂತರ ದೇಶಪಾಂಡೆ ಎಂಬ ವ್ಯಕ್ತಿಯ ಹತ್ತಿರವೂ ಇದೇ ರೀತಿಯ ಸಂಬಂಧ ಇಟ್ಟುಕೊಂಡಿರುತ್ತಾಳೆ. ಆ ವ್ಯಕ್ತಿ ವಲಸೆ ಹೋದ್ದರಿಂದ ಒಂಟಿಯಾಗಿದ್ದ ಈಕೆ ತನ್ನ ಈ ಲೈಂಗಿಕ ಆಸೆಯನ್ನು ಈಡೇಸಿಕೊಳ್ಳುವುದಕ್ಕೆ ಚಿಕ್ಕ ವಯಸ್ಸಿನ ಪ್ರಾಧ್ಯಾಪಕನಾದ ಡಾ.ಕೃಷ್ಣಕುಮಾರನ್ನು ಬಳಸಿಕೊಳ್ಳುತ್ತಾಳೆ. ಇದು ಅನೈತಿಕತೆ ಎಂದು ಮೇಲ್ನೋಟಕ್ಕೆ ಅನ್ನಿಸಿದರೂ, ಸೂಕ್ಷ್ಮವಾಗಿ ಗಮನಿಸಿದರೆ ಇಲ್ಲಿ ಯಾವುದೇ ಅನೈತಿಕತೆಯ ಸೋಂಕಿಲ್ಲ ಎನ್ನುವುದು ತಿಳಿದು ಬರುತ್ತದೆ. ಶಾರದಾಬಾಯಿ ಮದುವೆಯಾಗಿ ಗಂಡನಿದ್ದೂ, ಆತನಿಂದ ಲೈಂಗಿಕವಾಗಿ ತೃಪ್ತಳಾಗಿದ್ದು, ಇನ್ನೊಬ್ಬ ವ್ಯಕ್ತಿಯನ್ನು ತನ್ನ ಲೈಂಗಿಕ ಆಸೆಗೆ ಬಳಸಿಕೊಂಡಿದ್ದರೆ ಅದರಲ್ಲಿ ನಾವು ಅನೈತಿಕತೆಯನ್ನ ಕಾಣಬಹುದಾಗಿತ್ತು. ಆದರೆ ಶಾರದಾಬಾಯಿ ವಿಧವೆಯಾಗಿರುವುದರಿಂದ ಕಾಮ ಮಾನವನ ಸಹಜ ಪ್ರವೃತ್ತಿಯಾಗಿರುವುದರಿಂದ ಇಲ್ಲಿ ಅನೈತಿಕತೆಯ ಪ್ರಶ್ನೆಯೇ ಉದ್ಭವಿಸುವುದಿಲ್ಲ.

ನಗರದ ಮಹಿಳಾ ಮಂದಿ ತಮ್ಮ ಲೈಂಗಿಕ ಸ್ವಾತಂತ್ರ್ಯವನ್ನು ಬಹಳ ನಾಜೂಕಾಗಿ ನಿರ್ವಹಿಸಿದರೆ ಹಳ್ಳಿಯ ಮಹಿಳೆ ಪ್ರತಿಭಟನೆ ಮೂಲಕ ವ್ಯಕ್ತಪಡಿಸಿ ಲೈಂಗಿಕ ಸ್ವಾತಂತ್ರ್ಯವನ್ನು ಪಡೆಯುತ್ತಾಳೆ. ವಯಸ್ಸಾದ ಗಂಡನನ್ನು ಪಡೆದ ಗಂಗಿಗೆ ಆತನಿಂದ

ಲೈಂಗಿಕ ತೃಪ್ತಿ ಸಿಗುತ್ತಿರಲಿಲ್ಲ. ಸಹಜವಾಗಿಯೇ ಆಕೆ ಆತನನ್ನು ಬಿಟ್ಟು ಶಂಕರ ಎಂಬ ವ್ಯಕ್ತಿಯ ಜೊತೆ ಸಂಬಂಧವನ್ನು ಇಟ್ಟುಕೊಳ್ಳುತ್ತಾಳೆ. ಗಂಗಿಯ ಗಂಡನಿಗೆ ವಿಷಯ ತಿಳಿದು ಆಕೆಯನ್ನು ತನ್ನ ಹದ್ದುಬಸ್ತಿನಲ್ಲಿಡಲು ಪ್ರಯತ್ನಿಸುತ್ತಾನೆ. ಊರಿನ ಪ್ರಮುಖರವರೆಗೂ ವಿಷಯ ಹೋಗುತ್ತದೆ. ಅದಾಗ್ಯೂ ಗಂಗಿ ಎಲ್ಲರನ್ನು ಪ್ರತಿಭಟಿಸಿ ಶಂಕರನೊಂದಿಗೆ ಓಡಿ ಹೋಗುತ್ತಾಳೆ. ಊಟ, ತಿಂಡಿ, ನಿದ್ದೆಯಂತೆ ಲೈಂಗಿಕತೆ ಕೂಡ ಜೀವನದ ಸಹಜ ಪ್ರವೃತ್ತಿಯಾಗಿದೆ. ಗಂಡು ಅದನ್ನು ಸಲೀಸಾಗಿ ಪಡೆದುಕೊಳ್ಳುವ ಸ್ವಾತಂತ್ರ್ಯವನ್ನು ಹೊಂದಿದ್ದಾನೆ. ಅಂತಹ ಸ್ವಾತಂತ್ರ್ಯ ಹೆಣ್ಣಿಗೂ ಇರಬೇಕು. ಇಂತಹ ಸ್ವಾತಂತ್ರ್ಯದ ಪರಿಕಲ್ಪನೆಯನ್ನು ಗಂಗಿ ಮೂಲಕ ದೇಸಾಯಿಯವರು ಅನಾವರಣ ಮಾಡಿದ್ದಾರೆ. ಗಂಗಿಯಂತಹ ಪ್ರತಿಭಟನೆಯ ಧ್ವನಿಯನ್ನು ಹೊಂದಿರುವ ಚೇತನಗಳು ನಗರದ ಮಹಿಳೆಯರಲ್ಲಿ ಕಾಣುವುದಕ್ಕಿಂತ ಹೆಚ್ಚಾಗಿ ಹಳ್ಳಿ ಮಹಿಳೆಯರಲ್ಲಿ ಕಾಣಬಹುದಾಗಿದೆ.

ಬೆಳಕಿನ ಹಿಂದಿರುವ ನೆರಳಂತೆ ಮಹಿಳೆ ಎಲ್ಲದಕ್ಕೂ, ಯಾವಾಗಲೂ ಪುರುಷನನ್ನೇ ಈ ಹಿಂದೆ ಅವಲಂಬಿಸಬೇಕಾಗಿತ್ತು. ಆದರೆ ಇಂದು ಕಾಲವು ಬದಲಾಗುತ್ತಿದೆ. ಬದಲಾಗುತ್ತಿರುವ ಕಾಲದ ಜೊತೆಗೆ ಸ್ತ್ರೀಯೂ ಹೆಜ್ಜೆ ಹಾಕುತ್ತಿದ್ದಾಳೆ. ಹಿಂದೆ ಬೆಳಕಿನ ಹಿಂದಿರುವ ನೆರಳಾಗಿದ್ದ ಮಹಿಳೆ ಇಂದು ತಾನೇ ಬೆಳಕಾಗುವ ಮಟ್ಟಕ್ಕೆ ಬೆಳೆದು ನಿಂತಿದ್ದಾಳೆ. ಸಮಾಜದಲ್ಲಿ ಕೇವಲ ಪುರುಷನಿಗೆ ಮಾತ್ರ ಅಸ್ತಿತ್ವವನ್ನು ಸ್ಥಾಪಿಸುವ ಅವಕಾಶ ಈ ಹಿಂದೆ ಇತ್ತು. ಆದರೆ ಇಂದು ಮಹಿಳೆ ತನ್ನ ಅಸ್ತಿತ್ವವನ್ನು ಕಂಡುಕೊಳ್ಳುವ ಮೂಲಕ ತನ್ನನ್ನು ತಾನು ಗುರುತಿಸಿಕೊಳ್ಳುವ ಹಂತದಲ್ಲಿದ್ದಾಳೆ. ಶಾಂತಿನಾಥ ದೇಸಾಯಿಯವರ 'ಓಂಣಮೋ' ಕಾದಂಬರಿಯ ಆ್ಯನ್ ವಿದೇಶಿ ಮಹಿಳೆಯಾದರೂ ಭಾರತಕ್ಕೆ ಬಂದು ಇಲ್ಲಿನ ಜೈನಧರ್ಮಕ್ಕೆ ಮತಾಂತರಗೊಂಡು ಧರ್ಮದ ಸಂಶೋಧನೆ ಕೈಗೊಂಡು ಜೈನಧರ್ಮದಲ್ಲಿ ಬದಲಾವಣೆ ತರಬೇಕೆಂಬ ಆಲೋಚನೆಯಲ್ಲಿರುತ್ತಾಳೆ. ಇದಕ್ಕಾಗಿ ಇಡೀ ಭಾರತವನ್ನು ಸುತ್ತಿ ಜೈನ ಪುಣ್ಯಸ್ಥಳಗಳಿಗೆ ಭೇಟಿಕೊಟ್ಟು, ಜೈನಧರ್ಮದಲ್ಲಿ ವಿದ್ವಾಂಸರಾದ ವ್ಯಕ್ತಿಗಳನ್ನು ಪರಿಚಯ ಮಾಡಿಕೊಂಡು ಜೈನಧರ್ಮದ ಬಗ್ಗೆ ವಿಷಯಗಳನ್ನು ತಿಳಿದುಕೊಳ್ಳುತ್ತಾಳೆ. ಜೈನಧರ್ಮದ ಬಗ್ಗೆ ಸಂಶೋಧನೆ ಮಾಡಲು ಆ್ಯನ್ ಶ್ರವಣಬೆಳಗೊಳವನ್ನು ಆರಿಸಿಕೊಳ್ಳುತ್ತಾಳೆ. ಜೈನಧರ್ಮದಲ್ಲಿ ಹೊಸತನವನ್ನು ತರಬೇಕೆಂದು ಭಾವಿಸಿದ್ದ ಆ್ಯನ್‌ಳಿಗೆ ಬೆಳಗೊಳದಲ್ಲಿ ಮನೆ ಮಾಡಿದ್ದ ಜಾತೀಯತೆಯನ್ನು ಕಂಡು ಬೇಸರವುಂಟಾಗುತ್ತದೆ. "ಜೈನ ತತ್ವದ ಒಳ್ಳೆಯ ಅಂಶಗಳನ್ನು ಅಂಗೀಕರಿಸಿಕೊಳ್ಳಲು ನಾನು ಜೈನಳಾದೆ. ಆದರೆ ಈ ಜೈನ ಸಮಾಜದ ಅಭಿಲಾಷೆಗಳಿಂದ, ಕನಸುಗಳಿಂದ

ನಾನು ತುಂಬಾ ದೂರಳಾಗಿದ್ದೇನೆ. ಆದ್ದರಿಂದ ಈ ಜೈನ ಸಮಾಜ ನನ್ನನ್ನು ನುಂಗುವುದಕ್ಕಿಂತ ಮೊದಲು ನಾನು ಪಲಾಯನ ಮಾಡಬೇಕು" (ಶಾಂತಿನಾಥ ದೇಸಾಯಿ, ಓಂಣಮೋ, ೧೯೯೮, ಪುಟ ೨೪೩) ಎಂದು ಆ್ಯನ್ ನೊಂದುಕೊಳ್ಳುತ್ತಾಳೆ. ಆದರೆ ಆ್ಯನ್ ಪಲಾಯನವಾದಿಯಲ್ಲ. ಜಾತೀಯತೆಯಿಂದ ಕೂಡಿದ ಬೆಳಗೊಳದಲ್ಲಿ ತಾನು ಇನ್ನಷ್ಟು ದಿನವಿದ್ದರೆ ತಾನೂ ಕೂಡ ಜಾತಿವಾದಿಯಾಗಬಹುದು ಎಂಬ ಕಾರಣಕ್ಕಾಗಿ ಆ ಸ್ಥಳವನ್ನು ತೊರೆಯುತ್ತಾಳೆ. ಆದರೆ ಆಕೆ ಜೈನ ಧರ್ಮವನ್ನು ತೊರೆಯುವುದಿಲ್ಲ. ಜೈನ ಧರ್ಮದಲ್ಲಿ ಹೊಸತನವನ್ನು ತರಬೇಕೆಂದು ಭಾವಿಸಿದ ಆ್ಯನ್‌ಳಿಗೆ ಬೆಳಗೊಳದಲ್ಲಿ ಇರುವುದು ಕಷ್ಟವಾಗುತ್ತದೆ. ತನ್ನ ಅಸ್ತಿತ್ವಕ್ಕೆ ಧಕ್ಕೆಯಾಗದಂತೆ ನೋಡಿಕೊಳ್ಳಲು ಆ ಸ್ಥಳವನ್ನು ಬಿಡುವ ನಿರ್ಧಾರ ಮಾಡುತ್ತಾಳೆ. ವಿದೇಶಿ ಮಹಿಳೆಯಾದರೂ, ಕ್ರಿಶ್ಚಿಯನ್ ಧರ್ಮದಿಂದ ಜೈನ ಧರ್ಮಕ್ಕೆ ಮತಾಂತರಗೊಂಡು ಜೈನಧರ್ಮದಲ್ಲಿ ಬದಲಾವಣೆ ತಂದು ಆ ಮೂಲಕ ತನ್ನನ್ನು ಗುರುತಿಸಿಕೊಳ್ಳಬೇಕೆಂಬ ಆಸೆಯಿರುವ ಅಸ್ತಿತ್ವವಾದಿಯ ಪ್ರತಿನಿಧಿಯಂತೆ ಆ್ಯನ್ ಗೋಚರಿಸುತ್ತಾಳೆ. ಅಸ್ತಿತ್ವದ ತಹತಹಿಕೆ ಪುರುಷರಿಗೆ ಮಾತ್ರವಲ್ಲ ಮಹಿಳೆಗೂ ಇರುತ್ತದೆ. ಅಂತಹ ಮಹಿಳೆಯಾಗಿ ಆ್ಯನ್ ಇಲ್ಲಿ ಗುರುತಿಸಿಕೊಳ್ಳುತ್ತಾಳೆ. ಅಸ್ತಿತ್ವ=ಪುರುಷ ಎಂಬ ಸಮೀಕರಣವಿದ್ದ ಸಮಾಜ ಅಸ್ತಿತ್ವ=ಮಹಿಳೆ ಎಂಬ ಸಮೀಕರಣಕ್ಕೆ ಬದಲಾಗಬೇಕೆಂಬ ದೇಸಾಯಿಯವರ ಧೋರಣೆಯು ಮಹಿಳೆಯ ಬಗ್ಗೆ ಮಹಿಳೆಯ ಬಗ್ಗೆ ದೇಸಾಯಿಯವರು ತಳೆದಿರುವ ದೃಷ್ಟಿಕೋನವನ್ನು ಸ್ಪಷ್ಟಪಡಿಸುತ್ತದೆ.

ನವೋದಯ ಸಾಹಿತ್ಯದ ಪ್ರತಿಕ್ರಿಯೆಯಾಗಿ ಪ್ರಗತಿಶೀಲ ಸಾಹಿತ್ಯವು ಸೃಷ್ಟಿಯಾಯಿತು. ಸಮಾಜದಲ್ಲಿರುವ ಅಸಮಾನತೆಯನ್ನು ತಮ್ಮ ಸಾಹಿತ್ಯದ ಮುಖ್ಯ ವಸ್ತುವಾಗಿ ಪ್ರಗತಿಶೀಲ ಲೇಖಕರು ಇಟ್ಟುಕೊಂಡರು. ಕಾರ್ಲ್‌ಮಾರ್ಕ್ಸ್‌ನ ಸಂಪತ್ತಿನ ಸಿದ್ಧಾಂತದಿಂದ ಪ್ರೇರಣೆಗೊಂಡು ಸಮಾಜದಲ್ಲಿರುವ ಶೋಷಿತರ ಪರವಾಗಿ ಪ್ರಗತಿಶೀಲ ಲೇಖಕರು ನಿಂತರು. ಮೂಲಭೂತವಾಗಿ ಪ್ರಗತಿಶೀಲ ಸಾಹಿತ್ಯದ ಉದ್ದೇಶ ಜನರಲ್ಲಿ ಎಚ್ಚರವನ್ನುಂಟು ಮಾಡುವುದು. ಜನರಿಗೆ ಹತ್ತಿರವಾಗಿ ಅವರಿಗೆ ಅರ್ಥವಾಗುವ ಸರಳ ಭಾಷೆಯಲ್ಲಿ ತಾವು ಬಯಸಿದ ನಂಬಿದ ವಿಚಾರಗಳನ್ನು ಪ್ರಚಾರ ಮಾಡುವುದು ಮುಖ್ಯವಾಗಿತ್ತು ಎಂದು 'ಕನ್ನಡ ಸಾಹಿತ್ಯ ಸಂದರ್ಭ' ಕೃತಿಯಲ್ಲಿ ವಿದ್ವಾಂಸರು ಗುರುತಿಸಿದ್ದಾರೆ. ಪ್ರಗತಿಶೀಲ ಸಾಹಿತ್ಯವನ್ನು ಹುಟ್ಟುಹಾಕಿದ ಕಾರ್ಲ್‌ಮಾರ್ಕ್ಸ್‌ನ ಆರ್ಥಿಕ ಸಿದ್ಧಾಂತವನ್ನು ಮೆಚ್ಚಿದ್ದ ದೇಸಾಯಿಯವರು ಆ ಅಂಶಗಳನ್ನು ತಮ್ಮ ಕಥನ ಸಾಹಿತ್ಯದಲ್ಲಿ ತರುವ ಪ್ರಯತ್ನ ಮಾಡಿದ್ದಾರೆ. ಈ ಸಿದ್ಧಾಂತದಿಂದ ಪ್ರೇರಣೆಗೊಂಡು, ಆ ಮೂಲಕ ಕ್ರಾಂತಿಯನ್ನು ಮಾಡ ಬಯಸುವ ಪಾತ್ರಗಳನ್ನು ಇವರ ಕಥನ ಸಾಹಿತ್ಯದಲ್ಲಿ ನಾವು ಕಾಣಬಹುದಾಗಿದೆ. 'ಓಂಣಮೋ'

ಕಾದಂಬರಿಯ ರೋಜಾ ಅಂತಹ ಒಂದು ಪಾತ್ರವಾಗಿದೆ. ಪ್ರೊ. ನಿರ್ಮಲ ಕುಮಾರರ ಮಗಳು ರೋಜ ಆಧುನಿಕ ಸಮಾಜದ ವಿದ್ಯಾವಂತ ತರುಣಿಯರ ಪ್ರತಿನಿಧಿಯಾಗಿದ್ದಾಳೆ. ಈಕೆ ತನ್ನ ಕಾಲೇಜು ದಿನಗಳಿಂದಲೇ ಕಮ್ಯುನಿಸ್ಟ್ ಸಿದ್ಧಾಂತದ ಪ್ರಭಾವಕ್ಕೆ ಒಳಗಾಗಿದ್ದಾಳೆ. ಡಾ. ಮಾಧವನ್ ಆಕೆಯ ನೆಚ್ಚಿನ ಕಮ್ಯುನಿಸ್ಟ್ ಪ್ರತಿಪಾದಕ. ಕಮ್ಯುನಿಸ್ಟ್ ವಿಚಾರದ ಮೇಲೆ ನಡೆಯುವ ಎಲ್ಲಾ ವಿಚಾರಗೋಷ್ಠಿ, ಭಾಷಣ, ಚರ್ಚೆಗಳಿಗೆ ತಪ್ಪದೇ ಭಾಗವಹಿಸಿ ರೋಜಾ ಅದನ್ನು ಸಮಾಜದಲ್ಲಿ ಜಾರಿಗೆ ತರಬೇಕೆಂದು ಪ್ರಯತ್ನ ಪಡುತ್ತಾಳೆ. ವರ್ಗರಹಿತ, ಅಸಮಾನತೆ ಮುಕ್ತ ಸಮಾಜದ ನಿರ್ಮಾಣದ ಚಿಂತನೆಯನ್ನು ದೇಸಾಯಿಯವರು ರೋಜಾ ಮೂಲಕ ಮಾಡುತ್ತಾರೆ. ಸಮಾಜದಲ್ಲಿ ಬದಲಾವಣೆಯನ್ನು ತರುವಲ್ಲಿ ಹೆಚ್ಚು ಕಾಳಜಿ ವಹಿಸುವ ದೇಸಾಯಿಯವರು ಎಲ್ಲಾ ಬದಲಾವಣೆಗಳನ್ನು ಮಹಿಳೆಯ ಮೂಲಕವೇ ತರಲು ಪ್ರಯತ್ನಿಸಿರುವುದು ವಿಶೇಷ. ಕ್ರಾಂತಿಯ ಶಕ್ತಿ ಗುಣವು ಮಹಿಳೆಗೆ ಇರುವುದರಿಂದ ಸಮಾಜದ ಬದಲಾವಣೆಯಲ್ಲಿ ಮಹಿಳೆ ಒಂದು ಪ್ರಮುಖ ಪಾತ್ರವನ್ನು ವಹಿಸುತ್ತಾಳೆ ಎಂದು ದೇಸಾಯಿಯವರು ನಂಬಿರುವುದರಿಂದ ಇವರ ಕಥನ ಸಾಹಿತ್ಯದಲ್ಲಿ ಬದಲಾವಣೆಯ ವಾಹಕ ಮಹಿಳೆಯೇ ಆಗಿದ್ದಾಳೆ. ಧಾರ್ಮಿಕ ಕ್ರಾಂತಿಗೆ ಆ್ಯನ್ ಕಮ್ಯುನಿಸ್ಟ್ ಕ್ರಾಂತಿಗೆ ರೋಜಾಳನ್ನು ಪ್ರತಿನಿಧಿಯನ್ನಾಗಿಸಿ ಪ್ರತಿಯೊಂದು ಬದಲಾವಣೆಗೂ ಮಹಿಳೆಯ ಅಗತ್ಯವನ್ನು ದೇಸಾಯಿಯವರು ಬಿಂಬಿಸಿದ್ದಾರೆ.



ದೇಸಾಯಿಯವರು ವಯಸ್ಸಿನ ಅಂತರವಿಲ್ಲದೆ ಎಲ್ಲಾ ವಯೋಮಾನದ ಹೆಣ್ಣಿನ ಚಿತ್ರಣವನ್ನು ತಮ್ಮ ಕಥನ ಸಾಹಿತ್ಯದಲ್ಲಿ ತಂದಿದ್ದಾರೆ. ವಯಸ್ಸಿನಲ್ಲಿ ಚಿಕ್ಕವರಾದರೂ ಇವರು ತಮ್ಮ ಆಲೋಚನಾ ಶಕ್ತಿಯಿಂದ, ಜವಾಬ್ದಾರಿಯುತ ನಡವಳಿಕೆಯಿಂದ ಗಮನ ಸೆಳೆಯುತ್ತಾರೆ. ದೇಸಾಯಿಯವರ – "ನ್ನು ನನ್ನ ಹಿಂದೆ ಬಿಟ್ಟು ಹೋಗಿದ್ದಾಳೆ". ಕಥೆಯ ನಂದಿನಿ ವಯಸ್ಸಿನಲ್ಲಿ ಚಿಕ್ಕವಳಾದರೂ ತಾಯಿಯಿಲ್ಲದ ಕುಟುಂಬದ ಜವಾಬ್ದಾರಿಯನ್ನು ಹೊರುತ್ತಾಳೆ. ತಂದೆ, ತಮ್ಮನಿಗೆ ಪ್ರೀತಿಯನ್ನು ತೋರಿಸುತ್ತಲೇ ತನ್ನ ಕುಟುಂಬವನ್ನು ಜಾಣ್ಮೆಯಿಂದ ನಡೆಸುತ್ತಾಳೆ. ವಯಸ್ಸಿನಲ್ಲಿ ಹಿರಿಯನಾದರೂ ತಂದೆ ಸದಾಶಿವಯ್ಯನಿಗೆ ಜವಬ್ದಾರಿ ಇರುವುದಿಲ್ಲ. ಆಗ ಸಂಸಾರದ ನೌಕೆ ಹಳಿ ತಪ್ಪುವುದನ್ನು ನಂದಿನಿ ಬುದ್ಧಿವಂತಿಕೆಯಿಂದ ತಡೆಯುತ್ತಾಳೆ. ಸಂಸಾರ ಎಂಬ ಬಂಡಿಯನ್ನು ಗಂಡು ಮತ್ತು ಹೆಣ್ಣು ಇಬ್ಬರೂ ಎಳೆಯಬೇಕೆಂಬುದು ಸಾಮಾನ್ಯ ಮಾತು. ಆದರೆ ಗಂಡು ಅಲ್ಲಿ ಅಪ್ರಯೋಜಕನಾದಾಗ ಇಡೀ ಸಂಸಾರದ ನೊಗವನ್ನು ಹೆಣ್ಣೊಬ್ಬಳೇ ದಿಟ್ಟವಾಗಿ ಎಳೆಯಬಲ್ಲಳು ಎಂಬುದನ್ನು ದೇಸಾಯಿಯವರು ಈ ಕಥೆಯ ಮೂಲಕ ಸಾಬೀತು ಪಡಿಸಿದ್ದಾರೆ. ನಂದಿನಿ ಮನೆಯ ಸಮಸ್ಯೆಯ ಗಂಟನನ್ನು ಬಹಳ ನಾಜೂಕಾಗಿ

ಬಿಡಿಸುತ್ತಾಳೆ. ಆಡಿಕೊಳ್ಳುವವರ ಬಾಯಿಗೆ ಆಹಾರವಾಗದಂತೆ ತನ್ನ ಇಡೀ ಕುಟುಂಬವನ್ನು ರಕ್ಷಿಸುತ್ತಾಳೆ. ಮೂರ್ತಿ ಚಿಕ್ಕದಾದರೇನು ಕೀರ್ತಿ ದೊಡ್ಡದು ಎಂಬಂತೆ ಗಂಡಿನ ಅವಶ್ಯಕತೆಯಿಲ್ಲದೆ ಹೋದರೂ ನಂದಿನಿ ದಿಟ್ಟತನದಿಂದ ಸಂಸಾರವನ್ನು ನಡೆಸಿ ತೋರಿಸುತ್ತಾಳೆ. ಹೆಣ್ಣಿನ ಅವಶ್ಯಕತೆಯಿಲ್ಲದೆ ಸಂಸಾರವನ್ನು ಗಂಡೊಬ್ಬನೇ ನಡೆಸುವುದು ಅಸಾಧ್ಯ. ಸಂಸಾರದ ರಥ ಸುಗಮವಾಗಿ ಸಾಗಬೇಕಾದರೆ ಇಂತಹ ದಿಟ್ಟ ಹೆಣ್ಣಿನ ಅಗತ್ಯವಿರುವುದನ್ನು ದೇಸಾಯಿಯವರು ಪ್ರತಿಪಾದಿಸುತ್ತಾರೆ. ಸಂಸಾರದ ನೊಗ ಹೊತ್ತುಕೊಂಡ ನಂದಿನಿ ಲಂಕೇಶರ 'ಅವ್ವ'ನನ್ನು ನೆನಪಿಸುತ್ತಾಳೆ.

ನಂದಿನಿಯಂತೆಯೇ ಮಹಾನಗರದಲ್ಲಿ ಬೆಳೆದ 'ಬೀಜ' ಕಾದಂಬರಿಯ ಕಲ್ಪನಾ ವಯಸ್ಸಿನಲ್ಲಿ ಕಿರಿಯವಳಾದರೂ ಪ್ರಬುದ್ಧವಾದ ವ್ಯಕ್ತಿತ್ವವನ್ನು ಒಳಗೊಂಡಿದ್ದಾಳೆ. ಮುಂಬೈಯಂತಹ ಮಹಾನಗರದಲ್ಲಿ ಬೆಳೆದ ಈಕೆ ನಗರ ಪ್ರಜ್ಞೆಯನ್ನು ಆಧುನಿಕ ಮನೋಭಾವವನ್ನು ಬೆಳೆಸಿಕೊಂಡಿದ್ದಾಳೆ. ಆಧುನಿಕ ಶಿಕ್ಷಣವನ್ನು ಈಕೆ ಪಡೆದಿರುವುದರಿಂದ ಪಾಶ್ಚಾತ್ಯ ವಿಚಾರಧಾರೆ ಅಸ್ತಿತ್ವವಾದವನ್ನು ಜೊತೆಗೆ ಪ್ರಪಂಚದ ಸತ್ಯಗಳಿಗೆ ತೆರೆದುಕೊಳ್ಳುವ ಉತ್ಸಾಹ ಆಕೆಗಿದೆ. ಅನುಭವಕ್ಕೆ ಒಡ್ಡಿಕೊಳ್ಳುವ ಆಸೆ ಇರುವ ಆಕೆ ತನ್ನ ಅನುಭವದ ಮೇಲೇ, ತನ್ನ ಸ್ವಂತ ಅನಿಸಿಕೆಯ ಮೇಲೆಯೇ, ಒಂದು ಸಂಗತಿಯನ್ನು ನಿರ್ಧರಿಸುತ್ತಾಳೆ. ನಂದಿನಿ ಸದಾಶಿವಯ್ಯನಿಗೆ ಮಾರ್ಗದರ್ಶಕಳಾಗಿದ್ದಂತೆಯೇ ಕಲ್ಪನಾ ತನ್ನ ತಂದೆ ಶ್ರೇಯಾಂಸನಿಗೂ ಮಾರ್ಗದರ್ಶಕಳಾಗಿದ್ದಾಳೆ. ಕಲ್ಪನಾಳ ತಂದೆ ಶ್ರೇಯಾಂಸ ಅವನ ತಂದೆಯೊಂದಿಗೆ ಸಂಪರ್ಕ ಕಳೆದುಕೊಂಡು ೨೦ ವರ್ಷಗಳೇ ಆಗಿದ್ದರೂ. "ಅಪ್ಪನ ಕೈಯಂತಹ ಕೈಗಳು ಅವನ ಬಣ್ಣವೇ ನನ್ನದು ಅವನ ಮೂಗಿನಂತೆಯೇ ನನ್ನ ಮೂಗು. ಅವನ ಅಕ್ಷರಗಳಂತೆಯೇ ನನ್ನ ಅಕ್ಷರಗಳು– ಅವನ ಹಟದಂತೆಯೇ ನನ್ನ ಹಟ ಅಪ್ಪ ನನ್ನ ತೀರ ಹತ್ತಿರದಲ್ಲಿದ್ದಾನೆ. ಇಲ್ಲ ಆತ ನನ್ನಲ್ಲಿಯೇ ಇದ್ದಾನೆ" (ಶಾಂತಿನಾಥ ದೇಸಾಯಿ, ಬೀಜ, ೨೦೦೨, ಪುಟ ೦೬) ಎಂದು ಹೇಳುವ ಮೂಲಕ ಶ್ರೇಯಾಂಸ ತನ್ನೂರಿಗೆ ಮರಳುವ ಆಸೆ ವ್ಯಕ್ತಪಡಿಸುತ್ತಾನೆ. ಇದಕ್ಕೆ ಹೆಂಡತಿ ಲಿಝಿ ವಿರೋಧಿಸಿದರೂ ಮಗಳು ಕಲ್ಪನಾ ಅಪ್ಪನಿಗೆ ಬೆಂಬಲ ನೀಡುತ್ತಾಳೆ. ತಂದೆಯ ಊರಿಗೆ ಬಂದ ಕಲ್ಪನಾ ತಂದೆಯ ಹಳೆಯ ಪ್ರೇಯಸಿ ರೇವತಿಯನ್ನು ಭೇಟಿ ಮಾಡಿ ಸ್ನೇಹ ಸಂಪಾದಿಸಿ ಅವಳ ಜೀವನದ ಕಥೆಯನ್ನು ತಿಳಿಯುತ್ತಾಳೆ. ಕೊನೆಗೆ ಕಲ್ಪನಾ, ರೇವತಿಯ ಪರಿಸ್ಥಿತಿ ಕಂಡು ಆಕೆಯನ್ನು ಕೈ ಬಿಡಬೇಡ ಎಂದು ತಂದೆಗೆ ಸಲಹೆ ನೀಡುತ್ತಾಳೆ. ಇದೇ ವಿಷಯಕ್ಕೆ ಗಂಡ–ಹೆಂಡತಿ ನಡುವೆ ಜಗಳವಾದಾಗ ಇಬ್ಬರನ್ನು ಸಮಾಧಾನ ಮಾಡುತ್ತಾಳೆ. ತಂದೆಯ ಕೆಲಸಗಳಿಗೆ ಸಹಕಾರವಿತ್ತ ಕಲ್ಪನಾ "ಡ್ಯಾಡಿಗೂ ಅವನದೇ ಆದ ವ್ಯಕ್ತಿತ್ವವಿದೆ.

ಅವನಿಗೂ ಸ್ವಾತಂತ್ರ್ಯ ಬೇಕು" (ಶಾಂತಿನಾಥ ದೇಸಾಯಿ, ಬೀಜ, ೨೦೦೨, ಪುಟ ೪೩) ಎಂದು ತಾಯಿಗೆ ಹೇಳುವಷ್ಟು ಪ್ರಬುದ್ಧ ಮನಸ್ಸಿನವಳಾಗಿದ್ದಾಳೆ. ಬಹುಶಃ ಆಕೆ ಬೆಳೆದ ವಾತಾವರಣ ಆಕೆ ಈ ರೀತಿ ಯೋಚಿಸುವಂತೆ ಮಾಡಿರಬಹುದು. ಕಲ್ಪನಾ ಆಧುನಿಕತೆ, ಸ್ವಾತಂತ್ರ್ಯದ ಮನಸ್ಸನ್ನು ಹೊಂದಿದ್ದರೂ ಮಾನವೀಯ ಗುಣಗಳನ್ನು ಆಕೆ ಮರೆತ್ತಿಲ್ಲ. ಆಧುನಿಕತೆ, ಮಾನವೀಯತೆ ಮತ್ತು ಮಹಿಳೆ ಒಂದೇ ದಾರಿಯಲ್ಲಿ ನಡೆಯಬೇಕೆಂಬುದಕ್ಕೆ ದೇಸಾಯಿಯವರು ಈ ಪಾತ್ರವನ್ನು ಸೃಷ್ಟಿ ಮಾಡಿದ್ದಾರೆ. ಆಧುನಿಕತೆ ಮತ್ತು ಮಾನವೀಯತೆ ಎರಡು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಎರಡು ಜೊತೆ ಜೊತೆಯಲ್ಲಿಯೇ ಸಾಗಬೇಕು. ಆ ಮೂಲಕ ಆಧುನಿಕ ಸಮಾಜದಲ್ಲಿಯೂ ಮಾನವೀಯತೆ ಮೂಡಲು ಸಾಧ್ಯ ಎಂಬುದನ್ನು ದೇಸಾಯಿಯವರು ಪ್ರತಿಪಾದಿಸಿದ್ದಾರೆ.

ಕಾಮದ ಬಯಕೆಯನ್ನು ಮದುವೆಯ ಚೌಕಟ್ಟಿನಲ್ಲಿಯೇ ತೀರಿಸಿಕೊಳ್ಳಬೇಕೆಂಬ ಧೋರಣೆಯನ್ನು ಭಾರತೀಯ ಸಂಸ್ಕೃತಿಯು ಹೊಂದಿದೆ. ಮದುವೆಯ ಹೊರಗಿನ ಕಾಮದಾಹದ ಈಡೇರಿಕೆ ಇಲ್ಲಿನ ಸಂಸ್ಕೃತಿಯಲ್ಲ. ಆದರೆ ಪಾಶ್ಚಾತ್ಯರಲ್ಲಿ ಮದುವೆಯ ಒಳಗೆಯೇ ಲೈಂಗಿಕತೆ ಇರಬೇಕೆಂಬ ಪರಿಕಲ್ಪನೆ ಅಲ್ಲಿಲ್ಲ. ವಿವಾಹೇತರ ಸಂಬಂಧವೇ ಅಲ್ಲಿ ಹೆಚ್ಚು. ಕುಟುಂಬ, ವಿವಾಹ, ಲೈಂಗಿಕತೆಗಳಿಗೆ ನಮ್ಮ ಸಂಸ್ಕೃತಿಯಲ್ಲಿ ಇರುವ ಪಾವಿತ್ರತೆ ಅಲ್ಲಿಲ್ಲ. ಆದರೆ ಪಾಶ್ಚಾತ್ಯರ ಪ್ರಭಾವಕ್ಕೆ ಒಳಗಾದ ಭಾರತೀಯರಲ್ಲಿ ವಿವಾಹೇತರ ಸಂಬಂಧ ಹೆಚ್ಚಾಗತೊಡಗಿತು. ಆಧುನಿಕತೆಯ ಭರಾಟೆಯಲ್ಲಿದ್ದ ಪುರುಷನ ವಿವಾಹೇತರ ಸಂಬಂಧವನ್ನು ಪ್ರಶ್ನಿಸಲು ಹೆಂಡತಿಗೆ ಸಾಧ್ಯವಾಗಲಿಲ್ಲ. ಮೊದ ಮೊದಲು ಮರ್ಯಾದೆಯ ಹೆಸರಿನಲ್ಲಿ ಹೆಂಡತಿ ಗಂಡನ ಅನೈತಿಕತೆಯನ್ನು ಸಹಿಸಿಕೊಳ್ಳುತ್ತಿದ್ದಳು. ಆದರೆ ನಂತರದ ದಿನಗಳಲ್ಲಿ ಆಕೆ ಅನೈತಿಕತೆ ಸಂಬಂಧ ಬೆಳೆಸಿರುವ ಗಂಡನನ್ನು ಪ್ರತಿಭಟಿಸಲು ಪ್ರಾರಂಭಿಸಿದಳು 'ಯಾಕೆ'? ಕತೆಯ ಪ್ರಮೀಳೆಯು ಮದುವೆಯಾಗಿ ನಾಲ್ಕೈದು ವರ್ಷ ಕಳೆದರೂ ತನಗೆ ಮಕ್ಕಳಾಗದಿರುವುದಕ್ಕೆ ತನ್ನ ಗಂಡನೇ ಕಾರಣವೆಂದು ಬಗೆದು ಸಂಸಾರದಲ್ಲಿ ಆಸಕ್ತಿ ಕಳೆದುಕೊಂಡಿರುತ್ತಾಳೆ. ಈ ನಡುವೆ ಹಿಂದೊಮ್ಮೆ ತಾನು ಪ್ರೀತಿಸಿದ ವ್ಯಕ್ತಿ ಅಮೇರಿಕಾದಿಂದ ಇವಳ ಮನೆಗೆ ಬಂದಿದ್ದಾಗ ಈಕೆ ಉತ್ಸಾಹದಿಂದ ಆತನ ಸತ್ಕಾರ ಮಾಡುತ್ತಾಳೆ. ಇದನ್ನು ಕಂಡ ಪ್ರಮೀಳೆಯ ಗಂಡ ಪ್ರಮೀಳೆಯ ಅನಾಸಕ್ತಿಗೆ ಇದೇ ಕಾರಣವೆಂದು ಬಗೆದು ಆಕೆಯ ಮುಂದೆ ಇದೇ ವಿಷಯವನ್ನು ಮಾತನಾಡಿ ಆಕೆಗೆ ನೋವನ್ನುಂಟು ಮಾಡುತ್ತಾನೆ. ಇದರಿಂದ ಮತ್ತಷ್ಟು ಬೇಸರಗೊಂಡ ಪ್ರಮೀಳೆ ತನ್ನ

ಶೀಲದ ಬಗ್ಗೆಯೇ ಮಾತನಾಡಿದ ಗಂಡನನ್ನು ಬಿಟ್ಟು ಹೋಗುವ ನಿರ್ಧಾರ ಮಾಡುತ್ತಾಳೆ.

ಜೀವನದ ಬಗ್ಗೆ ನಿರ್ಲಿಪ್ತ ಭಾವವನ್ನು ತಳೆದ 'ಕೂರ್ಮವತಾರ' ಕಥೆಯ ಪತಂಗರಾವ್ ಹೆಸರಿಗೆ ತಕ್ಕಂತೆ ಹೆಣ್ಣಿಂದ ಹೆಣ್ಣಿಗೆ ಹಾರುವ ಚಿಟ್ಟೆಯಾಗಿದ್ದಾನೆ. ಎಲ್ಲಾ ರೀತಿಯ ಕೆಟ್ಟ ಹವ್ಯಾಸಗಳು ಇವನಿಗೆ ರಕ್ತಗತವಾಗಿದೆ. ತನ್ನ ಮನೆಯ ಕೆಲಸದಾಳು ಸೋನುಬಾಯಿ ಜೊತೆ ಅನೈತಿಕ ಸಂಬಂಧವನ್ನು ಈತ ಇಟ್ಟುಕೊಳ್ಳುತ್ತಾನೆ. ಇಳಿ ವಯಸ್ಸಿಗೆ ಬಂದರೂ ಪತಂಗರಾವ್ ಇದೇ ರೀತಿ ನಡೆಯಲು ಮುಂದವರೆಸಿದನು. ಗಂಡನ ಈ ರೀತಿಯ ಜೀವನ ಕ್ರಮದಿಂದ ರೋಸಿ ಹೋದ ಪತ್ನಿ ಜೀಜಾಬಾಯಿ "ನಾನು ಹೋಗುತ್ತಿರುವೆ–ಮನೆ ಬಿಟ್ಟು ಹೋಗುತ್ತಿರುವೆ ನೀವು ಒಬ್ಬರೇ ಇರಲು ಸಮರ್ಥರು. ನಿಮಗೆ ನನ್ನ ಅವಶ್ಯಕತೆ ಇಲ್ಲ. ನನ್ನ ಅವಶ್ಯಕತೆ ಇದ್ದ ಒಬ್ಬ ವ್ಯಕ್ತಿ ಈ ಜಗತ್ತಿನಲ್ಲಿದ್ದಾನೆ. ಅವನ ಕೂಡ ನಾನು ಹೋಗುತ್ತಿರುವೆ" (ಶಾಂತಿನಾಥ ದೇಸಾಯಿ, ಸಮಗ್ರ ಕತೆಗಳು, ೨೦೦೧, ಪುಟ ೦೯) ಎಂದು ಪತ್ರ ಬರೆದು ಗಂಡನ ಮನೆ ಬಿಟ್ಟು ಹೋಗುತ್ತಾಳೆ. ಜೀಜಾಬಾಯಿ ಇಲ್ಲಿ ಬೇಜವಾಬ್ದಾರಿತನದಿಂದ, ಅನೈತಿಕತೆಯಿಂದ ವರ್ತಿಸುತ್ತಿದ್ದ ತನ್ನ ಗಂಡನನ್ನು ಈ ವಯಸ್ಸಿನಲ್ಲಿ ಬಿಟ್ಟು ಹೋಗುವ ಮನಸ್ಸು ಮಾಡಿದ್ದಾಳೆ. ಅಲ್ಲದೆ ಬಾಳಸಂಗಾತಿಯಾಗಿ ಇನ್ನೊಬ್ಬನನ್ನು ಆರಿಸಿಕೊಳ್ಳುವಷ್ಟು ದಿಟ್ಟ ಮನಸ್ಸು ಮಾಡಿದ್ದಾಳೆ.

ಇನ್ನೊಬ್ಬ ಸ್ತ್ರೀಯ ಜೊತೆ ತನ್ನ ಗಂಡ ಸಂಬಂಧವನ್ನು ಇಟ್ಟುಕೊಂಡಿದ್ದಾನೆಂದು ತಿಳಿದ ಮೇಲೂ 'ಬಿಡುಗಡೆ' ಕಥೆಯ ಮೀನಾ ಆತನೊಂದಿಗೆ ಜೀವನ ನಡೆಸುತ್ತಿರುತ್ತಾಳೆ. ಆದರೆ ಮನಸ್ಸಿನಲ್ಲಿ ಗಂಡನ ಅನೈತಿಕತೆಯ ಬಗ್ಗೆ ಬೇಸರವಿರುತ್ತದೆ. ಆದರೂ ಅದನ್ನು ಪ್ರತಿಭಟಿಸುವ ಹಂತಕ್ಕೆ ಮೀನಾ ಹೋಗುವುದಿಲ್ಲ. ಕೊನೆಗೊಂದು ದಿನ ಆಕೆಯ ಗಂಡನೇ ಇನ್ನೊಬ್ಬಳೊಂದಿಗೆ ಓಡಿ ಹೋದಾಗ ಯಾವುದೇ ಬೇಸರ, ಭಯವನ್ನು ವ್ಯಕ್ತಪಡಿಸದೆ ಆತನಿಂದ ಬಿಡುಗಡೆ ಸಿಕ್ಕಿತೆಂದು ಸಮಾಧಾನಪಡುತ್ತಾಳೆ. "ಲೋಕದ ಗಂಡಂದಿರನ್ನೊಯ್ದು ಒಲೆಯೊಳಗಿಕ್ಕು" ಎಂದು ನುಡಿದ ೧೨ನೇ ಶತಮಾನದ ಅಕ್ಕಮಹಾದೇವಿಯ ಕೆಚ್ಚು ಮೀನಾಳಿಗೆ ಇಲ್ಲದಿದ್ದರೂ ಒಂಟಿಯಾಗಿ ಜೀವಿಸಬಹುದೆಂಬ ಆತ್ಮವಿಶ್ವಾಸವಿದೆ. ಪ್ರಮೀಳೆ, ಜೀಜಾಬಾಯಿಯರಂತೆ ಗಂಡಂದಿರನ್ನು ನೇರವಾಗಿ ಪ್ರತಿಭಟಿಸಲು ಮೀನಾ ಹೋಗುವುದಿಲ್ಲ. ಗಂಡ ತನ್ನನ್ನು ಬಿಟ್ಟು ಹೋಗಿದ್ದಾನೆ, ಮುಂದೆ ಈ ಸಮಾಜದಲ್ಲಿ ಒಂಟಿಯಾಗಿ ಹೇಗೆ ಜೀವನ ನಡೆಸುವುದು? ಎಂಬ ಭಯ ಅವಳಲ್ಲಿ ಇಲ್ಲ. ಅನೈತಿಕತೆಯಿಂದ ಕೂಡಿದ ಗಂಡನ

ಜೊತೆ ಸಂಸಾರ ಮಾಡುವ ಬದಲು ಒಂಟಿಯಾಗಿ ಜೀವನ ನಡೆಸಬಹುದೆಂಬ ನಂಬಿಕೆ ಅವಳಲ್ಲಿದೆ. ಅನೈತಿಕತೆ, ಬೇಜವಾಬ್ದಾರಿತನ, ಸಂಶಯದ ಗುಣ ಇವೆಲ್ಲಾ ತನ್ನ ಜೀವನದ ಮೌಲ್ಯಗಳೆಂದು ಮೆರೆಯುತ್ತಿದ್ದ ಪುರುಷನನ್ನು ಧಿಕ್ಕರಿಸಿ ಹೋಗುವ, ಪ್ರತಿಭಟಿಸುವ ಧ್ವನಿ ದೇಸಾಯಿಯವರ ಕಥನ ಸಾಹಿತ್ಯದ ಮಹಿಳೆಯರಿಗಿದೆ. ಪಾಲಿಗೆ ಬಂದದ್ದೇ ಪಂಚಾಮೃತ ಎಂದು ಇಂತಹ ಪುರುಷರನ್ನೇ ಸಹಿಸಿ ಬಾಳುವೆ ಮಾಡುವುದು ದೇಸಾಯಿಯವರ ಕಥನ ಸಾಹಿತ್ಯದ ಮಹಿಳೆಯರ ಜಾಯಮಾನವಲ್ಲ. ಪುರುಷ ಸಮಾಜದ ವಿರುದ್ಧ ೧೨ನೇ ಶತಮಾನದಲ್ಲಿ ಮೊದಲ ಪ್ರತಿಭಟನೆಯ ಧ್ವನಿ ಕೇಳಿ ಬಂದರೆ ನಂತರ ದೇಸಾಯಿಯವರ ಕಥನ ಸಾಹಿತ್ಯದಲ್ಲಿ ಅನೇಕ ಅಕ್ಕಮಹಾದೇವಿಯಂತಹವರು ತಮ್ಮ ತಮ್ಮ ಚೌಕಟ್ಟಿನಲ್ಲಿಯೇ ಪುರುಷರ ಅನೈತಿಕತೆಯ ವಿರುದ್ಧ ಪ್ರತಿಭಟಿಸುತ್ತಾರೆ.

ಜೀವನದಲ್ಲಿ ಬರುವ ಸಮಸ್ಯೆಗಳ ವಿರುದ್ಧ ಹೋರಾಡುವ ದಿಟ್ಟ ಮಹಿಳೆಯರ ಜೊತೆಗೆ 'ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿಯುವ' ಮಹಿಳೆಯರು ಕೂಡ ಇವರ ಸಾಹಿತ್ಯದಲ್ಲಿ ಕಾಣಸಿಗುತ್ತಾರೆ. ದೇಸಾಯಿಯವರು ಜೀವನದಲ್ಲಿ ಅದು ಬೇಕು, ಇದು ಬೇಕು ಎಂದು ಯಾವುದಕ್ಕೋ ಹಂಬಲಿಸುವ ಅತೃಪ್ತ ಹೆಣ್ಣು, ಜೀವನವನ್ನು ಗಂಭೀರವಾಗಿ ತೆಗೆದುಕೊಳ್ಳದ, ಅಸೂಯೆ, ಹೊಟ್ಟೆ ಕಿಚ್ಚು ಮುಂತಾದ ಕೆಟ್ಟಗುಣಗಳನ್ನು ಹೊಂದಿರುವ ಮಹಿಳೆಯರ ವ್ಯಕ್ತಿತ್ವವನ್ನು ಅನಾವರಣ ಮಾಡಿದ್ದಾರೆ. 'ಬೀಜ' ಕಾದಂಬರಿಯ ನಿರ್ಮಲೆ ಈ ರೀತಿಯ ಹೆಣ್ಣು ಮಗಳಾಗಿದ್ದಾಳೆ. ಹೆಚ್ಚು ತಿಳುವಳಿಕೆಯಿಲ್ಲದ ಹೆಣ್ಣಾದ ನಿರ್ಮಲೆ ಗೋವಾದ ಮೂಲದವಳು. ಶ್ರೇಯಾಂಸನ ಗೆಳೆಯ ವಸಂತನ ಹೆಂಡತಿ ಮದುವೆಯಾಗಿ ಬಹಳ ವರ್ಷಗಳೇ ಆದರೂ ತನಗೆ ಮಕ್ಕಳಾಗದಿರುವುದಕ್ಕೆ ತನ್ನ ಗಂಡನೇ ಕಾರಣವೆಂದು ಭಾವಿಸಿ ಆತನ ಜೀವನವನ್ನು ನರಕವನ್ನಾಗಿಸಿದ್ದಾಳೆ. ಜನರ ಜೊತೆ ಹರಟೆ ಕೊಚ್ಚುವುದರಲ್ಲೇ ತನ್ನ ದಿನದ ಬಹುಪಾಲು ಸಮಯವನ್ನು ಕಳೆಯುತ್ತಾಳೆ. ಎಲ್ಲಿ ಹೇಗೆ ಯಾರ ಜೊತೆ, ಯಾವ ರೀತಿ ನಡೆದುಕೊಳ್ಳಬೇಕೆಂಬ ವಿವೇಕವಿಲ್ಲದೆ ಬೇರೊಬ್ಬರ ಬಗ್ಗೆ ಸದಾ ಹೊಟ್ಟೆಕಿಚ್ಚು ಪಡುತ್ತಾ ಇರುವ, ಜೀವನದ ಬೆಲೆ ಗೊತ್ತಿಲ್ಲದೆ ಹಾಳು ಮಾಡಿಕೊಳ್ಳುವ ಮನಸ್ಸಿನವಳಾಗಿದ್ದಾಳೆ. "ನಮ್ಮ ದೇಶದಲ್ಲಿ ಬರೇ ಚಿಕ್ಕಮಕ್ಕಳನ್ನಷ್ಟೇ ಯಾಕೆ ಸಾಲೆಗೆ ಕಳುಹಿಸುತ್ತಾರೋ? ನನಗೆ ಕೇಳಿದರೆ ದೊಡ್ಡವರಿಗೂ ಅವರ ಮಾನಸಿಕ ವಯಸ್ಸಿನ ಪ್ರಕಾರ ಸಾಲೆಗೆ ಕಳಿಸಬೇಕು. ಈ ನಿರ್ಮಲೆಯನ್ನು ನಾನು ನಾಲ್ಕನೆಯ ಇಯತ್ತೆಯಲ್ಲಿ ಹಾಕಿ, ಬಹಳಷ್ಟು ಹೋಮ್‌ವರ್ಕ್ ಕೊಟ್ಟು, ಚೆನ್ನಾಗಿ ಥಳಿಸಿ, ಸಾಲೆ ಕಲಿಸುತ್ತಿದ್ದೆ... ಛೇ ಇಂಥ ಅಶಿಕ್ಷಿತ ಜನರೇ ನಮ್ಮ ದೇಶದಲ್ಲಿ ಹೆಚ್ಚು" (ಶಾಂತಿನಾಥ ದೇಸಾಯಿ. ಬೀಜ.

೨೦೦೨, ಪುಟ ೧೮೫) ಲಿಝಿಯ ಈ ಮಾತುಗಳೇ ನಿರ್ಮಲೆಯ ವ್ಯಕ್ತಿತ್ವವನ್ನು ಕುರಿತು ಹೇಳುತ್ತವೆ. "ಡಾಲಿ ಸಂಕೇತಿಸುವ ಮೌಲ್ಯಗಳೆಂದರೆ ಪ್ರೇಮ ಕಾಮಗಳ ಮಿಲನ, ವಿಶಾಲವಾದ ಸಹಾನುಭೂತಿ, ನಿರ್ಲಿಪ್ತತೆ, ಜೀವನದ ಸೀಮಿತತೆಯ ಅರಿವು ಇಟ್ಟುಕೊಂಡು ಜೀವನಾನುಭವದ ಬಗ್ಗೆ ಸಂಪೂರ್ಣ ಸ್ವೀಕಾರ ಭಾವ ಇತ್ಯಾದಿ, ಇತ್ಯಾದಿ ಅವಳು ಕ್ರಿಶ್ಚಿಯನ್ನಾಗಿದ್ದರೂ, ಕೊನೆಗೆ ಅವಳನ್ನು ವರ್ಜಿನ್ ಮೇರಿಗೆ ಹೋಲಿಸಿದ್ದುದು ಅತ್ಯಂತ ಅರ್ಥಪೂರ್ಣವಾದ ಮಾತು" (ಗಂಗನಾಯಕ್, ಡಾ.ಶಾಂತಿನಾಥ ದೇಸಾಯಿಯವರ ಸಾಹಿತ್ಯ ಒಂದು ಅಧ್ಯಯನ, ೨೦೦೧, ಪುಟ ೧೪೭) ಎಂದು ದೇಸಾಯಿಯವರು ಡಾಲಿ ಪಾತ್ರದ ಬಗ್ಗೆ ಅಭಿಪ್ರಾಯಪಟ್ಟಿದ್ದಾರೆ. ಇಂತಹ ಜೀವನಾನುಭವ ಇರುವ ಡಾಲಿಯಂತಹ ಮಹಿಳೆಯರ ಜೊತೆ ಜೊತೆಯಲ್ಲಿಯೇ ನಿರ್ಮಲೆಯಂತಹ ಮಹಿಳೆಯೂ ಸಹ ಇವರ ಕಥನ ಸಾಹಿತ್ಯದಲ್ಲಿ ಮೂಡಿ ಬಂದಿದ್ದಾರೆ.

ಎಂ.ಎನ್.ರಾಯ್ ಅವರ ನವ ಮಾನವತಾವಾದವನ್ನು ಚೆನ್ನಾಗಿ ಅರಿತು ಅದರ ಪ್ರಭಾವಕ್ಕೆ ದೇಸಾಯಿಯವರು ಒಳಗಾಗಿದ್ದಾರೆ. ಆದ್ದರಿಂದಲೇ ದೇಸಾಯಿಯವರು ತಮ್ಮ ಕಥನ ಸಾಹಿತ್ಯದಲ್ಲಿ ಮಾನವತಾವಾದವನ್ನು ತರಲು ಪ್ರಯತ್ನಿಸಿದ್ದಾರೆ. ಮನುಷ್ಯ ಸಂಬಂಧಗಳ ನಡುವಿನ ಸತ್ಯ ಅರಿಯುವ ಪ್ರಯತ್ನವನ್ನು ಇವರ ಕಥನ ಸಾಹಿತ್ಯ ಪ್ರತಿ ಹಂತದಲ್ಲೂ ಮಾಡುತ್ತಲೇ ಇರುತ್ತದೆ. ಲೈಂಗಿಕತೆಯ ಮೂಲಕ ಗಂಡು-ಹೆಣ್ಣಿನ ಸಂಬಂಧವು ಮತ್ತಷ್ಟು ಹತ್ತಿರವಾಗುತ್ತದೆ ಎಂದು ದೇಸಾಯಿಯವರು ಒಂದು ಕಡೆ ಪ್ರತಿಪಾದಿಸುತ್ತಾರೆ. ಆದರೆ, ಲೈಂಗಿಕತೆಗಿಂತ ಮನುಷ್ಯ-ಮನುಷ್ಯರ ನಡುವೆ ಪ್ರೀತಿ ಇದ್ದರೆ ಅವರಿಬ್ಬರ ಸಂಬಂಧ ಬಹಳಷ್ಟು ಗಟ್ಟಿಯಾಗುತ್ತದೆ ಎಂದು 'ಸಂಬಂಧ' ಕಾದಂಬರಿಯ ಶೀತಲಕುಮಾರ ಮತ್ತು ರಾಧಿಕೆಯರ ಮೂಲಕ ಸಾಬೀತು ಪಡಿಸುತ್ತಾರೆ. ಆದ್ದರಿಂದಲೇ ರಾಧಿಕೆ, ಶೇಖರ್ ಮತ್ತು ರಮೇಶ್‌ರನ್ನು ದೈಹಿಕವಾಗಿ ಕೂಡಿದರೂ ಅವರ ಸಂಬಂಧ ಹೆಚ್ಚು ದಿನ ಉಳಿಯುವುದಿಲ್ಲ. ಬದಲಿಗೆ ಆಕೆ ನಿಜವಾದ ಪ್ರೀತಿ ತೋರಿಸುವ ಕಡೆ ಹೋಗಲು ಆಸೆಪಡುತ್ತಾಳೆ. ರಾಧಿಕೆ, ಶೀತಲಕುಮಾರನ ಸಹಾಯದಿಂದ ಜೀವನದಲ್ಲಿ ಹೊಸ ಅನುಭವವನ್ನು ಪಡೆಯುತ್ತಾಳೆ. ಅವಳ ಪಾಲಿಗೆ ಶೀತಲಕುಮಾರ ಮೊದಲು ಪ್ರೇಮಿ, ನಂತರ ಅಣ್ಣ, ಆನಂತರ ಸ್ನೇಹಿತ ಕೊನೆಗೆ ತಂದೆಯಾಗುತ್ತಾನೆ. ಸಂಪ್ರದಾಯದ ಗೊಡ್ಡು ಪರಂಪರೆಯ ಬಂಧನದಿಂದ ರಾಧಿಕೆ ಶೀತಲಕುಮಾರನ ಸಹಾಯದಿಂದ ಬಿಡುಗಡೆ ಹೊಂದುತ್ತಾಳೆ. ತನ್ನ ಮತ್ತು ಶೀತಲಕುಮಾರರ ನಡುವಿನ ಪ್ರೀತಿಯ ಕಾರಣಕ್ಕಾಗಿಯೇ ರಾಧಿಕೆ ತಾನು ಶೇಖರ್‌ನಿಂದ ಪಡೆದ ಮಗುವಿಗೆ ಶೀತಲಕುಮಾರ ಎಂದು

ಹೆಸರಿಡುತ್ತಾಳೆ. ಆ ಮೂಲಕ ತನ್ನ ಮತ್ತು ಶೀತಲಕುಮಾರನ ನಡುವಿನ ಅಂತರಂಗದ ಪ್ರೀತಿಯನ್ನು ಮತ್ತಷ್ಟು ಗಟ್ಟಿಗೊಳಿಸುತ್ತಾಳೆ.

ಮಹಿಳೆಯನ್ನು ಭಾರತೀಯ ಸಂಸ್ಕೃತಿ ಬಹು ಹಿಂದಿನಿಂದಲೂ ದಾಸ್ಯದಲ್ಲಿಯೇ ಇಡುವ ಪ್ರಯತ್ನ ಮಾಡಿದೆ. "ಪಿತಾ ರಕ್ಷತಿ ಕೌಮಾರೇ, ಭರ್ತಾ ರಕ್ಷತಿ ಯೌವನೇ, ಪುತ್ರೋ ರಕ್ಷತಿ ವಾರ್ಧಕ್ಯೇ" ಎಂದು ಹೇಳಿ ಮಹಿಳೆಯನ್ನು ಸದಾ ಗಂಡಿನ ಆಶ್ರಯದಲ್ಲೇ ಇರುವಂತೆ ಮಾಡಿದ್ದಾರೆ. ಪುರುಷನಿಗೆ ಮಾತ್ರ ಎಲ್ಲಾ ರೀತಿಯ ಸೌಲಭ್ಯಗಳನ್ನು ಈ ಸಮಾಜ ನೀಡಿ ಮಹಿಳೆಗೆ ಮಾತ್ರ ಆ ರೀತಿಯ ಸೌಲಭ್ಯಗಳಿಂದ ವಂಚಿತಳಾಗಿ ಮಾಡಿದೆ. ಅದರಲ್ಲಿ ಶಿಕ್ಷಣ ಸೌಲಭ್ಯ ಕೂಡ ಒಂದಾಗಿದೆ. ಪುರುಷ ಕೇಂದ್ರ ಈ ಸಮಾಜದಲ್ಲಿ ಪುರುಷನಿಗೆ ಮಾತ್ರ ವಿದ್ಯೆ ಕಲಿಯುವ ಎಲ್ಲಾ ರೀತಿಯ ಸ್ವಾತಂತ್ರ್ಯ ನೀಡಿದೆ. ಆದರೆ ಈ ಸೌಲಭ್ಯ ಮಹಿಳೆಗಿಲ್ಲ. ಆದರೆ ೧೮ನೇ ಶತಮಾನದಲ್ಲಿ ಬ್ರಿಟಿಷರು ಭಾರತವನ್ನು ಆಡಳಿತಕ್ಕೊಳಪಡಿಸಿ ಏಕರೂಪ ಶಿಕ್ಷಣವನ್ನು ಜಾರಿಗೆ ತಂದ ನಂತರ ಮಹಿಳೆಗೂ ಕೂಡ ವಿದ್ಯೆ ಪಡೆಯುವ ಸೌಲಭ್ಯ ದೊರಕಿತು. ಅದರ ಪರಿಣಾಮವಾಗಿ ಮಹಿಳೆ ಕೂಡ ಶಿಕ್ಷಣ ಪಡೆಯುವ ಸೌಲಭ್ಯವನ್ನು ಪಡೆದಳು. ಆಧುನಿಕ ಶಿಕ್ಷಣವನ್ನು ಪಡೆದು ಬೌದ್ಧಿಕತೆಯಲ್ಲಿ ಪುರುಷರಿಗೆ ಸರಿಸಮಾನವಾಗಿ ನಿಲ್ಲಬೇಕೆಂಬ ತಹತಹಿಕೆ ದೇಸಾಯಿಯವರ ಕಥನ ಸಾಹಿತ್ಯದ ಮಹಿಳೆಯಲ್ಲಿ ಕಾಣಸಿಗುತ್ತದೆ. ಕೇವಲ ಆಧುನಿಕ ಶಿಕ್ಷಣ ಮಾತ್ರವಲ್ಲದೆ ಉನ್ನತ ಶಿಕ್ಷಣಕ್ಕಾಗಿ ಬೇರೆ ದೇಶಕ್ಕೂ ಹೋಗುವಷ್ಟು ದಿಟ್ಟತನವನ್ನು ಈ ಮಹಿಳೆಯರು ತೋರಿಸುತ್ತಾರೆ. ಭಾರತೀಯ ಸಂಸ್ಕೃತಿಯಲ್ಲಿಯೇ ಬೆಳೆದ 'ಕ್ಷಿತಿಜ' ಕಥೆಯ ಮಂದಾಕಿನಿ ಉನ್ನತ ವಿದ್ಯಾಭ್ಯಾಸಕ್ಕಾಗಿ ಲಂಡನ್‌ಗೆ ಹೋಗುತ್ತಾಳೆ. ಈಕೆ ತನ್ನವರನ್ನೆಲ್ಲಾ ಬಿಟ್ಟು, ಹುಟ್ಟಿದ ಊರನ್ನು ಬಿಟ್ಟು, ಒಬ್ಬಂಟಿಯಾಗಿ ಲಂಡನ್‌ಗೆ ಹೋಗುವ ನಿರ್ಧಾರ ಮಾಡುತ್ತಾಳೆ. ಒಂಟಿತನದ ಭಯ, ಜ್ಞಾನಾರ್ಜನೆಯ ಮುಂದೆ ನಿಲ್ಲದೆ ಧೈರ್ಯದಿಂದ ಹೊಸ ಜಗತ್ತಿಗೆ ಹೋಗಲು ತಯಾರಾಗುತ್ತಾಳೆ. ಹಡಗಿನ ಪರಿಸರ ಮಂದಾಕಿನಿಗೆ ಮೊದಮೊದಲು ಆಘಾತವನ್ನು ಉಂಟು ಮಾಡಿದರೂ ಬದುಕು ಕ್ಷಿತಿಜದಂತೆ ವಿಶಾಲವಾದದು ಎಂದು ತಿಳಿದು ನಿಧಾನವಾಗಿ ಆ ಪರಿಸರಕ್ಕೆ ಹೊಂದಿಕೊಳ್ಳುತ್ತಾಳೆ. ಆ ಸಂಸ್ಕೃತಿಯ ರೀತಿ-ನೀತಿಗಳ ಬಗ್ಗೆ ಹೆಚ್ಚು ತಲೆಕೆಡಿಸಿಕೊಳ್ಳದೆ ತನ್ನ ವಿದ್ಯಾಭ್ಯಾಸದ ಕಡೆ ಗಮನ ಹರಿಸುತ್ತಾಳೆ. ವಿದ್ಯೆ ಅವಳ ಮುಖ್ಯ ಗುರಿಯಾಗುತ್ತದೆ. ಮಂದಾಕಿನಿಯು ಉನ್ನತ ಶಿಕ್ಷಣ ತಹತಹಿಕೆಯ ಮೂಲಕ ಭಾರತದ ವಿದ್ಯಾವಂತ ಜನಾಂಗದ ಮೊದಲ ಪೀಳಿಗೆಯಾಗಿದ್ದಾಳೆ. ಈಕೆಯ ಮೂಲಕ ಮಹಿಳೆಗೂ ಕೂಡ ಪುರುಷನಷ್ಟೇ ವಿದ್ಯೆ ಪಡೆಯುವ ಹಕ್ಕಿದೆ ಎಂಬುದನ್ನು ದೇಸಾಯಿಯವರು ಪ್ರತಿಪಾದಿಸಿದ್ದಾರೆ.

"ಹೆಂಗಸು ಅವಲಂಬಿತ ಜೀವಿ...." (ಎಚ್.ಎಸ್. ಪಾರ್ವತಿ, ಸೆಕೆಂಡ್ ಸೆಕ್ಸ್ ಒಂದು ಕನ್ನಡದ ಓದು, ೨೦೦೭, ಪುಟ ೨೭) ಎಂದೇ ಮಿಷೆಲ್ ಹೇಳುತ್ತಾನೆ. ಬೆಂಡ ತನ್ನ 'ರ್‍ಯಾಪೋರ್ಟ್ ಡಿ ಯು ರೀಲ್' (Rapport de' Uriel) ನಲ್ಲಿ ಗಂಡಸಿನ ದೇಹ ತನ್ನಷ್ಟಕ್ಕೆ ತಾನು ಅರ್ಥ ಪೂರ್ಣವಾದುದು. ಅದಕ್ಕೆ ಹೆಂಗಸಿನೊಡನೆ ಯಾವ ಸಂಬಂಧವೂ ಇಲ್ಲ. ಆದರೆ ಹೆಂಗಸಿನ ದೇಹಕ್ಕೆ ಹೀಗೆ ಈ ಗುಣಗಳಿಲ್ಲದ ಕೊರತೆ ಇದೆ. ಗಂಡಸು ಹೆಂಗಸಿಲ್ಲದೆಯೂ ತಾನೇ ತನ್ನ ಬಗ್ಗೆ ಯೋಚಿಸಬಲ್ಲ. ಹೆಂಗಸು ಮಾತ್ರ ಗಂಡಸನ್ನು ಹೊರತುಪಡಿಸಿ ತನ್ನ ಬಗ್ಗೆ ಯೋಚಿಸಲಾರಳು ಎಂದು ಹೇಳಿದ್ದಾನೆ. ಈ ಮಾತಿಗೆ ದೇಸಾಯಿಯವರ ಕಥನ ಸಾಹಿತ್ಯದಲ್ಲಿ ಯಾವುದೇ ಬೆಲೆ ಇಲ್ಲ. ಬದಲಿಗೆ ಮಹಿಳೆ ದೇಸಾಯಿಯವರ ಕಥನ ಸಾಹಿತ್ಯದಲ್ಲಿ ಗಂಡಿನ ಜೀವನದ ಅವಿಭಾಜ್ಯ ಅಂಗವಾಗಿದ್ದಾಳೆ. ದ್ವಂದ್ವದಿಂದ ಕೂಡಿದ, ದುರ್ಬಲ ಮನಸ್ಸಿನ, ಬೇಜವಾಬ್ದಾರಿಯುತನಾದ ಯಾವುದೇ ಚಲನೆಯಿಲ್ಲದ, ಅಸಹಾಯಕತೆಯಿಂದ ಕೂಡಿದ ಇವರ ಕಥನ ಸಾಹಿತ್ಯ ಪುರುಷ ಪಾತ್ರಗಳಿಗೆ ಉತ್ಸಾಹ ತುಂಬುವ ಚಲನಶೀಲ ವ್ಯಕ್ತಿಯಾಗಿ ಮಹಿಳೆ ಕಾಣಸಿಗುತ್ತಾಳೆ. ಡಾಲಿ, ಮಾಧವಿ, ಕಲ್ಪನಾ, ನಂದಿನಿ ಮೊದಲಾದ ಮಹಿಳಾ ಪಾತ್ರಗಳು ದೇಸಾಯಿಯವ ಕಥನ ಸಾಹಿತ್ಯದ ಪುರುಷ ಪಾತ್ರಗಳಿಗೆ ಚೈತನ್ಯ ತುಂಬಿ, ಆತನ ವ್ಯಕ್ತಿತ್ವಕ್ಕೆ ಪೋಷಕವಾಗುತ್ತವೆ. "ಸ್ತ್ರೀ ಶಕ್ತಿ ಇಲ್ಲದೆ ಜಗತ್ತೇ ನಡೆಯುವುದಿಲ್ಲ. ಸೃಷ್ಟಿಗೂ ಆ ಶಕ್ತಿ ಬೇಕು. ಸಂಹಾರಕ್ಕೂ ಆ ಶಕ್ತಿ ಬೇಕು" (ಶಾಂತಿನಾಥ ದೇಸಾಯಿ, ಸಂಬಂಧ, ೨೦೦೩, ಪುಟ ೫೮) ಎಂಬ ಮಾತನ್ನು ನಂಬಿರುವ ಶಾಂತಿನಾಥ ದೇಸಾಯಿಯವರು ತಮ್ಮ ಕಥನ ಸಾಹಿತ್ಯದಲ್ಲಿ ಮಹಿಳೆಗೆ ಪ್ರಧಾನ ಸ್ಥಾನವನ್ನು ನೀಡಿದ್ದಾರೆ. ದ್ವಂದ್ವದಿಂದ, ಅಸಹಾಯಕತೆ, ಅನೈತಿಕತೆಯಿಂದ ನರಳುವ ಇವರ ನಾಯಕರನ್ನು ಅದರಿಂದ ಬಿಡುಗಡೆಗೊಳಿಸಿ ಅವರಿಗೊಂದು ಸ್ಥಾನ ದೊರಕಿಸಿ ಕೊಡುವಲ್ಲಿ ಮಹಿಳೆ ಪ್ರಮುಖ ಪಾತ್ರ ವಹಿಸುತ್ತಾಳೆ. ಸ್ತ್ರೀಯೇ ಜೀವ ಶಕ್ತಿಯ ಆದ್ಯ ಸಾಧನ ಎಂಬ ಬರ್ನಾಡ್ ಷಾ ನ ಸಿದ್ಧಾಂತಕ್ಕೆ ಬದ್ಧರಾಗಿರುವ ದೇಸಾಯಿಯವರು ತಮ್ಮ ಕಥನ ಸಾಹಿತ್ಯದಲ್ಲಿ ಮಹಿಳೆಗೆ ಮಹತ್ವ ನೀಡಿದ್ದಾರೆ. ಡಾಲಿ, ಮಾಧವಿ, ಕಲ್ಪನಾ, ನಂದಿನಿ, ಗೌರಿ, ನಿರ್ಮಲೆ, ಮಂದಾಕಿನಿ, ರಾಧಿಕಾ ಈ ಮೊದಲಾದವರು ದೇಸಾಯಿಯವರ ಕಥನ ಸಾಹಿತ್ಯದಲ್ಲಿ ಸೃಷ್ಟಿಯಾಗಿ, ಸಂಹಾರವಾಗಿ ನಿಲ್ಲುತ್ತಾರೆ.

# ಅಧ್ಯಾಯ-೫

# ಯಶವಂತ ಚಿತ್ತಾಲ ಅವರ ಕಥನ ಸಾಹಿತ್ಯದಲ್ಲಿ ಮಹಿಳೆ

ನವಮಾನವತಾವಾದದ ಮಾರ್ಕ್ಸ್, ಎರಿಕ್ ಫ್ರಾಂ ಹಕ್ಸ್ಲಿ, ಎಡ್ಲರ್, ಎಡಿಂಗ್‌ಟನ್, ಫ್ರಾಯ್ಡ್, ಮೊದಲಾದ ಧೀಮಂತರ ವಿಚಾರಗಳಿಗೆ ತಮ್ಮ ಮನಸ್ಸನ್ನು ತೆರೆದುಕೊಂಡ ಚಿತ್ತಾಲರು ತಮ್ಮ ಕಥನ ಸಾಹಿತ್ಯದಲ್ಲಿ ಮನುಷ್ಯ ಸಂಬಂಧದ ಸೂಕ್ಷ್ಮಗಳನ್ನು ಆಳವಾಗಿ ಅಭಿವ್ಯಕ್ತಿಸಿದ್ದಾರೆ. ಇಂದಿನ ಸಮಾಜದಲ್ಲಿ ನಾವು ಮನುಷ್ಯರಾಗಿ ಇರಲು ಆರಿಸಿ ಕೊಳ್ಳಬಹುದಾದ ಜೀವಂತ ಮಾಧ್ಯಮಗಳಲ್ಲಿ ಸಾಹಿತ್ಯವೂ ಒಂದಾಗಿದೆ ಮಾತ್ರವಲ್ಲ ಮನುಷ್ಯ ತನ್ನ ಬದುಕಿನ ನಕಾಶೆಯಲ್ಲಿ ಮೂಡಿಸಿಕೊಳ್ಳಲೇಬೇಕಾದ ಅತ್ಯಂತ ಮೌಲಿಕ ಸಂಗತಿಗಳಲ್ಲಿ ಕೆಲವು ಸಂಗತಿಗಳು ಸಾಹಿತ್ಯದಿಂದ ಮಾತ್ರ ಒದಗಬಲ್ಲಂಥವುಗಳಾಗಿವೆ ಎಂದು ಹೇಳುವ ಚಿತ್ತಾಲರು ಈ ಹಿನ್ನೆಲೆಯಲ್ಲಿ ಸಾವು, ಕಾಮ, ಕೇಡು, ಪ್ರೀತಿ, ಮಾನಸಿಕ ಸಂಘರ್ಷಗಳನ್ನು ತಮ್ಮ ಕಥನ ಸಾಹಿತ್ಯದಲ್ಲಿ ಅನಾವರಣ ಮಾಡಿದ್ದಾರೆ. ಪ್ರೀತಿಯಂತೆ ಸಾವಿಗೂ ಒಂದು ಸೌಂದರ್ಯವಿದೆ ಎಂದು ತೋರಿಸಿ ಕೊಟ್ಟವರು ಚಿತ್ತಾಲರಾಗಿದ್ದಾರೆ. ಚಿತ್ತಾಲರ ಕಥನ ಸಾಹಿತ್ಯದಲ್ಲಿ ಸಾಯುವವರು ಓದುಗರ ಸಹಾನುಭೂತಿ ಪಡೆಯುತ್ತಾರೆ. ಸಾವಿನ ಬಗ್ಗೆ ಚಿತ್ತಾಲರಂತೆ ಕಲಾತ್ಮಕವಾಗಿ ಯೋಚಿಸಿದವರು ನವ್ಯ ಸಾಹಿತ್ಯದಲ್ಲಿ ಇಲ್ಲ ಎಂದು ಹೇಳಬಹುದು. ಲೈಂಗಿಕ ಪ್ರಜ್ಞೆ, ಮೃತ್ಯು ಪ್ರಜ್ಞೆ, ಕೇಡಿನ ಪ್ರಜ್ಞೆ, ಪ್ರತಿಭಟನೆ ಈ ಮೊದಲಾದವುಗಳನ್ನು ಚಿತ್ತಾಲರು ಇತರ ನವ್ಯ ಲೇಖಕರಿಗಿಂತ ಭಿನ್ನವಾಗಿ ಅಭಿವ್ಯಕ್ತಿಸಿದ್ದಾರೆ. ಮಹಿಳಾ ವಿರೋಧಿ ಧೋರಣೆಗಳು ಮಹಿಳೆಯರನ್ನು ಶೋಷಿಸುವ ರೀತಿಯನ್ನು ಚಿತ್ತಾಲರು ಗುರುತಿಸುತ್ತಾರೆ. ಸಮಾಜವು ಮಹಿಳೆಯ ವಿರುದ್ಧ ತಳೆಯುವ ರಾಕ್ಷಸಿ ಪ್ರವೃತ್ತಿಗೆ ಚಿತ್ತಾಲರ ಕಥನ ಸಾಹಿತ್ಯವು ಸಾಕ್ಷಿಯಾಗಿದೆ.

## ೫.೧. ಸಾವಿನ ಪ್ರಜ್ಞೆ ಮತ್ತು ಮಹಿಳೆಯರು :

ಯಶವಂತ ಚಿತ್ತಾಲರ ಕಥನ ಸಾಹಿತ್ಯದಲ್ಲಿ ಸಾವಿನ ಪ್ರಜ್ಞೆಯು ಮತ್ತೆ ಮತ್ತೆ ಬಳಕೆಯಾಗುತ್ತಲೇ ಇರುತ್ತದೆ. ಈ ಸಾವು ವ್ಯಕ್ತಿಯೇ ತಂದುಕೊಳ್ಳಬಹುದಾದ ಆತ್ಮಹತ್ಯೆ ಯಾಗಿರಬಹುದು. ಅಥವಾ ಬೇರೆಯವರು ಮಾಡುವ ಕೊಲೆಯಾಗಿರಬಹುದು. ಈ ಸಾವು ಯಾವುದೇ ರೀತಿಯದ್ದಾಗಿದ್ದರೂ ಕಥನ ಸಾಹಿತ್ಯದಲ್ಲಿನ ನಿರಪರಾಧಿ ವ್ಯಕಿಗಳಿಗೆ ಇದು ಅನಿವಾರ್ಯವೇನೊ ಎಂಬಂತೆ ಇಲ್ಲಿ ಬಳಕೆಯಾಗುತ್ತದೆ ಪರಿಸ್ಥಿತಿಯ ಒತ್ತಡಗಳಿಂದ ಇಲ್ಲಿನ ಪಾತ್ರಧಾರಿಗಳು ನಿರಪರಾಧಿಯಾಗಿದ್ದರೂ ಅಪರಾಧಿಯ

ಸ್ಥಾನದಲ್ಲಿ ನಿಂತು ಬಿಡುತ್ತಾರೆ. ಆಗ ಅವರು ವ್ಯವಸ್ಥೆಯನ್ನು ಸಮರ್ಥವಾಗಿ ಎದುರಿಸಲಾರದೆ ವಿಫಲರಾಗಿ ಸಾವಿನ ಮೂಲಕ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವ ಹುಚ್ಚು ಆಲೋಚನೆಗಳನ್ನು ಮಾಡುತ್ತಾರೆ. ಬೇರೆ ನವ್ಯ ಸಾಹಿತಿಗಳ ಸಾಹಿತ್ಯದಲ್ಲಿ ಹೆಚ್ಚು ಬಳಕೆಯಾಗದ ಸಾವಿನ ರೂಪಕ ಚಿತ್ತಾಲರ ಕಥನ ಸಾಹಿತ್ಯದಲ್ಲಿ ಬಳಕೆಯಾಗುವ ಮೂಲಕ ಇಡೀ ಸಾಹಿತ್ಯ ಕೃತಿಗೆ ವಿಶಿಷ್ಟ ರೂಪವನ್ನು ನೀಡುತ್ತದೆ.

'ಮೂರು ದಾರಿಗಳು' ಕಾದಂಬರಿಯ ನಿರ್ಮಲೆ ಹನೇಹಳ್ಳಿಯ ಬ್ರಾಹ್ಮಣ ವ್ಯಾಪಾರಿ ವಿಶ್ವನಾಥ ಶಾನುಭಾಗನ ಮಗಳಾಗಿದ್ದಾಳೆ. ಈಕೆ ಕಾರವಾರದಲ್ಲಿರುವ ತನ್ನ ಸೋದರತ್ತೆಯಾದ ಚಂದ್ರಭಾಗಳ ಮನೆಯಲ್ಲಿದ್ದು ಇಂಗ್ಲಿಷ್ ಶಿಕ್ಷಣವನ್ನು ಕಲಿಯುತ್ತಿದ್ದಳು. ಅದೇ ಸಂದರ್ಭದಲ್ಲಿ ಊರಿನ ಫೋಟೋಗ್ರಾಫರ್ ರಂಗಪ್ಪನ ಜೊತೆ ಅವಳಿಗೆ ಸಂಬಂಧವಿದೆ ಎಂಬ ಗಾಳಿ ಸುದ್ದಿ ಊರಲೆಲ್ಲಾ ಹರಡುತ್ತದೆ. ಅದು ಹನೇಹಳ್ಳಿಯಲ್ಲಿರುವ ವಿಶ್ವನಾಥ ಶಾನುಭಾಗರ ಕಿವಿಗೂ ಬೀಳುತ್ತದೆ. ಮನೆತನದ ಗೌರವ ಈ ಸುದ್ದಿಯಿಂದ ಹಾಳಾಗುತ್ತದೆ ಎಂದು ಹೆದರಿದ ವಿಶ್ವನಾಥ ಶಾನುಭಾಗರು ಸುದ್ಧಿಯ ಸತಾಸತ್ಯತೆಯನ್ನು ತಿಳಿದುಕೊಳ್ಳುವ ಗೋಜಿಗೆ ಹೋಗದೆ ತರಾತುರಿಯಲ್ಲಿ ನಿರ್ಮಲೆಯ ಮದುವೆಯನ್ನು ಕುಮಟೆಯ ವಾಸುದೇವನ ಜೊತೆ ನಿಶ್ಚಯ ಮಾಡುತ್ತಾರೆ. ನಿರ್ಮಲೆಯನ್ನು ಮದುವೆಯಾಗಲು ಬಂದ ವಾಸುದೇವನಿಗೂ ನಿರ್ಮಲೆ ಮತ್ತು ರಂಗಪ್ಪರ ಪ್ರಕರಣದ ಸುದ್ದಿ ತಿಳಿಯುತ್ತದೆ. ಅವನು ಸಹ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯುವುದಕ್ಕೆ ಹೋಗದೆ ಒಣ ಆದರ್ಶದ ಜೊತೆ ನಿಂತುಬಿಡುತ್ತಾನೆ. ನಿರ್ಮಲೆ, ರಂಗಪ್ಪರ ಸಂಬಂಧ ಎಲ್ಲರೂ ಕಳವಳ ಪಡುತ್ತಿರುವಷ್ಟು ಬೆಳೆದಿಲ್ಲವಾದರೂ ಎಲ್ಲರೂ ನಾನಾ ರೀತಿ ಆ ಸಂಬಂಧಕ್ಕೆ ಬಣ್ಣ ಹಚ್ಚಿ ಮಾತನಾಡುವುದನ್ನು ಕಂಡು ನಿರ್ಮಲೆ ರೋಸಿ ಹೋಗುತ್ತಾಳೆ. ಮಗಳು ಮಾಡದ ತಪ್ಪನ್ನೆ ನಂಬಿದ ತಂದೆ, ಒಣ ಆದರ್ಶತನದ ಅತಿರೇಕದಲ್ಲಿ ನಿಂತ ವಾಸುದೇವ, ಸಮಾಜದ ಇಲ್ಲ ಸಲ್ಲದ ಕುಹಕದ ನುಡಿಗಳು ಯಾವ ತಪ್ಪನ್ನು ಮಾಡದ ನಿರ್ಮಲೆಗೆ ನೋವನ್ನುಂಟು ಮಾಡುತ್ತದೆ. ಎಲ್ಲರೂ ತನ್ನ ವಿರುದ್ಧ ಪಿತೂರಿ ಮಾಡುತ್ತಿದ್ದಾರೆನೋ ಎಂಬಂತೆ ನಿರ್ಮಲೆ ಭಾವಿಸುತ್ತಾಳೆ. ಆದ್ದರಿಂದಲೇ ಆಕೆ ಭೀತಿ, ಪ್ರೀತಿ, ಕ್ರೌರ್ಯಗಳ ವಿರುದ್ಧ ಪ್ರತೀಕಾರ ತೀರಿಸಿಕೊಳ್ಳಲು ಮುಂದಾಗುತ್ತಾಳೆ. ಆ ಪ್ರತೀಕಾರದ ಬಂಡಾಯವು ನಿರ್ಮಲೆಯ ಸಾವಿನಲ್ಲಿ ಅಂತ್ಯವಾಗುತ್ತದೆ.

"ಆಬೋಲೀನಳು ನಿಜಕ್ಕೂ ಹೂವಿನಂತಹ ಹುಡುಗಿ ಕೋಮಲ ಮನಸ್ಸಿನವಳು ಸಿಹಿಯಾದ ಹೃದಯದವಳು" (ರಾಜೇಂದ್ರ ಚೆನ್ನಿ, ಯಶವಂತ ಚಿತ್ತಾಲರ ಸಾಹಿತ್ಯಲೋಕ,

೨೦೧೧, ಪುಟ ೧೭) ಇಂತಹ ಕೋಮಲ ಮನಸ್ಸಿನ ಆಬೋಲೀನಳ ವಯಸ್ಸು ಬರಿ ಹದಿನಾಲ್ಕೇ ಆದರೂ ತಾಯಿ ಇಲ್ಲದ ತನ್ನ ಮನೆಯ ಜವಬ್ದಾರಿಯನ್ನು ಹೊತ್ತುಕೊಂಡಿದ್ದಾಳೆ. "ಒಂದು ರೀತಿಯಿಂದ ಕೈತಾನ ಹಾಗೂ ಬಸ್ತ್ಯಾಂವರಿಗೆ ಆಬೋಲೀನಳೇ ತಾಯಿ ಎನ್ನಬೇಕು" (ಯಶವಂತ ಚಿತ್ತಾಲ, ಚಿತ್ತಾಲರ ಕತೆಗಳು, ೧೯೮೩, ಪುಟ ೮೭) ಹಾಗೆ ಆಬೋಲೀನ ಇಡೀ ಕುಟುಂಬವನ್ನು ಜವಬ್ದಾರಿಯುತವಾಗಿ ನಡೆಸಿಕೊಂಡು ಹೋಗುತ್ತಿದ್ದಾಳೆ. ಆಬೋಲಿನಳನ್ನು ಬಿಟ್ಟರೆ ಆ ಮನೆಯಲ್ಲಿ ಹೆಣ್ಣು ಎಂದು ಯಾರೂ ಇಲ್ಲ ಜೊತೆಗೆ ಆಬೋಲೀನ ಶಾಲೆಗೆ ಹೋಗಿ ಶಿಕ್ಷಣ ಪಡೆದವಳಲ್ಲ ಆದ್ದರಿಂದಲೇ ಗಂಡು ಹೆಣ್ಣಿನ ಸಂಬಂಧದ ಬಗ್ಗೆ, ಗರ್ಭಿಣಿಯಾಗುವ ಬಗ್ಗೆ ಆಕೆಗೆ ಏನೂ ತಿಳಿದಿಲ್ಲ. ಇವಳ ಈ ಮುಗ್ಧತೆಯನ್ನು ಬಳಸಿಕೊಂಡು ಅದೇ ಊರಿನವನಾದ ಈಗಾಗಲೇ ಎರಡು ಮದುವೆಯಾಗಿರುವ ಮನವೇಲನು ಆಕೆಯನ್ನು ಬಸುರಿಯೆಂದು, ಸುಳ್ಳೇ ಹೆದರಿಸಿ ಮದುವೆಯಾಗುತ್ತಾನೆ. ಆದರೆ ಆಬೋಲೀನಳಿಗೆ ಮದುವೆಯಾದ ಕೆಲ ದಿನಗಳಲ್ಲೆ ತಾನು ಬಸುರಿಯಲ್ಲ ಎಂಬುದು ಗೊತ್ತಾಗುತ್ತದೆ. ಆಗ ಮನವೇಲನಿಗೆ ತನ್ನ ಮೋಸ ಎಲ್ಲಿ ಬಯಲಾಗುತ್ತದೆಯೋ ಎಂಬ ಹೆದರಿಕೆಯೂ ಪ್ರಾರಂಭವಾಗುತ್ತದೆ. ಆಗ ಮನವೇಲ "ತನಗೂ ಆಬೋಲಿನಳಿಗೂ ಲಗ್ನದ ಮೊದಲೇ ಸಂಬಂಧ ಇದ್ದುದು ನಿಜ ಅದಕ್ಕೂ ಅವಳೇ ಕಾರಣ ತನಗೆ ಅವಳನ್ನು ಲಗ್ನವಾಗುವ ಇಚ್ಛೆ ಎಳ್ಳಷ್ಟೂ ಇಲ್ಲ ಎಂಬುದನ್ನರಿತೇ ತಾನು ಗರ್ಭಿಣಿ ಎಂದು ಸುಳ್ಳು ಸುದ್ದಿ ಹಬ್ಬಿಸಿರಬೇಕು. ತನ್ನ ಮೇಲೆ ಅನೈತಿಕ ಒತ್ತಡ ತರಲು ಇದೆಲ್ಲ ಯಾರಿಗೆ ಗೊತ್ತು? ಈ ಮೋಸ ಮೊದಲೇ ಗೊತ್ತಿದ್ದರೆ ತಾನೆಂದೂ ಅವಳನ್ನು ಲಗ್ನವಾಗುತ್ತಿರಲೇ ಇಲ್ಲ!" (ಯಶವಂತ ಚಿತ್ತಾಲ, ಚಿತ್ತಾಲರ ಕತೆಗಳು, ೧೯೮೩, ಪುಟ ೯೧) ಎಂದು ಸುಳ್ಳು ಹೇಳುತ್ತಾನೆ. ಊರಿನ ಜನರು ಸಹ ಮನವೇಲನು ಮಾಡಿದ ಆರೋಪವನ್ನು ಸತ್ಯವೆಂದು ನಂಬಿ ಆಬೋಲೀನಳ ಬಗ್ಗೆ ಇಲ್ಲ ಸಲ್ಲದ ಮಾತುಗಳನ್ನು ಆಡುತ್ತಾರೆ. ಊರಿನ ಜನರ ಮಾತುಗಳನ್ನು ಕೇಳಿ ಮಾನಸಿಕವಾಗಿ ಕುಗ್ಗಿ ಹೋದ ಆಬೋಲೀನಳು ತಾನು ಬದುಕಿರುವುದಕ್ಕಿಂತ ಸಾಯುವುದೇ ಲೇಸೆಂದು ಅನ್ನಿಸಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ಒಂದು ಮನೆಯ ಕಾರಣಕ್ಕಾಗಿ ಜಗಳ ಪ್ರಾರಂಭವಾಗಿ ಅನೇಕ ಕುಟುಂಬಗಳ ಪರಿಚಯ ಮಾಡಿಕೊಡುವ ಕಾದಂಬರಿ 'ಪುರುಷೋತ್ತಮ'ವಾಗಿದೆ. ಹಣದ ಆಸೆಯಿಂದ ಮನುಷ್ಯ ಯಾವ ಸ್ಥಿತಿಗೆ ಬೇಕಾದರೂ ಇಳಿಯಬಲ್ಲ ಎಂಬುದಕ್ಕೆ ಇದೇ ಕಾದಂಬರಿಯಲ್ಲಿ ಬರುವ ವೆಂಕಟದಾಸು ಸಂಕೇತವಾಗಿದ್ದಾನೆ. ಪುರುಷೋತ್ತಮನ ಮನೆಯನ್ನು ಪಡೆಯಲು ಆತ ನಾನಾ ಪ್ರಯತ್ನಗಳನ್ನು ಮಾಡುತ್ತಾನೆ. ಆದರೂ ಪುರುಷೋತ್ತಮ ತನ್ನ ಮನೆಯನ್ನು ಬಿಟ್ಟು ಕೊಡುವುದಿಲ್ಲ. ಆಗ ಆತ

ಪುರುಷೋತ್ತಮನ ಸಂಬಂಧಿಕರಿಗೆ ತೊಂದರೆ ಕೊಡುವ ಮೂಲಕ ಆತನ ನೆಮ್ಮದಿಯನ್ನು ಕೆಡಿಸುವ ಪ್ರಯತ್ನ ಮಾಡುತ್ತಾನೆ. ಇವನ ಈ ಪ್ರಯತ್ನಕ್ಕೆ ನಿರಪರಾಧಿಯಾದ ಸೀತೆ ಬಲಿ ಪಶುವಾಗುತ್ತಾಳೆ. ಸೀತೆಯು ಸೂಳೆಯ ದಂಧೆ ಮಾಡುತ್ತಿದ್ದಾಳೆಂಬ ಸುಳ್ಳು ಸುದ್ದಿಯನ್ನು ಆತ ಹಬ್ಬಿಸುತ್ತಾನೆ. ತನ್ನ ಶೀಲದ ಬಗ್ಗೆ ಜನರು ಆಡಿಕೊಳ್ಳುವ ಕುಹಕ ಮಾತುಗಳಿಗೆ ರೋಸಿ ಸೀತೆ ಇಪ್ಪತ್ತನೆ ಮಹಡಿಯಿಂದ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ಯಶವಂತ ಚಿತ್ತಾಲರ 'ಉದ್ಧಾರ' ಕತೆಯ ಅಹಲ್ಯೆ ತನ್ನ ೧೭ನೇ ವಯಸ್ಸಿಗೆ ಮದುವೆಯಾದವಳು. ಆದರೆ ಮದುವೆಯಾದ ಮೊದಲ ರಾತ್ರಿಯೇ ಆಕೆಯ ಗಂಡ ಮಲಗುವ ಮನೆಯಿಂದ ಓಡಿ ಹೋದನು. ಅಂದಿನಿಂದ ಅಹಲ್ಯೆ ಒಂಟಿ ಜೀವನವನ್ನು ಕಳೆಯುತ್ತಿದ್ದಾಳೆ. ಇದೇ ಸಂದರ್ಭದಲ್ಲಿ ಅಹಲ್ಯೆಯನ್ನು ಮದುವೆಯಾಗಿದ್ದವನು ಸನ್ಯಾಸಿಯಾಗಿ ಊರೂರು ಅಲೆಯುತ್ತಿದ್ದಾನೆಂಬ ಸುದ್ಧಿಯೂ ಆಕೆಯ ಕಿವಿಯ ಮೇಲೆ ಬಿದ್ದಿದೆ. ಒಂದು ದಿನ ಅಹಲ್ಯೆಯ ತಾಯಿ ತನ್ನ ಅಣ್ಣನ ಮನೆಗೆ ಹೋಗಿ ಮಳೆಯ ಕಾರಣದಿಂದ ತನ್ನ ಮನೆಗೆ ರಾತ್ರಿ ಹಿಂತಿರುಗುವುದು ಅಸಾಧ್ಯವಾಗುತ್ತದೆ. ಅದೇ ರಾತ್ರಿ ಮನೆಯಲ್ಲಿ ಒಂಟಿಯಾಗಿದ್ದ ಅಹಲ್ಯೆಯ ಮನೆಗೆ ಒಬ್ಬ ತರುಣ ಕೀರ್ತನಕಾರ ಮಳೆಯ ಕಾರಣದಿಂದ ಆಕೆಯ ಮನೆಯಲ್ಲಿ ತಂಗಲು ಬರುತ್ತಾನೆ. "ಸ್ವಚ್ಛ ಬಿಳಿಯ ಧೋತರ ಕಾವೀ ಬಣ್ಣದ ನಿಲುವಂಗಿ ಹೆಗಲು ಮುಟ್ಟುವ ಉದ್ದನ್ನ ತಲೆಗೂದಲು ಮಾತನಾಡುವಾಗ ತುಟಿಗಳಂಚಿನಲ್ಲಿ ಸಣ್ಣ ಮುಗುಳುನಗೆ ಸ್ವಚ್ಛ ಕಣ್ಣುಗಳಲ್ಲಿ ಮಾತ್ರ ಎಂತಹದೋ ಮಾನ್ಲತೆ ಬೈರಾಗಿಯ ಕಣ್ಣುಗಳ ಹಾಗೆ ಅವಳು ಮೊತ್ತ ಮೊದಲು ನೋಡಿದ ದಿನವೇ ವಿಚಿತ್ರ ರೀತಿಯಿಂದ ಹುಚ್ಚು ಹಿಡಿಸಿದ ಅವಳನ್ನು ಮದುವೆಯಾದವನ ಕಣ್ಣುಗಳಲ್ಲಿ ಕಂಡ ಬೈರಾಗಿಯ ದೃಷ್ಟಿ" (ಯಶವಂತ ಚಿತ್ತಾಲ, ಚಿತ್ತಾಲರ ಕತೆಗಳು, ೧೯೮೩, ಪುಟ ೧೧೨) ಯನ್ನು ಕಂಡ ಅಹಲ್ಯೆ ಜಾರುತ್ತಾಳೆ. ತಾನು ಮದುವೆಯಾದವನು ಸನ್ಯಾಸಿಯಾಗಿ ಊರೂರು ಅಲೆಯುತ್ತಿದ್ದಾನೆ ಎಂಬ ವಂದತಿ ಮತ್ತು ಕೀರ್ತನಕಾರನ ಕಣ್ಣುಗಳಲ್ಲಿ ತಾನು ಮದುವೆಯಾಗಿದ್ದವನ ಕಣ್ಣುಗಳಲ್ಲಿ ಕಂಡ ಬೈರಾಗಿಯ ದೃಷ್ಟಿ ಇರುವುದು– ಈ ಎಲ್ಲಾ ಕಾರಣಗಳಿಂದ ಅಹಲ್ಯೆ ಆ ರಾತ್ರಿ ಆ ತರುಣ ಕೀರ್ತನಕಾರನ ಜೊತೆ ಕಳೆಯುತ್ತಾಳೆ. ಮತ್ತೊಮ್ಮೆ ಅದೇ ಅಹಲ್ಯೆ ಒಂಟಿಯಾಗಿದ್ದಾಗ ತಾನು ಭೂತಕಾಲದಲ್ಲಿ ತರುಣ ಕೀರ್ತನಕಾರರನ್ನು ಕೂಡಿದ್ದರ ನೆನಪು ಒಂದು ಪಾಪ ಪ್ರಜ್ಞೆಯಾಗಿ ಕಾಡುತ್ತದೆ. ಆ ರಾತ್ರಿ ಮತ್ತೆ ಇದ್ದು ಮತ್ತೆ ಭೂತಕಾಲದ ಘಟನೆ ನಡೆಯಬಹುದೆಂದು ಅಹಲ್ಯೆ ಹೆದರುತ್ತಾಳೆ. ಭೂತಕಾಲದ ಪಾಪಪ್ರಜ್ಞೆ ಮತ್ತು ಆಕೆಯ ಈ ಹೆದರಿಕೆಯ ಕಾರಣಕ್ಕಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ಗಂಡನಿಂದ ಸಿಗಬೇಕಾದ ದಾಂಪತ್ಯ ಸುಖ ಅಹಲ್ಯೆಗೆ ಸಿಗಲಿಲ್ಲವಾದರಿಂದ ವಯೋಸಹಜವಾದ ತುಡಿತಕ್ಕೆ ಒಳಗಾಗಿ ಕೀರ್ತನಕಾರನ ಜೊತೆ ರಾತ್ರಿ ಕಳೆದಿದ್ದಾಳೆ. ಆದರೆ ಗಂಡನ ಬದಲಿಗೆ ಪರಪುರುಷನ ಜೊತೆ ಹೀಗೆ ರಾತ್ರಿ ಕಳೆದಿದ್ದು, ಪಾಪದ ಕೃತ್ಯ ಎಂದೆನಿಸಿ ಒತ್ತಡಕ್ಕೆ ಒಳಪಟ್ಟು ಅಹಲ್ಯೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಸಮಾಜ ಪರಪುರುಷನ ಜೊತೆ ಸಂಬಂಧ ಇಟ್ಟುಕೊಳ್ಳುವುದನ್ನು ಅಕ್ರಮ ಎಂದು ಹೇಳುತ್ತದೆ. ಅಲ್ಲದೆ ಮದುವೆಯಾದವರು ಅದರಲ್ಲೂ ಹೆಣ್ಣು ಮಕ್ಕಳು ಹೀಗೆ ಸಂಬಂಧ ಇಟ್ಟುಕೊಳ್ಳುವುದನ್ನು ಸಮಾಜವು ಸಹಿಸುವುದಿಲ್ಲ. ಇದಕ್ಕಾಗಿ ಅಹಲ್ಯೆ ತಾನು ಮಾಡಿದ್ದು ಮನುಷ್ಯನ ಸಹಜ ತುಡಿತವಾಗಿರದೆ ಪಾಪಕೃತ್ಯ ಎಂದು ಭಾವಿಸಿ, ಸಮಾಜದ ನಿಂದನೆಗೆ ಗುರಿಯಾಗಬೇಕಾಗುತ್ತದೆಂದು ಹೆದರಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಸಮಾಜ ಹೇರಿರುವ ನಿರ್ಬಂಧಕ್ಕೆ ಅಹಲ್ಯೆ ಬಲಿ ಪಶುವಾಗುತ್ತಾಳೆ.

'ಕತೆಯಾದಳು ಹುಡುಗಿ' ಎಂಬ ಕಥೆಯಲ್ಲಿ ಕಥೆಗಾರ ತನ್ನ ಸತ್ತ ಮಗಳಿಗಾಗಿ ಒಂದು ಕತೆಯನ್ನು ರಚಿಸಲು ಮುಂದಾಗುತ್ತಾನೆ. ಅದಕ್ಕಾಗಿಯೇ ಚಸ್ನಾಲಾದ ಕೋಲ್ ಮೈನುಗಳ ಕಾರ್ಮಿಕನೊಬ್ಬನ ಮಗಳಾದ ಜಾನಕಿಯ ಕತೆಯು ಮೈದಾಳುತ್ತದೆ. ಹಲವಾರು ವರ್ಷಗಳಿಂದ ಇದ್ದಲು ಅಗೆಯಲು ಉಪಯೋಗವಾದದ್ದಲ್ಲ ಎಂದು ಬಿಟ್ಟುಕೊಟ್ಟ ಗಣಿಯಲ್ಲಿ ನೀರು ತುಂಬಿಕೊಂಡು ಪಕ್ಕದ ಗಣಿಯಲ್ಲಿ ಕೆಲಸ ಮಾಡುತ್ತಿದ್ದ ನೂರಾರು ಜನ ಮೃತಪಡುತ್ತಾರೆ. ಅಂತಹ ಸಂದರ್ಭದಲ್ಲಿ ಜಾನಕಿ ತನ್ನ ಗುಡಿಸಲಿನಲ್ಲಿ ಮೂರು ತಿಂಗಳ ತೊಟ್ಟಿಲ ಕೂಸಿನ ಜೊತೆ ಅಪ್ಪ ಅಮ್ಮರ ಹಾದಿಯನ್ನು ಕಾಯುತ್ತಿರುತ್ತಾಳೆ. ಆಗ ಅಲ್ಲಿಗೆ ಬಂದ ಸ್ಕೂಟರ್ ಸವಾರರು ಆಕೆಯನ್ನು ಅತ್ಯಾಚಾರ ಮಾಡಿ ಬರ್ಬರವಾಗಿ ಹತ್ಯೆ ಮಾಡುತ್ತಾರೆ. ಅಪ್ರಾಪ್ತ ವಯಸ್ಸಿನ ಹೆಣ್ಣು ಮಗಳಾದ ಜಾನಕಿಯನ್ನು ಅತ್ಯಾಚಾರ ಮಾಡಿ ಕೊಲೆ ಮಾಡಲಾಗುತ್ತದೆ. ಇದರಲ್ಲಿ ಜಾನಕಿಯದು ತಪ್ಪಿಲ್ಲದಿದ್ದರೂ ವ್ಯಕ್ತಿ ಕ್ರೌರ್ಯಕ್ಕೆ ಆಕೆ ಬಲಿಯಾಗುತ್ತಾಳೆ.

ಯಶವಂತ ಚಿತ್ತಾಲರ ಕಥನ ಸಾಹಿತ್ಯದಲ್ಲಿ ವ್ಯಕ್ತಿಗಳು ನಿರಪರಾಧಿಗಳಾಗಿದ್ದರೂ ಅಪರಾಧಿಗಳ ಸ್ಥಾನದಲ್ಲಿ ನಿಂತು ಬಿಡುತ್ತಾರೆ. 'ಮೂರು ದಾರಿಗಳು' ಕಾದಂಬರಿಯ ನಿರ್ಮಲೆ, 'ಆಬೋಲೀನ' ಕತೆಯ ಆಬೋಲೀನ, 'ಉದ್ಧಾರ' ಕತೆಯ ಅಹಲ್ಯೆ, 'ಪುರುಷೋತ್ತಮ' ಕಾದಂಬರಿಯ ಸೀತೆ ಇವರೆಲ್ಲ ಒಂದಲ್ಲಾ ಒಂದು ಕಾರಣಕ್ಕಾಗಿಯೇ ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ನಿರಪರಾಧಿಗಳಾಗಿದ್ದರೂ, ಅಪರಾಧಿಗಳ ಸ್ಥಾನದಲ್ಲಿ ನಿಲ್ಲುತ್ತಾರೆ. ಪರಿಸ್ಥಿತಿಯ ಒತ್ತಡಗಳಿಗೆ ಇವರು ಸಿಲುಕಿ ಪಾರಾಗುವುದು ಸಾಧ್ಯವೇ ಇಲ್ಲವಾಗಿ ಸಾವಿನ ಮೊರೆ ಹೋಗುತ್ತಾರೆ. ಸಾವಿನ ದಾರಿ ಆರಿಸಿಕೊಳ್ಳುವ ಇವರಿಗೆ

ಬೇರೆ ದಾರಿಯೇ ಇಲ್ಲವೇನೋ ಎಂಬಂತೆ ಆಯಾಯ ಘಟನೆಗಳ ಹಿಂದೆ ಸಂದರ್ಭಗಳು ಕೆಲಸ ಮಾಡಿದೆ. ಈ ರೀತಿ ಯಶವಂತ ಚಿತ್ತಾಲರ ಕಥನ ಸಾಹಿತ್ಯದಲ್ಲಿ ರೂಪಕವಾಗಿ ಬಳಕೆಯಾಗುವ ಸಾವು ಕೃತಿಗೆ ವಿಶಿಷ್ಟ ಚೌಕಟ್ಟನ್ನು ನೀಡುತ್ತದೆ. ಜೊತೆಗೆ ಈ ರೀತಿ ಸಾವಿನಲ್ಲಿ ಅಂತ್ಯವನ್ನು ಕಾಣುವ ಪಾತ್ರಗಳು ಓದುಗರನ್ನು ಮತ್ತೆ ಮತ್ತೆ ಕಾಡುತ್ತದೆ.

## ೫.೨. ಮಾತೃ ಪ್ರಜ್ಞೆ ಮತ್ತು ಮಹಿಳೆಯರು :

ಹೆಣ್ಣು ಮೊದಲು ತಾಯಿ, ಆನಂತರ ಹೆಂಡತಿ, ಗೆಳತಿ, ಅಕ್ಕ, ಪ್ರಿಯತಮೆ, ತಂಗಿ, ಅಜ್ಜಿ, ಅತ್ತೆ ಹೀಗೆ ಮುಂತಾದ ಸಂಬಂಧಗಳನ್ನು ಪಡೆಯುತ್ತಾಳೆ. ಪ್ರತಿಯೊದು ಹೆಣ್ಣು ಮಗುವಿನಲ್ಲಿಯೂ ಒಬ್ಬ ತಾಯಿ ಇರುತ್ತಾಳೆ ಎನ್ನುವುದು ಅನುಭವದ ಮಾತಾಗಿದೆ. ಮಾತೃತ್ವ ಅರಳಲು ಹೆಣ್ಣಿಗೆ ವಯಸ್ಸು ಸ್ಥಾನಮಾನ ಯಾವುದೂ ಮುಖ್ಯವಾಗುವುದಿಲ್ಲ. ಇನ್ನು ಒಂದು ಹೆಜ್ಜೆ ಮುಂದೆ ಹೋಗಿ ಹೇಳಬೇಕೆಂದರೆ ಹೆಣ್ಣಿನ ಮಾತೃತ್ವವು ವ್ಯಕ್ತವಾಗಲು ಆ ಹೆಣ್ಣು ಮಗುವನ್ನು ತಾನೇ ಹೆರಬೇಕೆಂಬುದೂ ಇಲ್ಲ. ಈ ಅಂಶವನ್ನು ಕೇಂದ್ರವಾಗಿಟ್ಟುಕೊಂಡ ಯಶವಂಶ ಚಿತ್ತಾಲರು 'ಪುರುಷೋತ್ತಮ' ಕಾದಂಬರಿಯ ಸಾವಿತ್ರಿಯ ಪಾತ್ರವನ್ನು ಸೃಷ್ಟಿಸಿದ್ದಾರೆ. ಸಾವಿತ್ರಿಯ ಗಂಡ ಆತ್ಮಹತ್ಯೆ ಮಾಡಿಕೊಂಡ ಕೆಲವೇ ದಿನಗಳಲ್ಲಿ ಆಕೆ ತನ್ನ ಮಗುವನ್ನು ಕೂಡ ಕಳೆದುಕೊಳ್ಳುತ್ತಾಳೆ. ಸಾವಿತ್ರಿಯ ಮಗು ಎಂಟು ತಿಂಗಳಲ್ಲೇ ಗರ್ಭಪಾತವಾಗಿ ಸತ್ತಿದ್ದರಿಂದ ಮತ್ತು ಈ ಮೊದಲು ಗಂಡನನ್ನು ಕಳೆದು ಕೊಂಡಿದ್ದರಿಂದ ಸಾವಿತ್ರಿ ಸಹಜವಾಗಿಯೇ ಮಾನಸಿಕ ಸ್ಥೈರ್ಯವನ್ನು ಕಳೆದುಕೊಳ್ಳುತ್ತಾಳೆ. ಬದುಕಿನ ಬಗ್ಗೆ ವಿಶ್ವಾಸವನ್ನೇ ಕಳೆದು ಕೊಂಡಿದ್ದ ಆಕೆಗೆ ಅನಾಥಾಲಯದಿಂದ ತಂದ ಎಳೆಯ ಕೂಸು ಬದುಕಿನ ಬಗೆಗೆ ಭರವಸೆಯನ್ನು ಮೂಡಿಸುತ್ತದೆ. ತನ್ನ ಹೊಟ್ಟೆಯಲ್ಲಿ ಆ ಮಗು ಹುಟ್ಟದೇ ಇದ್ದರೂ ಅದನ್ನು ಅತೀ ಕಾಳಜಿಯಿಂದ ಸಾಕಿ ಬೆಳಸುತ್ತಾಳೆ. ಆಗ ಬಸವನ ಹುಳುವಂತಿದ್ದವನು ಸಾವಿತ್ರಿಯ ಆರೈಕೆಯಲ್ಲಿ ಗರುಡನಾಗಿ ಬೆಳೆದ ಪುರುಷೋತ್ತಮನಾಗುತ್ತಾನೆ.

"ಆಚಾರಕ್ಕರಸಾಗು ನೀತಿಗೆ ಪ್ರಭುವಾಗು
ಮಾತಿನಲ್ಲಿ ಚೂಡಾಮಣಿಯಾಗು ನನಕಂದ
ಜ್ಯೋತಿಯೇ ಆಗು ಜಗಕ್ಕೆಲ್ಲ". – ಜನಪದ ಗೀತೆ.

ಈ ಜನಪದ ಗೀತೆಯಂತೆ ಸಾವಿತ್ರಿ ತನ್ನ ಮಗ ಪುರುಷೋತ್ತಮನಿಗೆ ಉತ್ತಮ ಸಂಸ್ಕಾರವನ್ನು ನೀಡಲು ತನ್ನ ಜೀವನವನ್ನು ಮುಡಿಪಾಗಿಡುತ್ತಾಳೆ. ಚಿಕ್ಕ

ವಯಸ್ಸಿನಲ್ಲಿಯೇ ಗಂಡನನ್ನು ಕಳೆದು ಕೊಂಡಿದ್ದರೂ, ಈಕೆ ಆಧುನಿಕ ವಿಚಾರಗಳನ್ನು ಮೈಗೂಡಿಸಿಕೊಂಡಿದ್ದರೂ, ಪುರ್ನವಿವಾಹವನ್ನು ಆಕೆ ಮಾಡಿಕೊಳ್ಳುವುದೇ ಇಲ್ಲ. ಪುರುಷೋತ್ತಮನ ಬಗೆಗಿನ ಮಾತೃ ವಾತ್ಸಲ್ಯದಿಂದ ಸಾವಿತ್ರಿ ಪುರ್ನವಿವಾಹಕ್ಕೆ ಮನಸ್ಸು ಮಾಡುವುದಿಲ್ಲ "......ಮುಂದೆ ನೀನು ನನ್ನ ಬಾಳಿನಲ್ಲಿ ಬಂದ ಮೇಲಂತೂ ಅದಾವುದರಲ್ಲೂ ನನಗೇ ಆಸ್ಥೆಯೇ ಉಳಿಯಲಿಲ್ಲ...." (ಯಶವಂತ ಚಿತ್ತಾಲ, ಪುರುಷೋತ್ತಮ, ೨೦೦೬, ಪುಟ ೩೯೩) ಎಂಬ ಸಾವಿತ್ರಿಯ ಮಾತುಗಳಲ್ಲಿ ಆಕೆಯಲ್ಲಿರುವ ಮಾತೃತ್ವವು ಗೋಚರಿಸುತ್ತದೆ.

'ಪುರುಷೋತ್ತಮ' ಕಾದಂಬರಿಯ ಉದ್ದಕ್ಕೂ ಸಾವಿತ್ರಿ ಹರಡಿ ನಿಂತಿದ್ದಾಳೆ. ಕಾದಂಬರಿಯಲ್ಲಿ ನಡೆಯುವ ಎಲ್ಲಾ ಘಟನೆಗಳ ಜೊತೆ ಸಾವಿತ್ರಿ ಇದ್ದು ಪರಿಸ್ಥಿತಿಯನ್ನು ಸಂಭಾಳಿಸುತ್ತಾಳೆ. ಸಾವಿತ್ರಿ ಸಂಪ್ರದಾಯದ ತಾಯಿಯಲ್ಲ. ಕಣ್ಣೀರನ್ನು ಸುರಿಸುತ್ತಾ ಕೂರುವ ಹೆಣ್ಣು ಮಗಳಾಗಿರದೆ ಮುಂದುವರೆದ ವಿಚಾರಗಳನ್ನು ಹೊಂದಿರುವ ಹೆಣ್ಣಾಗಿದ್ದು ಪುರುಷೋತ್ತಮನ ವ್ಯಕ್ತಿತ್ವವನ್ನು ಗಟ್ಟಿಗೊಳಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತಾಳೆ. ಸಂದಿಗ್ಧ ಪರಿಸ್ಥಿತಿಯನ್ನು ನಿಭಾಯಿಸುವ ಧೈರ್ಯ ಆಕೆಗಿದೆ. ಮಂಜುನಾಥನ ಸಾವಿನ ಸಂದರ್ಭದಲ್ಲಿ ನೊಂದ ಪುರುಷೋತ್ತಮನಿಗೆ "ಇದೆಂಥ ಆಟ ಹೂಡಿದ್ದೀಯೋ ಸಲ್ಲದ ಹೊತ್ತಿನಲ್ಲಿ? ನಿನ್ನ ಕರ್ತವ್ಯ ಪ್ರಜ್ಞೆ ಎಲ್ಲಿ ಹೋಯಿತೋ! ಎದ್ದೇಳೋ! ಕಮಲಾವತಿಗೆ ಧೈರ್ಯ ಕೊಡಬೇಕಾದವರನ್ನೆಲ್ಲ ನಿನ್ನ ಸುತ್ತಲೂ ನೆರೆಯಿಸಿಕೊಂಡಿದ್ದೀ" (ಯಶವಂತ ಚಿತ್ತಾಲ, ಪುರುಷೋತ್ತಮ, ೨೦೦೬, ಪುಟ ೩೬೪) ಎಂದು ಹೇಳುವ ಸಾವಿತ್ರಿಯ ಮಾತುಗಳು ಆಕೆಯ ದಿಟ್ಟ ವ್ಯಕ್ತಿತ್ವವನ್ನು ತೋರಿಸುತ್ತದೆ. ಜೊತೆಗೆ ಮಗನು ದುಃಖದಿಂದ ಕುಗ್ಗಿ ಹೋಗಿದ್ದಾಗ ಆತನನ್ನು ಮಾನಸಿಕವಾಗಿ ಬಲಗೊಳಿಸುವ ಕೆಲಸವನ್ನು ಸಾವಿತ್ರಿ ಮಾಡಬಲ್ಲಳು ಎಂಬುದನ್ನು ನಿರೂಪಿಸುತ್ತದೆ. ಸಾವಿತ್ರಿ ತನ್ನ ಮಗ ಪುರುಷೋತ್ತಮನನ್ನು ಅಷ್ಟೇ ಅಲ್ಲದೆ ಇಡೀ ಕಾದಂಬರಿಯಲ್ಲಿ ಬರುವ ಕಲಾವತಿ, ಕಲ್ಯಾಣಿ, ಮೀನಾಕ್ಷಿ, ಸೀತೆಯರನ್ನು ಕೂಡ ಮಾನಸಿಕವಾಗಿ ಗಟ್ಟಿಗೊಳಿಸುವುದಕ್ಕಾಗಿ ಪ್ರಯತ್ನಮಾಡುತ್ತಾಳೆ.

ವೇಶ್ಯೆಯರು ಕೀಳು ಜನ, ಕೆಟ್ಟವರು ಎಂಬ ಭಾವನೆ ನಮ್ಮ ಸಾಂಪ್ರದಾಯಿಕ ಸಮಾಜದಲ್ಲಿದೆ. ಇಂತಹ ವೇಶ್ಯೆ ಉತ್ತಮಿಯಲ್ಲಿಯೂ ಯಶವಂತ ಚಿತ್ತಾಲರು ಮಾತೃತ್ವವನ್ನು ಕಂಡಿದ್ದಾರೆ. "ನೋಡು, ನೀನು ಎಂತಹ ಚಂದ ಹುಡುಗ, ನೀನು ಎಂತಹ ಒಳ್ಳೆಯವರ ಮಗ ಎಂದು ಗೊತ್ತಿದೆಯೇ? ನಿಮ್ಮ ಅಪ್ಪ, ಅಜ್ಜ, ಎಲ್ಲರೂ ದೇವರಂತಹ ಮಂದಿ ನೀನು ಅವರಂತೆಯೇ ಆಗಬೇಕು. ನಾವು ಕೀಳು ಜನ, ಕೆಟ್ಟ

ಜನ, ನಮ್ಮಂತಹವರ ಮನೆಯ ಬಾಗಿಲಲ್ಲಿ ನೀನು ಕಾಲಿಡಕೂಡದು, ತಿಳಿಯಿತೇ? ಆ ಬಸ್ಸಾಂವ ಅಂತೋನಿ ಇವರು ಕೆಟ್ಟ ಹುಡುಗರು ಅವರ ಜೊತೆಗೆ ಬಿದ್ದು ಹಾಳಾಗಬೇಡ, ಇನ್ನೆಂದಿಗೂ ನಮ್ಮ ದಣಪೆಯ ಮುಂದೆ ಹಾಯಬೇಡ ತಿಳಿಯಿತೇ?" (ಯಶವಂತ ಚಿತ್ತಾಲ, ಚಿತ್ತಾಲರ ಕತೆಗಳು, ೧೯೮೩, ಪುಟ ೭) ಎಂದು ಬುದ್ಧಿ ಹೇಳುವ ಉತ್ತಮಿಯ ಮಾತಿನಲ್ಲಿ ಮಾತೃತ್ವ ಸ್ವರೂಪ ವ್ಯಕ್ತವಾಗಿರುವುದನ್ನು ನಾವು ಗುರುತಿಸಬಹುದಾಗಿದೆ. ಉತ್ತಮಿ, ತಾನು ವೇಶ್ಯೆಯಾದರೂ ಇನ್ನೊಬ್ಬರ ಮಗನಿಗೆ ಬುದ್ಧಿ ಹೇಳುವ ಕ್ರಿಯೆಯಲ್ಲಿ ಯಶಂತಚಿತ್ತಾಲರು ಮಾತೃತ್ವವನ್ನು ಕಂಡಿದ್ದಾರೆ. ಬಡವೇಶ್ಯೆ ಉತ್ತಮಿಯ ಗದರುವಿಕೆಯಲ್ಲಿ, ಮಗನ ಹಿಂದೆ ಸದಾ ನೆರಳಂತೆ ಇರುವ ಸಾವಿತ್ರಿಯಲ್ಲಿ ಚಿತ್ತಾಲರು ಕಾಣುವ ಮಾತೃತ್ವ ಪರಿಕಲ್ಪನೆಯು ಭಿನ್ನ ಸ್ವರೂಪವನ್ನು ಪಡೆದುಕೊಂಡಿರುವುದನ್ನು ಕಾಣಬಹುದಾಗಿದೆ.

### ೫.೩. ಪಾಪಪ್ರಜ್ಞೆ ಮತ್ತು ಮಹಿಳೆಯರು :

ವ್ಯಕ್ತಿಯ ಬದುಕಿನಲ್ಲಿ ಪಾಪಪ್ರಜ್ಞೆಯು ವಿಶಿಷ್ಟವಾದ ಪಾತ್ರವಹಿಸುತ್ತದೆ. ತನ್ನಿಂದ ಘಟಿಸಿ ಹೋದ ಪಾಪಕೃತ್ಯಕ್ಕೆ ಸಂಬಂಧಿಸಿದ ಪ್ರಜ್ಞೆಯು ಆ ವ್ಯಕ್ತಿಯನ್ನು ಬದುಕಿದ್ದು ಸತ್ತಂತೆ ಮಾಡುತ್ತದೆ. ಹೀಗೆ ಕಾಡುವ ಪಾಪಪ್ರಜ್ಞೆಯು ಕೆಲವೊಮ್ಮೆ ವ್ಯಕ್ತಿಯನ್ನು ಬಲಿ ತೆಗೆದುಕೊಳ್ಳುತ್ತದೆ. ಚಿತ್ತಾಲರ ವ್ಯಕ್ತಿಯ ಮನದಾಳದಲ್ಲಿರುವ ಪಾಪಪ್ರಜ್ಞೆಯನ್ನು ಅನಾವರಣ ಮಾಡಲು ಪುರಾಣ ಪ್ರತೀಕಗಳ ಮೊರೆ ಹೋಗುತ್ತಾರೆ. ಆ ಮೂಲಕ ಒಂದು ಸತ್ಯದ ಅನ್ವೇಷಣೆಗೆ ಮುಂದಾಗುತ್ತಾರೆ.

'ಚಕ್ರವ್ಯೂಹ' ಕತೆಯ ನಾಯಕ ತನ್ನ ಹೆಂಡತಿಯ ಗರ್ಭಪಾತಕ್ಕೆ ತಾನು ಕಾರಣನಾದೆ ಎಂಬ ನೋವಿನಿಂದ ನರಳಲು ಆರಂಭಿಸುತ್ತಾನೆ. ಜೀವವೊಂದರ ಹತ್ಯೆಗೆ ತಾನು ಕಾರಣ ಎಂಬ ಪಾಪಪ್ರಜ್ಞೆ, ಈತ ನ್ಯೂಯಾರ್ಕಿಗೆ ಹೋದರೂ ಬಿಡದೆ ಕಾಡುತ್ತದೆ. ಈ ಪಾಪಪ್ರಜ್ಞೆಯಿಂದ ಪಾರಾಗುವುದೇ ನಾಯಕನಿಗೆ ದೊಡ್ಡ ಸಮಸ್ಯೆಯಾಗಿ ಬಿಡುತ್ತದೆ. ನ್ಯೂಯಾರ್ಕ್‌ನಲ್ಲಿ ತನ್ನ ವಯಸ್ಸಿನಲ್ಲಿ ಅರ್ಧದಷ್ಟು ವಯಸ್ಸಿನ ಲೂಯಿಸಾಳೊಡನೆ ನಾಯಕ ಬೆಳೆಸುವ ಲೈಂಗಿಕ ಸಂಬಂಧ ನಾಯಕನಿಗೆ ಚಕ್ರವ್ಯೂಹದ ಅನುಭವವುಂಟು ಮಾಡುತ್ತದೆ. ಹೆಂಡತಿ, ಮಕ್ಕಳ ನೆನಪು ಬಂದ ನಂತರ ನಾಯಕ ಲೂಯಿಸಾಳಿಂದ ದೂರವಾಗಬೇಕೆಂದು ಪ್ರಯತ್ನಿಸಿದರೂ ಅದು ಸಾಧ್ಯವಾಗುವುದಿಲ್ಲ. ಪಾಪಪ್ರಜ್ಞೆಯಿಂದ ನೆಮ್ಮದಿಯನ್ನು ಕಳೆದುಕೊಂಡ ನಾಯಕ ಪುರಾಣದ ಅಭಿಮನ್ಯುವಂತೆ, ಪಾಪಪ್ರಜ್ಞೆ ಎನ್ನುವ ಚಕ್ರವ್ಯೂಹದಿಂದ ಹೊರ ಬರುವ ದಾರಿ ಗೊತ್ತಿಲ್ಲದೆ ತತ್ತರಿಸುತ್ತಾನೆ.

'ಉದ್ಧಾರ' ಕತೆಯ ಅಹಲ್ಯೆಯಲ್ಲಿ ಅಮ್ಮನಿಲ್ಲದ ಮನೆಯ ಒಂಟಿತನವು ಆಕೆಯಲ್ಲಿ ಭಯವುಂಟು ಮಾಡುತ್ತದೆ. ಮಳೆಯ ಆ ರಾತ್ರಿ ದಿನ ಬಂದ ಕೀರ್ತಕಾರನಿಗೆ ಹಾಲು, ಹಣ್ಣು ನೀಡಿ ಆದರಿಸುತ್ತಾಳೆ. ತನ್ನ ಗಂಡನ ಕಣ್ಣುಗಳಲ್ಲಿ ಕಂಡ ಬೈರಾಗಿಯ ದೃಷ್ಟಿಯನ್ನು ಕೀರ್ತಿನಕಾರನ ಕಣ್ಣುಗಳಲ್ಲಿ ಕಂಡು ಹುಚ್ಚಳಾಗುತ್ತಾಳೆ. ಆತನೊಡನೆ ದೈಹಿಕ ಸಂಪರ್ಕ ಬೆಳೆಸಿದ ಅಹಲ್ಯೆ ಮತ್ತೊಂದು ಒಂಟಿ ರಾತ್ರಿಯಲ್ಲಿ ಬಂದ ಬೈರಾಗಿಯನ್ನು ಕಂಡು ಬೆದರುತ್ತಾಳೆ. ಮದುವೆಯಾದ ದಿನವೇ ಓಡಿಹೋದ ಗಂಡ ಎಲ್ಲೋ ಬೈರಾಗಿ ಆದನೆಂದು ಅವರಿವರು ಮಾತಾಡುವುದಕ್ಕೆ ಕೇಳಿದ ಅಹಲ್ಯೆಗೆ ವರ್ತಮಾನದಲ್ಲಿ ಬೈರಾಗಿಯನ್ನು ಕಂಡಾಗ ತಾನು ಹಿಂದೆ ಕೀರ್ತನಕಾರನೊಡನೆ ಕೂಡಿದ ಘಟನೆ ನೆನಪಿಗೆ ತರುತ್ತದೆ. ಅದು ಪಾಪಪ್ರಜ್ಞೆಯಾಗಿ ಆಕೆಯನ್ನು ಕಾಡಲು ಆರಂಭಿಸಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ತಾನು ಮದುವೆಯಾದವನ ಕಣ್ಣುಗಳಲ್ಲಿ ಕಂಡ ಬೈರಾಗಿ ದೃಷ್ಟಿಯನ್ನು ಕೀರ್ತನಕಾರನಲ್ಲಿ ಕಂಡು ಆ ರಾತ್ರಿ ಅಹಲ್ಯೆ ಅವನನ್ನು ಕೂಡಿದ್ದು ಆಕೆಯು ಪಾಪ ಪ್ರಜ್ಞೆಯಲ್ಲಿ ನರಳುವಂತೆ ಮಾಡುತ್ತದೆ. ಈ ಪಾಪಪ್ರಜ್ಞೆಯು ಆಕೆಯನ್ನು ಸಾವಿನ ಮನೆಗೆ ದೂಡುತ್ತದೆ. ಸಾವಿನ ನಿಗೂಢತೆ ಅರಿಯಲು ಪಾಪಪ್ರಜ್ಞೆಯನ್ನು ಚಿತ್ತಾಲರು ಪುರಾಣದ ಪ್ರತೀಕಗಳ ಸಹಾಯದಿಂದ ಅನಾವರಣ ಮಾಡುತ್ತಾರೆ.

**೫.೪. ಮುಗ್ಧತೆ ಮತ್ತು ಮಹಿಳೆಯರು :**

ಯಶವಂತ ಚಿತ್ತಾಲರ ಆಬೋಲೀನ ಕತೆಯ ಆಬೋಲೀನ ಮುಗ್ಧ ಮನಸ್ಸಿನ ಎಳೆ ವಯಸ್ಸಿನ ಹುಡುಗಿಯಾಗಿದ್ದಾಳೆ. ಇಂತಹ ಮುಗ್ಧ ಹುಡುಗಿ ಆಬೋಲೀನಳಿಗೆ ಗಂಡು-ಹೆಣ್ಣಿನ ಸಂಬಂಧದ ವಿಶೇಷತೆಯ ಅರಿವು ಇರಲಿಲ್ಲ. ಜೊತೆಗೆ ಬಸುರಿಯಾಗುವುದು ಎಂದರೇನು ಎಂಬುದೇ ತಿಳಿದಿರಲಿಲ್ಲ. ಇಂತಹ ಆಬೋಲೀನಳಿಗೆ ಮನವೇಲನ 'ಎಂಜಲು' ಜೀವ ಹಿಂಡುವ ಸಂಗತಿಯಾಗಿತ್ತು. "ಈಗಲಾದರೂ ಒಪ್ಪುತ್ತೀಯೋ, ಇಲ್ಲವೋ ನನ್ನನ್ನು ಮದುವೆಯಾಗಲು? ನನ್ನ ಎಂಜಲು ನಿನ್ನ ತುಟಿಯಲ್ಲಿದೆ. ಈಗ ನೀನು ಬಸುರಾಗುತ್ತಿ"[೭] ಎನ್ನುವ ಮನವೇಲನ ದುಷ್ಟ ಬೆದರಿಕೆಗೆ ಎಳೆ ಹುಡುಗಿ ಆಬೋಲೀನ ತತ್ತರಿಸಿ ಹೋಗುತ್ತಾಳೆ. ಬಸುರಿಯಾಗುವುದು ಎಂದರೇನೆಂದು ಅರಿಯಲಾರದ ಮುಗ್ಧ ಹುಡುಗಿ ಆಬೋಲೀನ "... ಭಯಂಕರವಾದ ಗಂಡಸಿನ ಎಂಜಲ! ಇದರಲ್ಲಿ ಇರಬಹುದೇ ತನ್ನ ಬಸಿರನ್ನು ಚಿಗುರಿಸುವ ಮಾಯಾಶಕ್ತಿ? ಇದು ನಿಜವೇ? ತಾ ಬಸುರಿಯೇ? ಬಸುರಾಗುವುದೆಂದರೆ ಇದೇನೆ? ಇಷ್ಟೇನೆ ?... ಅಯ್ಯೋ! ಇದೆಂತಹ ಅನರ್ಥ

ಲಗ್ನವಾಗುವ ಮೊದಲು ತಾ ಬಸುರಿ! ಮುಂದೆ ತನ್ನ ಗತಿ?" (ಯಶವಂತ ಚಿತ್ತಾಲ, ಚಿತ್ತಾಲರ ಕತೆಗಳು, ೧೯೮೩, ಪುಟ ೯೧) ಎಂದು ಕಂಗಾಲಾಗುತ್ತಾಳೆ. ಮುಂದೆ ಮನವೇಲ ಈಕೆಯ ಮುಗ್ಧತೆಯನ್ನೇ ಬಂಡವಾಳ ಮಾಡಿಕೊಂಡು ಮದುವೆಯಾಗುತ್ತಾನೆ. ಮನವೇಲನನ್ನು ಮದುವೆಯಾದ ಆಬೋಲೀನಳಿಗೆ ಮುಂದೆ ಒಂದು ದಿನ ತಾನು ಬಸುರಿಯಲ್ಲ ಎಂಬ ವಿಷಯ ಗೊತ್ತಾಗುತ್ತದೆ. ಈ ಅರಿವಿನಲ್ಲಿ ಆಕೆಯ ಮುಗ್ಧತೆಯ ಅಜ್ಞಾನ ನಾಶವಾಗುತ್ತದೆ. ಆದರೆ ಆಬೋಲೀನಳ ಮುಗ್ಧತೆ ನಾಶವಾಗುತ್ತಿದ್ದಂತೆ ಆಕೆಯ ಬದುಕು ದುರಂತಮಯ ಅಂತ್ಯವನ್ನು ಕಾಣುತ್ತದೆ. ಮನವೇಲನ ಕ್ರೂರತನ, ಪಾದ್ರಿಯ ಅಜ್ಞಾನ, ಕೈತಾನನ ಅಸಹಾಯಕತೆ, ಸಮಾಜದ ಕ್ರೌರ್ಯಗಳ ಜೊತೆಗೆ ಆಬೋಲೀನಳ ಮುಗ್ಧತೆ ಆಕೆಯ ದುರಂತಕ್ಕೆ ಪ್ರಮುಖ ಕಾರಣವಾಗುತ್ತದೆ. "ನಾನು ಬಸುರಿಯೇ, ಮಕ್ಕಳು ಹೇಗೆ ಹುಟ್ಟುತ್ತವೆ, ಗೊತ್ತಿದೆಯೇ? ಬಸುರಾದರೆ ಹೇಗೆ ತಿಳಿಯುತ್ತದೆ ?..." (ಯಶವಂತ ಚಿತ್ತಾಲ, ಚಿತ್ತಾಲರ ಕತೆಗಳು, ೧೯೮೩, ಪುಟ ೯೮) ಎಂದು ನಾನು ಪ್ರಶ್ನೆಗಳನ್ನು ಕಣ್ಣು ತುಂಬ ನೀರು ತುಂಬಿಕೊಂಡು ದೈನ್ಯದಿಂದ ತನ್ನ ಗೆಳತಿಯರನ್ನು ಕೇಳುವ ಆಬೋಲೀನ ತನ್ನ ಮುಗ್ಧತೆಯಿಂದ ಕಾಡುತ್ತಾಳೆ.

**೫.೫. ಪ್ರತಿಭಟನೆ ಮತ್ತು ಮಹಿಳೆಯರು :**

ಅಬ್ಬರಿಸಿ ಮಾತನಾಡಿದರೆ ಮಾತ್ರ ಅದು ಪ್ರತಿಭಟನೆಯಾಗುವುದಿಲ್ಲ. ಮೌನವಾಗಿ ಪರಿಸ್ಥಿತಿಯನ್ನು ಎದುರಿಸಿದರೂ ಅದು ಪ್ರತಿಭಟನೆಯಾಗುತ್ತದೆ ಎನ್ನುವುದಕ್ಕೆ 'ಪುರುಷೋತ್ತಮ' ಕಾದಂಬರಿಯ ಲಕ್ಷ್ಮಿಯು ಸ್ಪಷ್ಟ ಉದಾಹರಣೆಯಾಗಿದ್ದಾಳೆ. ಶಾಂತ ಗಂಭೀರ ಮುಖದ ತೇಜಸ್ಸನ್ನು ಹೊಂದಿದ ಲಕ್ಷ್ಮಿಯು ತನ್ನ ಗಂಡ ವೆಂಕಟದಾಸೂನ ದುರುಳತನಕ್ಕೆ ಪ್ರತಿಯಾಗಿ ತನ್ನ ಇಚ್ಛೆಯಿಂದ ತನ್ನ ವಾಕ್ ಶಕ್ತಿಯನ್ನು ನಿಯಂತ್ರಿಸಿ ಮೌನವನ್ನು ತಳೆಯುವುದು ಆಕೆಯ ಬಂಡಾಯವನ್ನು ತೋರಿಸುತ್ತದೆ. "ನೀವೆಲ್ಲ ಅಲ್ಲಿಂದ ಹೊರಟು ಬಂದದ್ದೇ ತನ್ನನ್ನು ಅಪಮಾನಗೊಳಿಸಲೆಂದೇ ನಾನು ನಿಮ್ಮೊಂದಿಗೆ ಶಾಮೀಲಾಗಿ ಹೂಡಿದ ನಾಟಕವೆಂದು ಹೇಳಿ ನಮ್ಮನ್ನೆಲ್ಲ ಬೈದಾಡಿ ಹೆಂಡತಿಯ ಎದುರು ಬಯಲಾಟದ ಕುಣಿತ ಮಾಡಿಬಿಟ್ಟನಂತೆ ಆ ಮನೆಯಲ್ಲಿ ಮಾತನಾಡಲಾರೆನೆಂದು ಪಣತೊಟ್ಟ ಹೆಂಡತಿಯ ಬಾಯಿ ಬಿಡಿಸುವ ಹಠದಲ್ಲಿ ಅವಳಿಗೆ ಮಾಡಿದ ಚಿತ್ರಹಿಂಸೆಯನ್ನು ಸಹಿಸಲಾಗದೇ ನಿನ್ನೆ ರಾತ್ರಿಯೇ ಒಬ್ಬಳೇ ಟ್ಯಾಕ್ಸಿ ಹಿಡಿದು ಗಂಡನ ಮನೆಯನ್ನು ಬಿಟ್ಟು ಇಲ್ಲಿಗೆ ಬಂದಳೆಂದರೆ ನೋಡಿ!" ( ಯಶವಂತ ಚಿತ್ತಾಲ, ಪುರೋಷತ್ತಮ, ೨೦೦೬, ಪುಟ ೧೭೯) ಎಂಬ ಮಾತುಗಳಲ್ಲಿ ಲಕ್ಷ್ಮಿಯ ಬಂಡಾಯವನ್ನು ಗುರುತಿಸಬಹುದಾಗಿದೆ. ಗಂಡನ

ಚಿತ್ರಹಿಂಸೆ ಹೆಚ್ಚಾದಾಗ ಗಂಡನ ಮನೆಯನ್ನು ಬಿಟ್ಟು ಬರುವ ಲಕ್ಷ್ಮಿಯ ಈ ಕ್ರಿಯೆ ಆಕೆಯ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತದೆ.

'ಮೂರು ದಾರಿಗಳು' ಕಾದಂಬರಿಯ ವಿಶ್ವನಾಥ ಶಾನುಭಾಗರು ತಮ್ಮ ಮಗಳು ನಿರ್ಮಲೆ ಮತ್ತು ರಂಗಪ್ಪನ ಪ್ರಕರಣದಿಂದ ತಮ್ಮ ಮರ್ಯಾದೆ ನಾಶವಾಗುತ್ತದೆ ಎಂದು ತಿಳಿದು ನಿರ್ಮಲೆಯ ಮದುವೆಯನ್ನು ವಾಸುದೇವನ ಜೊತೆಯಲ್ಲಿ ಮಾಡಲು ತರಾತುರಿಯಲ್ಲಿ ನಿರ್ಧರಿಸುತ್ತಾರೆ. ಒಬ್ಬ ತಂದೆಯಾಗಿ ವಿಶ್ವನಾಥ ಶಾನುಭೋಗರು ತಮ್ಮ ಮಗಳ ಸಮಸ್ಯೆಯ ಮೂಲ ಅರಿಯಲು ಪ್ರಯತ್ನ ಮಾಡುವುದೇ ಇಲ್ಲ. ಅವರಿಗೆ ತಮ್ಮ ಮಗಳಿಗಿಂತ ತಮ್ಮ ಮನೆತನದ ಗೌರವವೇ ಮುಖ್ಯವಾಗಿ ಬಿಡುತ್ತದೆ. ಇದಕ್ಕಾಗಿ ಅವರು ತಮ್ಮ ಮಗಳ ಜೊತೆ ಯಾವುದೇ ವಿಚಾರವನ್ನು ಚರ್ಚಿಸದೆ ಆಕೆಯ ಮದುವೆಯನ್ನು ವಾಸುದೇವನ ಜೊತೆ ನಡೆಸುವ ನಿರ್ಧಾರ ಮಾಡುತ್ತಾರೆ. ಸ್ವಂತ ಅಪ್ಪನೇ ಮಗಳ ಬದುಕಿನಲ್ಲಿ ನಡೆದ ಸಂಗತಿಯನ್ನು ಪೂರ್ಣವಾಗಿ ತಿಳಿಯುವ ಪ್ರಯತ್ನ ಮಾಡದೆ ಮಗಳದೇ ತಪ್ಪೆಂದು ಭಾವಿಸುವುದನ್ನು ಕಂಡು ನಿರ್ಮಲೆ ಸಾಕಷ್ಟು ನೋವನ್ನು ಅನುಭವಿಸುತ್ತಾಳೆ. ತಂದೆ ವಿಶ್ವನಾಥ ಶಾನುಭಾಗರ ಈ ಕ್ರಿಯೆಯನ್ನು ನಿರ್ಮಲೆ ತನ್ನ ವಿರುದ್ಧ ಅವರು ಮಾಡುತ್ತಿರುವ ವ್ಯವಸ್ಥಿತವಾದ ಪಿತೂರಿಯೆಂಬಂತೆ ಭಾವಿಸುತ್ತಾಳೆ. ಆದದ್ದು ಸರಿಯಾಗಿ ಗೊತ್ತಿಲ್ಲದಿದ್ದರೂ ಅವರಿವರ ಗಾಳಿ ಮಾತಿಗೆ ಬೆದರಿ ಹೀಗೆ ಅವಸರದಲ್ಲಿ ತನ್ನ ಮದುವೆಯನ್ನು ನಿಶ್ಚಯಿಸಲು ಹೊರಟ ಹಿರಿಯರ ವಿರುದ್ಧ ಸಿಡಿದೇಳಬೇಕು ಎನ್ನುವ ಬಂಡಾಯದ ಭಾವನೆ ನಿರ್ಮಲೆಯಲ್ಲಿ ಮೂಡುತ್ತದೆ. ನಿರ್ಮಲೆಗೆ ಅವಸರದಲ್ಲಿ ಮದುವೆ ಮಾಡುವ ಪಿತೂರಿ ಬೆಳೆಯುತ್ತಿದ್ದಂತೆಯೇ ನಿರ್ಮಲೆಯಲ್ಲಿ ಪ್ರತಿಭಟನೆಯ ಮನೋಭಾವ ಗಟ್ಟಿಯಾಗತೊಡಗುತ್ತದೆ.

ನಿರ್ಮಲೆಯನ್ನು ಮದುವೆಯಾಗಲು ಬರುವ ವಾಸುದೇವನು ಹೆಣ್ಣಿಗಷ್ಟೇ ಶೀಲವನ್ನು ಆರೋಪಿಸುವ ಸಾಂಪ್ರದಾಯಿಕ ಸಮಾಜದ ಪ್ರತಿನಿಧಿ ಎಂಬಂತೆ ವರ್ತಿಸುತ್ತಾನೆ. ಈತ ಇಡೀ ಕಾದಂಬರಿಯ ಉದ್ದಕ್ಕೂ ಒಣ ಆದರ್ಶವಾದಿಯಂತೆ ಕಂಗೊಳಿಸುತ್ತಾನೆ. ನಿರ್ಮಲೆಯ ಮತ್ತು ರಂಗಪ್ಪನ ಪ್ರಕರಣದಿಂದ ಸಮಾಜದ ದೃಷ್ಟಿಯಲ್ಲಿ ಅಪರಾಧಿಯ ಸ್ಥಾನದಲ್ಲಿರುವ ನಿರ್ಮಲೆಯನ್ನು ಪಾರು ಮಾಡಲು ವಾಸುದೇವ ಮುಂದಾಗುತ್ತಾನೆ. ಈತ ವಿದ್ಯಾವಂತನಾದರೂ ಸಹ ಸಮಸ್ಯೆಯ ಮೂಲವನ್ನು ವಿಶ್ವನಾಥ ಶಾನುಭಾಗರಂತೆ ತಿಳಿಯಲು ಮುಂದಾಗುವುದೇ ಇಲ್ಲ. ಸಮಾಜದ ದೃಷ್ಟಿಯಲ್ಲಿ ಅಪರಾಧಿಯಾದ ನಿರ್ಮಲೆಯನ್ನು ಅಪರಾಧಿ ಎಂಬಂತೆಯೇ

ವಾಸುದೇವನು ನೋಡುತ್ತಾನೆ. ಮೊದಲು ವಾಸುದೇವ ತನ್ನ ಒಣ ಆದರ್ಶದಿಂದ ನಿರ್ಮಲೆಯನ್ನು ಮದುವೆಯಾಗಲು ಒಪ್ಪಿ ನಂತರ ಅದೇ ಒಣ ಆದರ್ಶವನ್ನು ಮರೆಯಲು ತನ್ನ ಮತ್ತು ಆಕೆಯ ಮದುವೆ ಸಂಬಂಧವನ್ನು ಮುರಿಯುತ್ತಾನೆ.

"ನಿರ್ಮಲೆಯ ನೋವು ತುಂಬಿದ ಬಾಡಿದ ಮುಖ ಕಣ್ಣು ಮುಂದೆ ನಿಂತಂತೆ ಆಗಿ ಎಂತಹ ದುಷ್ಟ ತಾನು ಎಂದುಕೊಂಡ. ರಂಗಪ್ಪನ ಮೇಲೆ ಪ್ರೇಮ ಮಾಡಿದಳು. ಜನ ಏನೇನೋ ಅಂದಿತು ಅಪ್ಪ ಹೆದರಿದ. ನನ್ನ ಹತ್ತಿರ ಓಡಿ ಬಂದ ಇವಳನ್ನು ಲಗ್ನವಾಗುವುದಕ್ಕೆ ಒಪ್ಪುವುದೆಂದರೇನೋ ಏನೋ ದೊಡ್ಡ ಉಪಕಾರ (ಅಲ್ಲ ಅಲ್ಲ ಇದು ನಿಜವಲ್ಲ) ವೆಂಬಂತೆ 'ಹೂಂ' ಎಂದೆ. ಅದಕ್ಕೆ 'ಪ್ರೀತಿ' ಎಂದು ಹೆಸರಿಟ್ಟೆ, ಪ್ರೇಮ ಪತ್ರ ಬರೆದೆ ಆದರೆ ನಾ ಪ್ರೀತಿಸಿದ ನಿರ್ಮಲೆ ಈ ನಿರ್ಮಲೆ ಬೇರೆ ಬೇರೆ ಎಂದು ತಿಳಿದಾಗ ಅಹಂಕಾರ ಅಡ್ಡ ಬಂದು ಅವಳನ್ನೇ ದ್ವೇಷಿಸುತ್ತಿದ್ದೀನಲ್ಲ. ನಾ ಮೊದಲೇ ಬೇಡ ಎಂದಿದ್ದರೆ ಈಗಲಾದರೂ ಏನು ತಡವಾಗಿದೆ ?.... ಅವಳ ಅಪ್ಪನಿಗೆ ನಾನೇ ತಿಳಿಸಲೇ? ಇವಳ ಪ್ರೇಮ ರಂಗಪ್ಪನ ಮೇಲಿದೆ ಎಂದು ? ಇದು ಅಧಿಕ ಪ್ರಸಂಗವಾಗಲಾರದೆ ? ಇಲ್ಲ, ಹೇಗಾದರೂ ಮಾಡಿ ಈ ಸಂಬಂಧ ಮುರಿಯಬೇಕು ಅದರ ತಪ್ಪನ್ನೆಲ್ಲ ನನ್ನ ಮೇಲೆ ತೆಗೆದುಕೊಳ್ಳಬೇಕು ನಿರ್ಮಲೆ ಹೆಣ್ಣು, ಅಬಲೆ, ಗಂಡಸಾದ ನಾನು ಇದರ ಎಲ್ಲಾ ಭಾರ ಹೊರಬೇಕು. ನಾನೇ ನನ್ನಿಂದ ಅವಳಿಗಾದ ಅನ್ಯಾಯಕ್ಕೆ ಪ್ರಾಯಶ್ಚಿತವೆಂದಾದರೂ ಈ ಸಂಬಂಧ ಮುರಿದುದರ ತಪ್ಪನ್ನು ನನ್ನ ಮೇಲೆ ತೆಗೆದುಕೊಳ್ಳಬೇಕು..... ನಿರ್ಮಲೆಯನ್ನು ರಕ್ಷಿಸಬೇಕು..... ಸಂಬಂಧ ಮುರಿಯಬೇಕು....." (ಯಶವಂತ ಚಿತ್ತಾಲ, ಮೂರುದಾರಿಗಳು, ೨೦೦೦, ಪುಟ ೨೦೭)

ವಾಸುದೇವನ ಇಂತಹ ಮಾತುಗಳು ಈಗಾಗಲೇ ಪ್ರತಿಭಟನೆಯ ಭಾವದಿಂದ ತುಂಬಿ ಹೋಗಿದ್ದ ನಿರ್ಮಲೆಯ ಮನಸ್ಸನ್ನು ಕೆದಕುತ್ತದೆ. ವಾಸುದೇವನ ಇಂತಹ ಅತಿರೇಕದ ಆದರ್ಶತನದ ಮಾತುಗಳು ಮತ್ತು ಬರವಣಿಗೆಗಳು ನಿರ್ಮಲೆಯ ಪ್ರತಿಭಟನೆಯ ಮನಸ್ಥಿತಿಯನ್ನು ಮತ್ತಷ್ಟು ಗಟ್ಟಿಗೊಳಿಸುತ್ತವೆ. "ಪರಿವೆ ಇರಬೇಕಾದದ್ದು ನನಗೆ; ನಿಮಗಲ್ಲ, ಆದದ್ದನ್ನು ಕುರಿತು ನನಗೇನೂ ಕೆಡಕೆನಿಸಿಲ್ಲ. ಅದಕ್ಕೆ ಯಾರ ಕ್ಷಮೆಯೂ ಬೇಕಿಲ್ಲ. ನಾನು ಮೆಚ್ಚಿಕೊಂಡವನು ನನಗೆ ಮುತ್ತು ಕೊಟ್ಟರೆ......" (ಯಶವಂತ ಚಿತ್ತಾಲ, ಮೂರುದಾರಿಗಳು, ೨೦೦೦, ಪುಟ ೨೭೪) ಎಂದು ನಿರ್ಮಲೆ ತಾನು ಎಂದೂ ಮೆಚ್ಚಿಕೊಂಡಿರದ ರಂಗಪ್ಪನನ್ನು ವಾಸುದೇವನ ಎದುರಿಗೆ ಮೆಚ್ಚಿಕೊಂಡಿದ್ದೀನಿ ಎಂದು ಹೇಳುವ ಮೂಲಕ ವಾಸುದೇವನ ಆದರ್ಶತನದ ಅತಿರೇಕದಿಂದ ಬೇಸತ್ತು ಹೋದ ತನ್ನ ದುಗುಡವನ್ನು ಹೊರ ಹಾಕುತ್ತಾಳೆ. ಇದು ನಿರ್ಮಲೆಯು ವಾಸುದೇವನ

ವಿರುದ್ಧ ತೋರುವ ಪ್ರತಿಭಟನೆಯಾಗಿದೆ. ಆಕೆಯ ಪ್ರತಿಭಟನೆಯ ಎರಡನೆಯ ಮುಖ ಇದಾಗಿದೆ.

ತನ್ನ ಮತ್ತು ರಂಗಪ್ಪನ ನಡುವೆ ನಿಜವಾಗಿ ನಡೆದದ್ದನ್ನು ತಿಳಿಯದೆ ಬಾಯಿಗೆ ಬಂದಂತೆ ಮಾತನಾಡಿ ತನ್ನನ್ನು ಅಪರಾಧಿಯ ಸ್ಥಾನದಲ್ಲಿ ನಿಲ್ಲಿಸಿರುವ ವ್ಯವಸ್ಥೆಯ ಬಗ್ಗೆ ನಿರ್ಮಲೆಗೆ ಅಪಾರವಾದ ಸಿಟ್ಟಿದೆ. "ಇಲ್ಲ ಈಗ ಹೆದರುವುದಿಲ್ಲ. ನೀವೆಲ್ಲ ಊಹಿಸಿಕೊಂಡ ಆ ಪ್ರಕರಣ ಇನ್ನೂ ಮಾಡಿಲ್ಲವೇ ರಂಡೆಯರಾ ನಿಮಗೆ ಹೆದರಿ ಅಲ್ಲ. ನನಗೆ ಹೇಸಿಗೆ ಅನಿಸಿತು. ಆ ರಂಗಪ್ಪನ ಬಗ್ಗೆ, ನನ್ನ ಬಗ್ಗೆ, ನನಗೆ 'ಬೇಕೂ' ಅನಿಸಿದ್ದರೆ ಅಂದು ಆಗೇ ಬಿಡುತ್ತಿತ್ತು. ನಾನೇ ಬೇಡವೆಂದೆ ರಂಗಪ್ಪನ ಸೊಂಟಕ್ಕೆ ಇದೇ ಕಾಲುಗಳಿಂದ ಒದ್ದು ಬಂದೆ ಥತ್ ನೀಚ ನಿರ್ಲಜ್ಜ ನಾನೆಂದರೆ ಏನೆಂದು ತಿಳಿದನೋ!" (ಯಶವಂತ ಚಿತ್ತಾಲ, ಮೂರುದಾರಿಗಳು, ೨೦೦೦, ಪುಟ ೨೬೯) ಎನ್ನುವ ಮೂಲಕ ತನ್ನ ಮತ್ತು ರಂಗಪ್ಪನ ನಡುವೆ ಏನೋ ಆಗಿದೆ ಎಂದು ಮಾತಾಡಿಕೊಳ್ಳುವ ಜನರ ಎದುರಿಗೆ ಅಂದು ನಡೆದಿದ್ದ ಮಾಹಿತಿಯನ್ನು ನಿರ್ಮಲೆ ನೀಡುತ್ತಾಳೆ. ಒಂದು ಸಾಮಾನ್ಯ ವಿಷಯಕ್ಕೆ ಶೀಲವಂತಿಕೆ, ಮಡಿವಂತಿಕೆಯನ್ನು ಆರೋಪಿಸಿ ನಿರ್ಮಲೆಯನ್ನು ನೀತಿಗೆಟ್ಟವಳೆಂದು ನುಡಿದ ಸಮಾಜದ ವಿರುದ್ಧ ನಿರ್ಮಲೆ, ಒಬ್ಬ ಹೆಣ್ಣು ಮಗಳು ಬಹಿರಂಗವಾಗಿ ಹೇಳಲಿಕ್ಕೆ ಸಾಧ್ಯವಾಗದ ವಿಚಾರಗಳನ್ನು ಹೇಳುವ ಮೂಲಕ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾಳೆ.

ತಂದೆ ವಿಶ್ವನಾಥ ಶಾನುಭಾಗ, ಮದುವೆಯಾಗಲು ಬಂದಿದ್ದ ವಾಸುದೇವ, ರಂಗಪ್ಪ, ಸಮಾಜದ ಜನರು ಇವರೆಲ್ಲರಿಂದ ರೋಸಿಹೋಗಿದ್ದ ನಿರ್ಮಲೆ ಇವರ ಮೇಲೆ ಪ್ರತೀಕಾರ ತೀರಿಸಿ ಕೊಳ್ಳಲೆಂದೇ ರಂಗಪ್ಪನ ಜೊತೆ ಓಡಿ ಹೋಗುವ ನಿರ್ಧಾರ ಕೈಗೊಳ್ಳುತ್ತಾಳೆ. ಆದರೆ ರಂಗಪ್ಪನ ಜೊತೆ ಓಡಿಹೋಗಲು ಸಾಧ್ಯವಾಗದೆ ಇದ್ದಾಗ ನಿರ್ಮಲೆ ಪ್ರತೀಕಾರ ತೀರಿಸಿಕೊಳ್ಳಲೆಂದೇ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಈ ಆತ್ಮಹತ್ಯೆಯ ಮೂಲಕ ನಿರ್ಮಲೆ ತಂದೆ ವಿಶ್ವನಾಥ ಶಾನುಭಾಗ ತನ್ನ ದೇಹವನ್ನು ಬಯಸಿ ಬಂದಿದ್ದ ರಂಗಪ್ಪ, ಅತಿರೇಕದ ಆದರ್ಶವನ್ನು ಮೈಗೂಡಿಸಿ ಕೊಂಡಿದ್ದ ವಾಸುದೇವ, ಬಾಯಿಗೆ ಬಂದಂತೆ ಮಾತಾಡಿ ಕೊಳ್ಳುತ್ತಿದ್ದ ಸಮಾಜ ಈ ಎಲ್ಲದರ ವಿರುದ್ಧ ಸೇಡನ್ನು ತೀರಿಸಿಕೊಳ್ಳುತ್ತಾಳೆ. ಎಲ್ಲರಿಂದ ದೂರವಾಗಿ ಆಕೆ ಆತ್ಮಹತ್ಯೆ ಮಾಡಿಕೊಳ್ಳುವ ನಿರ್ಮಲೆಯ ದುರಂತ ಅಂತ್ಯವಾದ ಸಾವು ಪ್ರತಿಭಟನೆಯ ಸ್ವರೂಪ ಪಡೆದುಕೊಳ್ಳುತ್ತದೆ. ಭೀತಿ, ಪ್ರೀತಿ,ವ್ಯವಸ್ಥೆಯ ವಿರುದ್ಧದ ಪ್ರತಿಭಟನೆಯು ನಿರ್ಮಲೆಗೆ ಅನಿವಾರ್ಯವಾಗುತ್ತದೆ. "ಸತ್ತರೂ ಬಿಡುವುದಿಲ್ಲ ಭೂತವಾಗಿ ಕಾಡುತ್ತೇನೆ" (ಯಶವಂತ

ಚಿತ್ತಾಲ, ಮೂರುದಾರಿಗಳು, ೨೦೦೦, ಪುಟ ೨೮೮) ಎನ್ನುವ ನಿರ್ಮಲೆಯು ತಾನು ಬದುಕಿದಾಗ ತನ್ನನ್ನು ಕಾಡಿದವರನ್ನು ತಾನು ಸತ್ತು ಕಾಡುವ ನಿರ್ಧಾರ ಮಾಡುತ್ತಾಳೆ. ನಿರ್ಮಲೆಯ ಪ್ರತಿಭಟನೆಯ ಈ ನಿರ್ಧಾರವು ನಿಜಕ್ಕೂ ನಮ್ಮನ್ನು ಕಾಡುತ್ತದೆ. ನಿರ್ಮಲೆಯ ಈ ಪ್ರತಿಭಟನೆ ವ್ಯಕ್ತಿ ಮತ್ತು ಸಮಾಜದ ಕ್ರೌರ್ಯದ ವಿರುದ್ಧ ಇಟ್ಟ ಹೆಜ್ಜೆಯಾಗಿದೆ.

**೫.೬. ಲೈಂಗಿಕ ಪ್ರಜ್ಞೆ ಮತ್ತು ಮಹಿಳೆಯರು :**

ನವ್ಯ ಕಾಲಘಟ್ಟದ ಪ್ರಮುಖ ಪರಿಕಲ್ಪನೆಗಳಲ್ಲಿ ಲೈಂಗಿಕ ಪ್ರಜ್ಞೆಯೂ ಒಂದಾಗಿದೆ. ನವ್ಯ ಸಾಹಿತಿಗಳು ಈ ಲೈಂಗಿಕ ಪ್ರಜ್ಞೆ ಎಂಬ ಪರಿಕಲ್ಪನೆಯನ್ನು ತಮ್ಮ ಸಾಹಿತ್ಯದಲ್ಲಿ ತರುವ ಪ್ರಯತ್ನ ಮಾಡಿದ್ದಾರೆ. ಇದಕ್ಕೆ ಯಶವಂತ ಚಿತ್ತಾಲರು ಹೊರತಾಗಿಲ್ಲ. ಕೇಡು, ಸಾವು ಮತ್ತು ಲೈಂಗಿಕತೆ ಇವರ ಸಾಹಿತ್ಯದಲ್ಲಿ ಮತ್ತೆ ಮತ್ತೆ ಬಳಕೆಯಾಗುವ ಪರಿಕಲ್ಪನೆಗಳಾಗಿದೆ. ಲೈಂಗಿಕ ಪ್ರಜ್ಞೆ ಎಂಬ ಪರಿಕಲ್ಪನೆಯ ಮೂಲಕ ಯಶವಂತ ಚಿತ್ತಾಲರು ಮನುಷ್ಯ ಸ್ವಭಾವದ ಮೂಲ ಸ್ಥಿತಿಯನ್ನು ಅರಿಯುವ ಪ್ರಯತ್ನವನ್ನು ಮಾಡುತ್ತಾರೆ. ಇವರಲ್ಲಿ ಲೈಂಗಿಕ ಪ್ರಜ್ಞೆಯು ಮನುಷ್ಯನ ಮೂಲ ಪ್ರವೃತ್ತಿಗಳಲ್ಲಿ ಒಂದೆಂದು ಬಳಕೆಯಾಗಿದೆ.

ಯಶವಂತಚಿತ್ತಾಲರ 'ಸೆರೆ' ಕತೆಯ ಬರ್ಮಾಚಾರಿ ಬ್ರಹ್ಮಚರ್ಯದ ಆದರ್ಶಕ್ಕೆ ಒಳಗಾಗಿ ತನ್ನ ಮನಸ್ಸಿನಲ್ಲಿ ಮೂಡುತ್ತಿದ್ದ ಲೈಂಗಿಕ ತುಡಿತಗಳನ್ನು ಹತ್ತಿಕ್ಕಲು ಬಹಳ ಪ್ರಯತ್ನ ಪಡುತ್ತಾನೆ. ಸೋದರತ್ತೆ ಸತ್ತ ವೇಳೆ ಕೆಟ್ಟದ್ದಾಗಿತ್ತೆಂದು ಬಿಟ್ಟ ಹಳೆ ಮನೆಯ ಅಡಿಗೆ ಮನೆಯ ಬಾಗಿಲನ್ನು ದೂಡಿ ದನ ಹೊಕ್ಕಿದ್ದರಿಂದ ಅದನ್ನು ಸರಿ ಮಡಲು ಬರ್ಮಾಚಾರಿ ಹೋಗುತ್ತಾನೆ. ಈ ಮನೆಯ ಜಗಲಿ ಮೇಲೆ ಮದುವೆಯಾಗಿ ಕೆಲವು ದಿನಗಳಲ್ಲೆ ಗಂಡ ಓಡಿ ಹೋದ ದೇವಿ ಒಲೆಯನ್ನು ಹೂಡಿದ್ದಾಳೆ. ದಾಂಪತ್ಯ ಸುಖವನ್ನು ಕಂಡಿರದ ದೇವಿ ಮತ್ತು ಬ್ರಹ್ಮಚರ್ಯವನ್ನು ಪಾಲಿಸುತ್ತೇನೆಂದು ಸೋಗು ಹಾಕಿಕೊಂಡ ಬರ್ಮಾಚಾರಿಯ ಮನಸ್ಸಿನಲ್ಲಿ ಲೈಂಗಿಕತೆಯ ತುಡಿತಗಳಿವೆ. ಹಳೆ ಮನೆಯ ಅಡಿಗೆ ಮನೆಯ ಬಾಗಿಲನ್ನು ಸರಿ ಮಾಡಲು ಹೋದ ಬರ್ಮಾಚಾರಿ ಜಗುಲಿಯ ಮೇಲೆ ಒಲೆ ಹೂಡಿದ್ದ ದೇವಿಯ ಮೊಲೆಗಳನ್ನು ನೋಡಿ ಗೊಂದಲಕ್ಕೆ ಈಡಾಗುತ್ತಾನೆ. ಮುಂದೆ ಗರಗಸ ತರಲು ಹೊನ್ನಪ್ಪಚಾರಿಯ ಮನೆಗೆ ಹೋದಾಗ "ಇವರು ದಿನವೂ ನಸುಕಿನಲ್ಲೇ ಗಂಗಾವಳಿಗೆ ಹೋದವರು ತಿರುಗಿ ಮನೆಗೆ ಬರುವುದಂತು ತುಂಬ ರಾತ್ರಿಯಾದ ಮೇಲೆ" (ಯಶವಂತ ಚಿತ್ತಾಲ, ಚಿತ್ತಾಲರ ಕತೆಗಳು, ೧೯೮೩, ಪುಟ ೨೧೯) ಎಂದು ವೈಯ್ಯಾರ ಮಾಡುತ್ತ ನುಡಿದ ಹೊನ್ನಪ್ಪಚಾರಿಯ

ಹೆಂಡತಿಯನ್ನು ಮತ್ತು ಕೆಣಕುವ ರೀತಿಯಲ್ಲಿದ್ದ ಆಕೆಯ ಕಾಮುಕ ಕಣ್ಣುಗಳನ್ನು ನೋಡಿ ಮತ್ತಷ್ಟು ಗೊಂದಲಗೊಳ್ಳುತ್ತಾನೆ. ತನ್ನ ಬ್ರಹ್ಮಚರ್ಯ ವ್ರತವು ಭಂಗವಾಗಬಹುದೆಂಬ ಭೀತಿ ಹೊನ್ನಪ್ಪಚಾರಿಯ ಹೆಂಡತಿ ಮತ್ತು ದೇವಿಯರನ್ನು ನೋಡಿದ ಮೇಲೆ ಬರ್ಮಾಚಾರಿಗೆ ಕಾಡುತ್ತದೆ. ತನ್ನ ಬ್ರಹ್ಮಚಾರ್ಯ ವ್ರತಕ್ಕೆ ಭಂಗ ಬರಬಾರದೆಂದು ಬರ್ಮಾಚಾರಿ ಪ್ರಾಮಾಣಿಕವಾಗಿ ಬಾಗಿಲ ರಿಪೇರಿಯಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿದ್ದರೂ ದೇವಿಯ ನುಣುಪಾದ ಮಾಂಸಲ ಬೆತ್ತಲೆ ತೊಡೆ, ಆಕೆಯ ಹೆಜ್ಜೆಯ ಸದ್ದು, ಆಕೆಯ ಮೊಲೆ, ಬಳೆಗಳ ಕಿಂಕಿಣಗಳಿಂದ ಆತನ ಸುಪ್ತ ಮನಸ್ಸಿನಲ್ಲಿದ್ದ ಲೈಂಗಿಕ ತುಡಿತವು ಜಾಗೃತಗೊಳ್ಳುತ್ತವೆ. ಇದರಿಂದ ಬರ್ಮಾಚಾರಿ ದೇವಿಯೊಡನೆ ಮನುಷ್ಯ ಸಹಜವಾದ ಲೈಂಗಿಕ ತುಡಿತವನ್ನು ತಣಿಸಲು ಮುಂದುಗುತ್ತಾನೆ. ಬರ್ಮಾಚಾರಿ ಮತ್ತು ದೇವಿ ಇಬ್ಬರು ಲೈಂಗಿಕತೆಗಾಗಿ ಹಾತೊರೆಯುವ ಮನಸ್ಥಿತಿಯುಳ್ಳವರೇ ಆಗಿದ್ದಾರೆ. ಆದ್ದರಿಂದ ಇವರಿಬ್ಬರು ಜೊತೆಯಾಗುತ್ತಾರೆ. ದೇವಿ ಬರ್ಮಾಚಾರಿಯ ಸುಪ್ತ ಮನಸ್ಸಿನಲ್ಲಿ ಹುದುಗಿದ್ದ ಲೈಂಗಿಕತೆಯನ್ನು ಬಡಿದು ಎಚ್ಚರಿಸಿ ಆತನಿಗೆ ಲೈಂಗಿಕತೆಯ ಅನುಭವವನ್ನು ನೀಡಲು ಯಶಸ್ವಿಯಾಗುತ್ತಾಳೆ.

ಮನುಷ್ಯ ಸಂಘಜೀವಿ. ಆತ ಸಮಾಜದ ಜೊತೆ ಬೆರತು ಜೀವನವನ್ನು ನಡೆಸಲೇ ಬೇಕಾಗುತ್ತದೆ. ಅದು ಆತನಿಗೆ ಸಾಧ್ಯವಾಗದೆ ಹೋದರೆ ಮತ್ತು ಜನರ ಭಾವನೆಯನ್ನು ತಿಳಿಯಲು ಆತನಿಗೆ ಸಾಧ್ಯವಾಗದೆ ಹೋದರೆ ಆತ ಜೀವಂತವಾಗಿದ್ದು ಶವವಾಗಿ ಬಿಡುತ್ತಾನೆ. ಈ ವಾಸ್ತವ ಸತ್ಯವನ್ನು ಯಶವಂತ ಚಿತ್ತಾಲರು ತಮ್ಮ 'ಬೀಗ ಮತ್ತು ಬೀಗದ ಕೈ' ಕಥೆಯ ನಾಯಕ ಕೇಶವನ ಮೂಲಕ ತಿಳಿಸುವ ಪ್ರಯತ್ನ ಮಾಡುತ್ತಾರೆ. ಸಂಜೀವಿನಿ ಎಂಬ ಹುಡುಗಿ ಕೇಶವನನ್ನು ಮನಸಾರೆ ಪ್ರೀತಿಸುತ್ತಾಳೆ. ಆಕೆಗೆ ಕೇಶವನೇ ಮುಂದುವರಿದು ತನ್ನ ಪ್ರೀತಿಯನ್ನು ಅರ್ಥ ಮಾಡಿಕೊಳ್ಳಲಿ ಎಂಬ ಆಸೆ ಇದ್ದು ಅದಕ್ಕಾಗಿ ಆಕೆ ನಾನಾ ಪ್ರಯತ್ನವನ್ನು ಮಾಡುತ್ತಾಳೆ. ಕೇಶವನಿಗೆ ತನ್ನ ಪ್ರೀತಿಯನ್ನು ಅರ್ಥ ಮಾಡಿಸಲೆಂದು ಕೇಶವನನ್ನು ಸಿನಿಮಾಕ್ಕೆ ಕರೆದೊಯ್ಯುತ್ತಾಳೆ. ಸಿನಿಮಾಕ್ಕೆ ಹೋಗುವ ಮೂಲಕ ಸಂಜೀವಿನಿ ಆತ ಪರಿಚಯವಾದ ದಿನಗಳಿಂದ ಆತನ ಬಗ್ಗೆ ಏನೇನೂ ಭಾವನೆಗಳನ್ನು ಬೆಳೆಸಿ ಕೊಂಡಿದ್ದಳೋ ಅದನ್ನೆಲ್ಲಾ ಹೇಳಿ ಕೊಳ್ಳಬೇಕೆಂಬ ಆಸೆ ಇಟ್ಟುಕೊಂಡಿದ್ದಳು. ಆದರೆ ಕೇಶವ ಸಿನಿಮಾ ನೋಡುತ್ತಾ ಮೌನವಾಗಿದ್ದನು. ಕೊನೆಗೆ ತಾನೇ ಮುಂದುವರೆದು ಸಂಜೀವಿನಿ "…. ಇನ್ನು ಕಾಯುವ ತಾಳ್ಮೆ ಇಲ್ಲದವಳಂತೆ ತನ್ನ ಕೈಯನ್ನು ಮೆಲ್ಲಗೆ ಸರಿಸಿ ಕೇಶವನ ಕೈಗೆ ತಾಕಿಸಿದಳು. ಮೈ ಜುಮ್ಮೆಂದಿತು ಆದರೆ ಮರುಕ್ಷಣ ತನ್ನ ಕೈಗೆ ತಾಗಿದ ಆ ಗಂಡು ಕೈ ಬೆವತಿದೆ

ಎಂಬುದು ಲಕ್ಷ್ಯಕ್ಕೆ ಬಂದಾಗ ಮನ ಮುದುಡಿತು. ಹೊತ್ತು ಹೋದಂತೆ ಆ ಕೈ ಹೆಚ್ಚು ಹೆಚ್ಚು ಬೆವರಿ ತಣ್ಣಗಾಗುತ್ತಿದ್ದಂತೆ ಎನಿಸಿದಾಗ ಆ ಕೈಯನ್ನು ಮುಟ್ಟುವ ತನ್ನ ಆತುರ ಧೈರ್ಯಗಳ ಬಗ್ಗೆ ಜಿಗುಪ್ಸೆ ಹುಟ್ಟಿತು. ಸಂಜೀವಿನಿ ತನ್ನ ಕೈಯನ್ನು ಸರಕ್ಕನೆ ಎಳೆದು ಕೊಂಡಳು ಬಯಸಿ ಬಂದ ಹೆಣ್ಣಿನ ಸಾನಿಧ್ಯದಲ್ಲಿ ಹೀಗೆ ಮುದುಡಿಕೊಳ್ಳುವ ಗಂಡಸಿನ ಬಗ್ಗೆ ತಿರಸ್ಕಾರ ಮೂಡಿತು." (ಯಶವಂತ ಚಿತ್ತಾಲ, ಚಿತ್ತಾಲರ ಕತೆಗಳು, ೧೯೮೩, ಪುಟ ೪೦೯) ಇಂತಹ ತಿರಸ್ಕಾರದಿಂದ ಸಂಜೀವಿನಿ ಆತನನ್ನು ತೊರೆದು ಹೋಗುತ್ತಾಳೆ. ಕೇಶವನಿಗೆ ಥಿಯೇಟರಿನಲ್ಲಿ ಸಂಜೀವಿನಿ ಪಕ್ಕದಲ್ಲಿ ಕುಳಿತಿದ್ದಾಗಲೂ ಮುಜುಗರ, ಹೆದರಿಕೆಯಿಂದ ಒಂದು ಹೆಣ್ಣಿನ ಪ್ರೀತಿಯನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಾಗಲಿಲ್ಲ ಎಂಬ ಕೊರಗಿನಲ್ಲಿ ಸಾಯುತ್ತಾನೆ. ಮಾನವ ಸಂಬಂಧ ಸ್ಥಾಪಿಸಿಕೊಳ್ಳಲಾಗದ ಕೇಶವ ಇದ್ದೂ ಸತ್ತಂತೆ ಎಂಬುದನ್ನು ಸಂಜೀವಿನಿ ಮನವರಿಕೆ ಮಾಡಿಕೊಡುತ್ತಾಳೆ.

### ೩.೭. ವ್ಯಕ್ತಿ ಹಾಗೂ ಸಮಾಜದ ಕೇಡಿನ ಪ್ರಜ್ಞೆ ಮತ್ತು ಮಹಿಳೆಯರು :

ಸಮಾಜದಲ್ಲಿ ಕೆಲವೊಂದು ಒಪ್ಪಿತ ಮೌಲ್ಯಗಳಿರುತ್ತವೆ. ಈ ಒಪ್ಪಿತ ಮೌಲ್ಯಗಳ ಚೌಕಟ್ಟಿನಲ್ಲಿಯೇ ಎಲ್ಲರೂ ಬಾಳಬೇಕೆಂದು ವ್ಯವಸ್ಥೆಯು ಆಶಿಸುತ್ತದೆ. ಈ ಒಪ್ಪಿತ ಮೌಲ್ಯಗಳು ಸಾಕಷ್ಟು ಬಾರಿ ಮಹಿಳಾ ವಿರೋಧಿ ತತ್ವಗಳನ್ನು ಒಳಗೊಂಡಿರುತ್ತವೆ. ಈ ಒಪ್ಪಿತ ಮೌಲ್ಯಗಳ ಕೇಡಿನ ಪ್ರಜ್ಞೆಯಿಂದ ಮಹಿಳೆ ಶೋಷಣೆ ಒಳಗಾಗುತ್ತಾಳೆ. ಅಲ್ಲದೆ ಪುರುಷರು ಸಹ ಸಮಾಜದಲ್ಲಿರುವ ಈ ಕೇಡಿನ ಪ್ರಜ್ಞೆಯನ್ನು ಪ್ರಶ್ನಿಸದೆ ಮೈಗೂಡಿಸಿಕೊಂಡು ಮಹಿಳೆಯನ್ನು ಶೋಷಿಸಲು ಮುಂದಾಗುತ್ತಾರೆ. ವ್ಯಕ್ತಿ ಮತ್ತು ಸಮಾಜದ ಕೇಡಿನ ಪ್ರಜ್ಞೆಯಿಂದ ಸಮಾಜದಲ್ಲಿರುವ ಮಹಿಳೆಯರ ಸ್ಥಿತಿ ಮತ್ತಷ್ಟು ಶೋಚನೀಯವಾಗುತ್ತದೆ. ದ್ವಿತೀಯ ಪ್ರಜೆಯಾಗಿರುವ ಮಹಿಳೆ ಇಂತಹ ಶೋಷಣೆಗಳಿಂದ ದುರಂತಕ್ಕೊಳಗಾಗುತ್ತಾಳೆ. ವ್ಯಕ್ತಿಯಲ್ಲಿ ಸ್ವಭಾವತಃ ಇರುವ ಕೇಡಿನ ಪ್ರಜ್ಞೆಯನ್ನು ಸಮಾಜವು ಮತ್ತಷ್ಟು ಬಲಪಡಿಸಿ ಮಹಿಳೆಯರ ಸ್ಥಿತಿಯನ್ನು ಮತ್ತಷ್ಟು ಕರಾಳಕ್ಕೆ ಕೊಂಡೊಯ್ಯುತ್ತದೆ. ಇದನ್ನು ಯಶವಂತ ಚಿತ್ತಾಲರು ತಮ್ಮ ಕಥನ ಸಾಹಿತ್ಯದಲ್ಲಿ ಶೋಧಿಸಿದ್ದಾರೆ.

'ಆಬೋಲೀನ' ಕತೆಯ ಆಬೋಲೀನ ಶಾಲೆಗೆ ಹೋಗಿ ವಿದ್ಯೆಯನ್ನು ಕಲಿತವಳಲ್ಲ. ತಮ್ಮ ಜಾತಿಯವರ ಕೇರಿಯಿಂದ ಅವರ ಮನೆ ದೂರವಿದ್ದರಿಂದ ಯಾರಲ್ಲಿಯೂ ಹೇಳಿಕೊಳ್ಳುವಂತಹ ಸಲಿಗೆಯನ್ನು ಆಬೋಲೀನಳು ಬೆಳೆಸಿಕೊಂಡಿರಲಿಲ್ಲ. "ಇಂತಹ ವಾತಾವರಣದಲ್ಲಿ ಬೆಳೆದ ಆ ಅಜ್ಞ ಮುಗುದೆಗೆ ತನ್ನ ನಿತ್ಯ ಪರಿಚಯದ 'ತಂದೆ-ಮಗಳು', 'ಅಕ್ಕ-ತಮ್ಮ', ಈ ಸಂಬಂಧಗಳ 'ಗಂಡು-ಹೆಣ್ಣಿ'ನ ಸಂಬಂಧ ಇದೆ ಎಂಬ

ಅರಿವು ಇದ್ದರೂ ಆ ಸಂಬಂಧದ ವೈಚಿತ್ರ್ಯವೇನು? ಎನ್ನುವುದರ ಜ್ಞಾನ ಮಾತ್ರ ಇರಲಿಲ್ಲ" (ಯಶವಂತ ಚಿತ್ತಾಲ, ಚಿತ್ತಾಲರ ಕತೆಗಳು, ೧೯೮೩, ಪುಟ ೯೯) ಈ ರೀತಿ ಬೆಳೆದ ಆಬೋಲೀನಳ ಮೋಹಕ ಸೌಂದರ್ಯಕ್ಕೆ ಮರುಳಾಗಿ ಅದೇ ಊರಿನ ಮನವೇಲ ಎಂಬ ವ್ಯಕ್ತಿ ಆಕೆಯನ್ನು ಮದುವೆ ಮಾಡಿಕೊಳ್ಳಬೇಕೆಂದು ನಿರ್ಧರಿಸುತ್ತಾನೆ. ಈಗಾಗಲೇ ಎರಡು ಮದುವೆ ಮಾಡಿಕೊಂಡಿರುವ ಮನವೇಲನಿಗೆ ಮುಗ್ಧ ಹುಡುಗಿ ಆಬೋಲೀನಳನ್ನು ಮದುವೆಯಾಗುವ ಆಸೆ ಹುಟ್ಟುತ್ತದೆ. ಕಾಮದ ಉದ್ದೇಶವನ್ನು ಇಟ್ಟುಕೊಂಡ ಮನವೇಲ ಒಮ್ಮೆ ದೇವಸ್ಥಾನದಲ್ಲಿ ಒಂಟಿಯಾಗಿ ಕುಳಿತ್ತಿದ್ದ ಆಬೋಲೀನಳ ಮೇಲೆ ಹದ್ದಿನಂತೆ ಎರಗಿ "ಈಗಲಾದರೂ ಒಪ್ಪುತ್ತೀಯೋ ಇಲ್ಲವೋ ನನ್ನನ್ನು ಮದುವೆಯಾಗಲು ನನ್ನ ಎಂಜಲು ನಿನ್ನ ತುಟಿಯಲ್ಲಿದೆ. ಈಗ ನೀನು ಬಸುರಾಗುತ್ತಿ" (ಯಶವಂತ ಚಿತ್ತಾಲ, ಚಿತ್ತಾಲರ ಕತೆಗಳು, ೧೯೮೩, ಪುಟ ೯೪) ಎಂದು ವಿನಾ ಕಾರಣ ಹೆದರಿಸಲು ಮುಂದಾಗುತ್ತಾನೆ. ಬಸುರಿಯೆಂದರೇನು ಎಂದೇ ಗೊತ್ತಿಲ್ಲದ ಆಬೋಲೀನ, ಮನವೇಲನ ಬೆದರಿಕೆಗೆ ಸಹಜವಾಗಿಯೇ ಹೆದರಿಕೊಳ್ಳುತ್ತಾಳೆ. ಜೊತೆಗೆ ಸಮಾಜವು ಸಹ ಆಬೋಲೀನಳಿಗೆ ಮನವೇಲನ ಜೊತೆ ಸಂಬಂಧವಿದೆ ಎಂಬಂತೆ ಮಾತಾಡಿಕೊಳ್ಳತೊಡಗುತ್ತದೆ. ಇವುಗಳಿಂದ ಅಬೋಲೀನ ಮಾನಸಿಕವಾಗಿ ಕುಗ್ಗಿ ಹೋಗುತ್ತಾಳೆ. ಕೊನೆಗೆ ಮನವೇಲನನ್ನು ಮದುವೆಯಾಗಲು ನಿರ್ಧರಿಸುತ್ತಾಳೆ. ಮದುವೆಯಾದ ನಂತರ ಆಬೋಲೀನಳಿಗೆ ತಾನು ಬಸುರಿಯಲ್ಲವೆಂಬ ಅರಿವು ಮೂಡುತ್ತದೆ. ಆದರೆ ಆ ಸಂದರ್ಭದಲ್ಲೂ ದುಷ್ಟ ಮನವೇಲ ತನ್ನ ಮೋಸ ಎಲ್ಲಿ ಸಮಾಜದೆದುರು ಬಯಲಾಗುತ್ತದೆಯೋ ಎಂಬ ಭಯದಿಂದ ಆಬೋಲೀನಳೆ ತನಗೆ ಮೋಸ ಮಾಡಿದ್ದಾಳೆ ಎಂಬ ಆರೋಪವನ್ನು ಮಾಡುತ್ತಾನೆ. ಮನವೇಲ ಮಾಡಿದ ಕ್ರೂರ ಆರೋಪವನ್ನು ಸಮಾಜವು ನಂಬುತ್ತದೆ. "ಇಂತಹ ಒಂದು ಸುದ್ದಿಗಾಗಿಯೇ ಕಾದು ಕುಳಿತ ಜನ 'ಅಬ್ಬಾ' ಎಂದಿತು. ಹದಿನಾಲ್ಕು ವರುಷದ ಈ ಎಳೆಯ ಹುಡುಗಿಗೆ ಏನೊಂದು ಚಾತುರ್ಯ! ಗಂಡನನ್ನು ದೊರಕಿಸುವ ಈ ಹೊಸ ಉಪಾಯ ಇನ್ನು ಕೇಳಿ ಗೊತ್ತಿರಲಿಲ್ಲ ಬಿಡು ಪಾಪ! ಮನವೇಲ ಹೇಳಿ ಕೇಳಿ ಕೆಟ್ಟವನೆಂದು ಅವನ ಮೇಲೆ ಇಂತಹ ಆರೋಪ ಹೊರಿಸಬಹುದೆ?" (ಯಶವಂತ ಚಿತ್ತಾಲ, ಚಿತ್ತಾಲರ ಕತೆಗಳು, ೧೯೮೩, ಪುಟ ೧೧೨) ಎಂದು ಸಮಾಜವು ಕೂಡ ಮನವೇಲನದ್ದು ತಪ್ಪೇ ಇಲ್ಲ ಎಂದು ಮಾತಾಡಿಕೊಳ್ಳುತ್ತದೆ. ತಾನು ಯಾವ ಪಾಪವನ್ನು ಮಾಡದೇ ಇದ್ದರೂ ಸಮಾಜವು ತನ್ನನ್ನು ನಿಂದಿಸುವುದನ್ನು ಕೇಳಿ ಮಾನಸಿಕವಾಗಿ ಆಬೋಲೀನಳ ಕುಗ್ಗಿ ಹೋಗುತ್ತಾಳೆ. ಕೊನೆಗೆ ತಾನು ಬದುಕಿರುವುದಕ್ಕಿಂತ ಸಾಯುವುದೇ ಮೇಲೆಂದು ಬಾವಿಗೆ ಹಾರಿ

ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಹೀಗೆ ಆಬೋಲೀನಳ ದುರಂತ ಅಂತ್ಯಕ್ಕೆ ಮನವೇಲನ ದುಷ್ಟತನ ಮತ್ತು ಸಮಾಜದ ಕ್ರೌರ್ಯ ಜೊತೆಯಾಗಿ ಕಾರಣವಾಗುತ್ತದೆ. ಬಸುರಿಯಾಗುವುದು ಅಂದರೆ ಏನು ಎಂಬುದನ್ನು ತಿಳಿಯದ ಮುಗ್ಧೆ ಆಬೋಲೀನ ವ್ಯಕ್ತಿ ಮತ್ತು ಸಮಾಜದ ಕೇಡಿನ ಪ್ರಜ್ಞೆಗೆ ಬಲಿಯಾಗುತ್ತಾಳೆ.

ಪುರುಷೋತ್ತಮನ ಮನೆಯನ್ನು ಪಡೆಯಲು 'ಪುರುಷೋತ್ತಮ' ಕಾದಂಬರಿಯ ವೆಂಕಟದಾಸೂ ನಾನಾ ಪ್ರಯತ್ನಗಳನ್ನು ಮಾಡುತ್ತಾನೆ. ಆದರೂ ಸಹ ಪುರುಷೋತ್ತಮ ತನ್ನ ಮನೆಯನ್ನು ಬಿಟ್ಟುಕೊಡುವುದಿಲ್ಲ. ಆಗ ಹಣದಾಸೆಗೆ ಬಿದ್ದ ವೆಂಕಟದಾಸೂ, ಮಂಜುನಾಥನ ತಂಗಿ ಸೀತೆಯು ಸೂಳೆಯ ದಂಧೆಯನ್ನು ಮಾಡುತ್ತಿದ್ದಾಳೆ ಎಂಬ ಸುಳ್ಳು ಸುದ್ದಿಯನ್ನು ಹಬ್ಬಿಸಿ ಪುರುಷೋತ್ತಮನ ನೆಮ್ಮದಿಯನ್ನು ಕೆಡಿಸಲು ಮುಂದಾಗುತ್ತಾನೆ. "ನಾನಾಗ ನೇರವಾಗಿ ಹುಡುಗಿಯ ಜೊತೆಗೇ ಮಾತನಾಡಿದ್ದೇನೆ. ತುಂಬಾ ಸಿಹಿಯಾಗಿ ಕೇಳಿಸಿದಳು ಹುಡುಗಿ ಅವಳೊಡನೆ ಸುಖ ಭೋಗಿಸಿದ ಗೆಳೆಯರೇ ಈ ಫೋನ್ ನಂಬರ್ ಕೊಟ್ಟಿದ್ದು. ಅವಳು ಹೆಸರನ್ನು ತಿಳಿಸಿದ್ದು ಸೀತಾ....." (ಯಶವಂತ ಚಿತ್ತಾಲ, ಪುರುಷೋತ್ತಮ, ೨೦೦೬, ಪುಟ ೨೯೮) ಎಂಬಂತಹ ಫೋನಿನ ಕರೆಗಳು ಸೀತೆಗೆ ಬಂದು ಆಕೆ ಕಂಗಾಲಾಗುತ್ತಾಳೆ. ಅಷ್ಟೇ ಅಲ್ಲದೆ ಪೋಲೀಸರು ಸಹ "ಈ ಮನೆಯೊಳಗೊಬ್ಬ ಸೂಳೆ ತನ್ನ ದಂಧೆ ಸುರು ಮಾಡಿದ್ದಾಳೆಂದು ನಮಗೆ ಈ ಕೇರಿಯವರಿಂದ ದೂರುಗಳು ಬಂದಿವೆ" (ಯಶವಂತ ಚಿತ್ತಾಲ, ಪುರುಷೋತ್ತಮ, ೨೦೦೬, ಪುಟ ೩೦೪) ಎಂದು ಸುಳ್ಳು ಆರೋಪ ಮಾಡುತ್ತಾರೆ. ತನ್ನ ಶೀಲದ ಬಗ್ಗೆ ಈ ರೀತಿಯ ಮಾತುಗಳನ್ನು ಕೇಳಿ ನೊಂದ ಸೀತೆ ಮಾನಸಿಕ ಕ್ಷೋಭೆಗೆ ಒಳಗಾಗಿ ೨೦ನೇ ಮಹಡಿಯಿಂದ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಕ್ರೂರಿಯಾದ ವೆಂಕಟದಾಸೂ ಹಣದಾಸೆಗೆ ಒಳಗಾಗಿ ಸಮಾಜದ ಜೊತೆಗೂಡಿ ಏನೂ ತಪ್ಪನ್ನು ಮಾಡದ ಸೀತೆಯ ದುರಂತ ಅಂತ್ಯಕ್ಕೆ ಕಾರಣನಾಗುತ್ತಾನೆ.

'ಮೂರು ದಾರಿಗಳು' ಕಾದಂಬರಿಯ ಹನೇಹಳ್ಳಿಯ 'ದೊಡ್ಡ ಮನೆ' ವಿಶ್ವನಾಥ ಶಾನುಭಾಗರ ಒಬ್ಬಳೇ ಮಗಳು ನಿರ್ಮಲೆ. ಈಕೆ ಕಾರವಾರದಲ್ಲಿರುವ ತನ್ನ ಸೋದರತ್ತೆಯಾದ ಚಂದ್ರಭಾಗಳ ಮನೆಯಲ್ಲಿದ್ದು ಕೊಂಡು ಇಂಗ್ಲಿಷ್ ಶಿಕ್ಷಣವನ್ನು ಕಲಿಯುತ್ತಿದ್ದಳು. ಆಗ ಅದೇ ಊರಿನಲ್ಲಿ ಸ್ಟುಡಿಯೋ ಇಟ್ಟುಕೊಂಡಿರುವ ರಂಗಪ್ಪನಿಗೂ ನಿರ್ಮಲೆಗೂ ಸಂಬಂಧ ಇದೆ ಎಂಬ ಗಾಳಿ ಸುದ್ದಿ ಹಬ್ಬಲು ಪ್ರಾರಂಭವಾಯಿತು. ಆಗ ವಿಶ್ವನಾಥ ಶಾನುಭಾಗರು ಈ ಪ್ರಕರಣದಿಂದ ತಮ್ಮ ಮರ್ಯಾದೆಯು ನಾಶವಾಗುತ್ತದೆ ಎಂದು ತಿಳಿದು ತರಾತುರಿಯಲ್ಲಿ ನಿರ್ಮಲೆಯ ಮದುವೆಯನ್ನು ವಾಸುದೇವನ ಜೊತೆ

ಮಾಡಲು ನಿರ್ಧರಿಸುತ್ತಾರೆ. ನಿರ್ಮಲೆ ಮತ್ತು ರಂಗಪ್ಪ ಪ್ರಕರಣದ ಸಮಸ್ಯೆಯ ಮೂಲವನ್ನು ತಿಳಿಯುವ ಕೆಲಸವನ್ನು ವಿಶ್ವನಾಥ ಶಾನುಭಾಗರು ಮಾಡುವುದೇ ಇಲ್ಲ. ಅವರಿಗೆ ತಮ್ಮ ಮಗಳ ಬದುಕಿಗಿಂತ ತಮ್ಮ ಮನೆತನದ ಗೌರವವೇ ಮುಖ್ಯವೆನಿಸಿ ನಿರ್ಮಲೆಯ ಮದುವೆ ಮಾಡಲು ನಿರ್ಧರಿಸುತ್ತಾರೆ.

ವಿಶ್ವನಾಥ ಶಾನುಭಾಗರು ತಮ್ಮ ಮಗಳು ನಿರ್ಮಲೆಯ ಮದುವೆಗಾಗಿ ಆರಿಸಿದ ವಾಸುದೇವನು ಸಹ ಹೆಣ್ಣಿಗಷ್ಟೇ ಶೀಲವನ್ನು ಆರೋಪಿಸುವ ಸಾಂಪ್ರದಾಯಿಕ ಸಮಾಜದ ಒಂದು ಭಾಗವೇನೋ ಎಂಬಂತೆ ವರ್ತಿಸುತ್ತಾನೆ. ಏಕೆಂದರೆ ಆತನು ಸಹ ನಿರ್ಮಲೆ ಮತ್ತು ರಂಗಪ್ಪರ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯುವ ಗೋಜಿಗೆ ಹೋಗುವುದಿಲ್ಲ. ನಿರ್ಮಲೆ ಅಬಲೆ, ತಾನು ಗಂಡಸು ಎಲ್ಲ ಭಾರವನ್ನು ತಾನು ಹೊರಬೇಕು. ಆಕೆಯನ್ನು ರಕ್ಷಿಸಬೇಕು ಎನ್ನುವಂತಹ ವಾಸುದೇವನ ಮಾತುಗಳು ನಿರ್ಮಲೆಯನ್ನು ಕಂಗೆಡಿಸುತ್ತವೆ.

"ಭಾಷೆ ಕಲಿತ ಮಾನವ ವ್ಯಕ್ತಿ ಬರಿಯ ಮಾತಿನ ದುರಪಯೋಗದಿಂದಲೇ ಇನ್ನೊಬ್ಬರ ಮನಸ್ಸನ್ನು ಎಷ್ಟೊಂದು ಕೆಡಿಸಬಲ್ಲದು? ವ್ಯಕ್ತಿ ವ್ಯಕ್ತಿಗೆ ಎಷ್ಟೊಂದು ಅನ್ಯಾಯ ಮಾಡಬಲ್ಲದು? ಎನ್ನುವುದೇ ಪಾತ್ರಗಳನ್ನ ಹುಡುಕಲು ದೂರಹೋಗಬೇಕಿಲ್ಲ. ಇಲ್ಲಿಯ ನಮ್ಮ ಸುತ್ತಲಿನ ಜನರ ಮೂಲ ಸ್ವಭಾವವನ್ನು ಚಿತ್ರಿಸಿದರೇ ಸಾಕು. ಅಬ್ಬ ಅವರ ನಾಲಗೆಯೇ" (ಯಶವಂತ ಚಿತ್ತಾಲ, ಮೂರು ದಾರಿಗಳು, ೨೦೦೦, ಪುಟ ೧೨೬) ಎಂಬ ಮಾತಿನ ಮೂಲಕ ಯಶವಂತ ಚಿತ್ತಾಲರು ಸಮಾಜ ತಿಳಿಯದೆ ಮಾತನಾಡುವ ಮಾತುಗಳಿಂದ ಎಂತಹ ಅನರ್ಥಗಳಾಗುತ್ತವೆ ಎಂದು ದಾಖಲಿಸುವ ಪ್ರಯತ್ನ ಮಾಡಿದ್ದಾರೆ. 'ಆಬೋಲೀನ' ಕತೆಯ ಆಬೋಲೀನಳ ಶೀಲದ ಬಗ್ಗೆ ಸಮಾಜವು ಮಾತಾಡಿಕೊಂಡಂತೆ 'ಮೂರು ದಾರಿಗಳು' ಕಾದಂಬರಿಯ ನಿರ್ಮಲೆಯ ಬಗ್ಗೆಯೂ ಇಲ್ಲ ಸಲ್ಲದ ಮಾತುಗಳನ್ನು ಆಡುತ್ತದೆ. ತನ್ನ ಮಗಳು ತಪ್ಪು ಮಾಡಿದ್ದಾಳೆ ಎಂದು ತಿಳಿದ ಶಾನುಭಾಗರು ಅದರಿಂದ ಸಮಾಜದಲ್ಲಿ ತನ್ನ ಮನೆತನದ ಮರ್ಯಾದೆ ಹೋಗುತ್ತದೆ ಎಂದು ತಿಳಿದು ತರಾತುರಿಯಲ್ಲಿ ಆಕೆಯ ಮದುವೆ ಮಾಡುವುದಕ್ಕೆ ಮುಂದಾಗುತ್ತಾರೆ. ನಿರ್ಮಲೆಯನ್ನು ಮದುವೆಯಾಗಲು ಬಂದಿರುವ ವಾಸುದೇವನು ತನ್ನ ಅತಿಯಾದ ಆದರ್ಶದಿಂದ ನಿರ್ಮಲೆಯ ಮನಸ್ಸನ್ನು ಗೆಲ್ಲಲು ಸೋಲುತ್ತಾನೆ. ಜೊತೆಗೆ ಸಮಾಜ ಕೂಡ ನಿರ್ಮಲೆ ಶೀಲಗೆಟ್ಟವಳೆಂಬಂತೆ ಮಾತಾಡುತ್ತದೆ. ಈ ಮೂರು ಸಂಗತಿಗಳಿಂದ ನಿರ್ಮಲೆ ಮಾನಸಿಕವಾಗಿ ಕುಗ್ಗಿ ಹೋಗುತ್ತಾಳೆ. ಸಮಸ್ಯೆಯ ಸುಳಿಯಲ್ಲಿ ಸಿಲುಕಿಕೊಂಡ ನಿರ್ಮಲೆ ಅದರಿಂದ

ಪಾರಾಗಲು ಪ್ರಯತ್ನಿಸುತ್ತಾಳೆ. ಅವಳ ಈ ಪ್ರಯತ್ನ ಪ್ರತಿಭಟನೆಯ ಸ್ವರೂಪ ಪಡೆದುಕೊಳ್ಳುತ್ತದೆ. ತಂದೆ ಶಾನುಭಾಗ, ವಾಸುದೇವ, ಸಮಾಜದ ವಿರುದ್ಧ ಪ್ರತೀಕಾರವನ್ನು ತೀರಿಸಿಕೊಳ್ಳಲೆಂದು ತನ್ನ ಜೊತೆ ಸಂಬಂಧ ಕಲ್ಪಿಸಿದ ರಂಗಪ್ಪನೊಡನೆ ಓಡಿ ಹೋಗುವ ನಿರ್ಧಾರ ಮಾಡುತ್ತಾಳೆ. ಆದರೆ ಅದೂ ಸಾಧ್ಯವಾಗದೆ ಇದ್ದಾಗ ಪ್ರತೀಕಾರ ತೀರಿಸಿಕೊಳ್ಳಲೆಂಬಂತೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಶಾನುಭಾಗ, ವಾಸುದೇವ, ರಂಗಪ್ಪರ ವೈಯಕ್ತಿಕ ಕೇಡಿನ ಜೊತೆಗೆ ಸಮಾಜದ ಕೇಡು ಸೇರಿ ನಿರ್ಮಲೆಯ ದುರಂತ ಅಂತ್ಯಕ್ಕೆ ಕಾರಣವಾಗುತ್ತದೆ.

'ಕತೆಯಾದಳು ಹುಡುಗಿ'ಯ ತಂದೆ ರಕ್ತದ ಕ್ಯಾನ್ಸರ್‌ನಿಂದ ಸತ್ತು ಹೋದ ತನ್ನ ಮಗಳನ್ನು ಕತೆಯಾಗಿಸಲು ಪ್ರಯತ್ನಿಸುತ್ತಾನೆ. ಆದರೆ ನೇರವಾಗಿ ಸತ್ತ ಮಗಳ ಕಥೆಯನ್ನು ಬರೆಯುವುದಕ್ಕೆ ಅಸಾಧ್ಯವಾಗಿ ಒಂದು ಕಥೆಯ ಮೂಲಕ ಮಗಳ ಆಸೆಯಂತೆ ಆಕೆಯ ಬಗ್ಗೆ ಬರೆಯಲಾರಂಭಿಸುತ್ತಾನೆ. ಆ ಪ್ರಯತ್ನ ಫಲವಾಗಿ ಎಂದೋ ನಡೆದ ಚಸ್ನಾಲ ಗಣಿಯ ದುರಂತ ಘಟನೆ ಕತೆಯಾಗಿ ಮೈದಾಳುತ್ತದೆ. ಆ ಕತೆಯಲ್ಲಿ ಬರುವ ಪುಟ್ಟ ಹುಡುಗಿಯು ಅತ್ಯಾಚಾರಕ್ಕೊಳಗಾಗಿ ಕೊಲೆಯಾಗುತ್ತಾಳೆ. ಕತೆಗಾರನ ರಕ್ತದ ಕ್ಯಾನ್ಸರ್‌ನಿಂದ ಸತ್ತ ಜಾನಕಿಯು ಚಸ್ನಾಲದ ಗಣಿ ಕಾರ್ಮಿಕನ ಮಗಳು ಜಾನಕಿಯಾಗಿ ಕತೆಯಲ್ಲಿ ಸ್ಥಾನ ಪಡೆಯುತ್ತಾಳೆ. ಮಗಳನ್ನು ಕತೆಯಾಗಿಸ ಹೊರಟ ಕತೆಗಾರ ಅದ್ಭುತವಾಗಿ ಕಥಾ ರಚನೆಯನ್ನು ಮಾಡುತ್ತಾನೆ. ಈ ಕತೆ ಎಲ್ಲರಿಂದ ಮೆಚ್ಚುಗೆ ಪಡೆಯುತ್ತದೆ. ಪತ್ರಿಕೆಯಲ್ಲಿ ಕತೆ ಪ್ರಕಟವಾಗಿದ್ದನ್ನು ಓದಿ ಕತೆಗಾರನ ಮನೆಗೆ ಆತನನ್ನು ಅಭಿನಂದಿಸಲು ಬರುತ್ತಾರೆ. ಆದರೆ ಅವರಿಗೆ ಕತೆಗಾರನ ಮಗಳು ಜಾನಕಿ ಮನೆಯಲ್ಲಿ ಇರಿದುದ್ದರ ಬಗ್ಗೆ ಗಮನವೇ ಹರಿಯುವುದಿಲ್ಲ. ಆ ಬಗ್ಗೆ ಕತೆಗಾರನನ್ನು ಕೇಳುವುದೂ ಇಲ್ಲ. ಬದಲಿಗೆ ಕತೆಯಲ್ಲಿ ನಡೆಯುವ ಎಳೆಕೂಸಿನ ಮೇಲಿನ ಅತ್ಯಾಚಾರವನ್ನು ವಿವರಿಸುವ ರೀತಿಯನ್ನು ಬಹಳವಾಗಿ ಮೆಚ್ಚಿಕೊಳ್ಳುತ್ತಾರೆ. ಸ್ನೇಹಿತರು ಹೊರಟು ಹೋದ ಮೇಲೆ ಕತೆಗಾರನ ಹೆಂಡತಿ "ನಿಮ್ಮ ಗೆಳೆಯರಲ್ಲಿ ಒಬ್ಬನಿಗೂ ಮಗೂನ ನೆನಪೇ ಆಗಬಾರದ ಹಾಗೆ ಅದೆಂಥ ಕಥೆ ಬರೆದಿರೋ, ಅವಳ ಬಗ್ಗೆ ಬರೆಯುತ್ತೇನೆ ಎಂದವರು? ಅಥವಾ ನಿಮ್ಮ ಗೆಳೆಯರೇ ಅಂಥವರೋ? ಬಿಯರ್ ಕುಡಿದು ಪಕೋಡಾ ತಿಂದು ಸಂತೋಷಿಸುವಂತೆ ಅದು ಹೇಗೆ ಹೊಟ್ಟೆಯ ಮಗುವಿನ ಸಾವನ್ನು ಚಿತ್ರಿಸಿದರೋ.. ಬೆಂಕಿ ಬಿತ್ತು ನಿಮ್ಮ ಸಾಹಿತ್ಯಕ್ಕೆ... ಸುಟ್ಟು ಹಾಕಿ.. ಇನ್ನೆಂದಾದರೂ ಕತೆ ಬರೆದಿರಾದರೆ ಮಗುವಿನ ಆಣೆಯಿದೆ ನಿಮಗೆ..." (ಯಶವಂತ ಚಿತ್ತಾಲ, ಚಿತ್ತಾಲರ ಕತೆಗಳು, ೧೯೮೩, ಪುಟ ೩೨೧) ಎಂದು ಸಮಾಜದ ಕೇಡನ್ನು

ಗುರುತಿಸುವ ಕೆಲಸ ಮಾಡುತ್ತಾಳೆ. ಮನೆಯಲ್ಲಿ ಇರದ ಜಾನಕಿಯ ಬಗ್ಗೆ ವಿಚಾರಿಸದ ಸ್ನೇಹಿತರ ಮಾತುಗಳು ಕ್ರೌರ್ಯವನ್ನು ತಣ್ಣಗೆ ಸೂಚಿಸುತ್ತದೆ.

ಯಶವಂತ ಚಿತ್ತಾಲರೇ ಹೇಳಿಕೊಳ್ಳುವಂತೆ 'ಬೊಮ್ಮಿಯ ಹುಲ್ಲು ಹೊರೆ' ಎಂಬ ಕತೆಯು ಶೋಷಣೆಯ ಕತೆಯಾಗಿದೆ. ವ್ಯಕ್ತಿಯೊಬ್ಬ ಇನ್ನೊಬ್ಬನನ್ನು ಆತನಿಗೆ ಗೊತ್ತಿಲ್ಲದಂತೆ ಹೇಗೆ ಶೋಷಿಸಬಹುದೆಂಬುದನ್ನು ಈ ಕತೆ ಹೇಳುತ್ತದೆ. ಇಲ್ಲಿ ಶೋಷಣೆಯನ್ನು ಒಬ್ಬ ಮಹಿಳೆಯು ಮಾಡುತ್ತಾಳೆ ಎಂಬುದನ್ನು ನಾವು ಗಮನಿಸಬೇಕಾಗಿದೆ. ಪಾರ್ವತಮ್ಮ ಎಂಬ ಮಹಿಳೆ ಶೋಷಣೆ ಮಾಡುವ ಕೆಲಸವನ್ನು ಹೊತ್ತು ಕೊಂಡಿದ್ದಾಳೆ. ಈಕೆ ಪಿತೃ ಸಮಾಜದ ಮೌಲ್ಯಗಳನ್ನು ಒಪ್ಪಿ ಬಾಳುತ್ತಿದ್ದಾಳೆ. ಆದ್ದರಿಂದಲೇ ಆಕೆ ಬೊಮ್ಮಿಯಿಂತಹ ಶ್ರಮಿಕ ವರ್ಗದವಳನ್ನು ಯಾವುದೇ ಅಳುಕಿಲ್ಲದೆ ಶೋಷಿಸುತ್ತಾಳೆ. ತನ್ನ ಮೇಲಾಗುತ್ತಿರುವ ಶೋಷಣೆಯ ಬಗ್ಗೆ ಅರಿವು ಇಲ್ಲದ ಬೊಮ್ಮಿಯು ಕೆಲಸದಲ್ಲಿ ಪ್ರಾಮಾಣಿಕತನವನ್ನು ತೋರಿಸುತ್ತಾಳೆ. ಬೊಮ್ಮಿಯ ಕೈಯಿಂದ ಅಕ್ಕಿಯನ್ನು ಬೀಸಿಸಿಕೊಂಡ ಪಾರ್ವತಮ್ಮ ಆಕೆಗೆ ಎರಡಾಣೆ ಮತ್ತು ಅನ್ನವನ್ನು ನೀಡಿ ತನ್ನ ದೊಡ್ಡಸ್ತಿಕೆಯನ್ನು ಮೆರೆಯುತ್ತಾಳೆ. ನಾಯಿ ಮುಟ್ಟಿದ ಅನ್ನವನ್ನು ದನಕ್ಕೂ ಹಾಕಲಿಕ್ಕೆ ಮನಸ್ಸು ಬಾರದೆ ಒಕ್ಕಲು ಜಾತಿಯವಳಾದ ಬೊಮ್ಮಿಗೆ ನೀಡುತ್ತಾಳೆ. ಇದರ ಪರವೇ ಇಲ್ಲದೆ ಬೊಮ್ಮಿ ಆಕೆಯಿಂದ ಅನ್ನವನ್ನು ಪಡೆಯುತ್ತಾಳೆ. ಪಾರ್ವತಮ್ಮನ ಈ ಶೋಷಣೆಯಲ್ಲಿ ಕೇಡಿನ ಪ್ರಜ್ಞೆ ಅಡಗಿರುವುದನ್ನು ನಾವು ನೋಡಬಹುದಾಗಿದೆ. ಪಾರ್ವತಮ್ಮನ ಈ ಕೇಡಿಗೆ ಬೊಮ್ಮಿ ಬಲಿಯಾಗದೆ ಆಕೆಯ ಅರಿವು ಬಲಿಯಾಗಿರುವುದನ್ನು ಚಿತ್ತಾಲರು ಈ ಕತೆಯ ಮೂಲಕ ಚಿತ್ರಿಸಿದ್ದಾರೆ.

"ಸಮಾಜ ಈ ಕಾದಂಬರಿಯಲ್ಲಿ ಖಳನಾಯಕನ ಸ್ಥಾನದಲ್ಲಿದೆ" (ರಾಜೇಂದ್ರ ಚೆನ್ನಿ (ಸಂ), ಯಶವಂತ ಚಿತ್ತಾಲರ ಸಾಹಿತ್ಯ ಲೋಕ, ೨೦೧೧, ಪುಟ ೨೩೫) ಎನ್ನುವ ಜಿ.ಎಸ್.ಅಮೂರರ ಮಾತು ಕೇವಲ ಚಿತ್ತಾಲರ 'ಮೂರು ದಾರಿಗಳು' ಎಂಬ ಕಾದಂಬರಿಗೆ ಮಾತ್ರ ಸೀಮಿತವಾಗಿಲ್ಲ. ಚಿತ್ತಾಲರ ಪೂರ್ಣ ಕಥನ ಸಾಹಿತ್ಯಕ್ಕೆ ಅಮೂರರ ಮಾತು ಅನ್ವಯವಾಗುತ್ತದೆ. ತಾವು ಮಾಡದ ತಪ್ಪಿಗಾಗಿ ಮನವೇಲ, ರಂಗಪ್ಪ, ವೆಂಕಟದಾಸೂವಿನಂತಹವರಿಂದಲೋ ಆಬೋಲೀನ, ನಿರ್ಮಲೆ, ಸೀತೆಯಂತಹವರು ದುರಂತ ಅಂತ್ಯವನ್ನು ಕಾಣುತ್ತಾರೆ. ಇಲ್ಲಿ ವ್ಯಕ್ತಿಯ ಕೇಡಿನ ಜೊತೆಗೆ ಸಮಾಜದ ಕೇಡಿನ ಪ್ರಜ್ಞೆಯು ಸೇರಿಕೊಂಡು ಮಹಿಳೆಯು ದುರಂತದ ಅಂಚಿಗೆ ಬಂದು ತಲುಪುವಂತಾಗುತ್ತದೆ. ಇಲ್ಲಿನ ಮಹಿಳೆಯರು ನಿರಪರಾಧಿಗಳಾಗಿದ್ದರೂ ವ್ಯಕ್ತಿ ಮತ್ತು ಸಮಾಜದ ಕೇಡಿನ ಪ್ರಜ್ಞೆ ಫಲವಾಗಿ

ಅಪರಾಧಿಗಳಾಗಿ ದುರಂತ ಅಂತ್ಯವಾಗುತ್ತಾರೆ. ಮಹಿಳೆಯರ ಇಂತಹ ದುರಂತ ಅಂತ್ಯ ನಮ್ಮನ್ನು ಯೋಚಿಸುವ ಹಾಗೆ ಮಾಡುತ್ತದೆ. ವ್ಯಕ್ತಿ ಮತ್ತು ಸಮಾಜದ ಕೇಡಿನಿಂದ ಮಹಿಳೆಯ ಮೇಲಾಗುತ್ತಿರುವ ಶೋಷಣೆಯನ್ನು ಯಶವಂತ ಚಿತ್ತಾಲರ ಕಥನ ಸಾಹಿತ್ಯವು ಸಮರ್ಥವಾಗಿ ಚಿತ್ರಿಸುತ್ತದೆ.

ಕ್ರೌರ್ಯ, ಸಾವು ಮತ್ತು ಲೈಂಗಿಕತೆಯ ಪರಿಕಲ್ಪನೆಗಳನ್ನು ಪದೇ ಪದೇ ಬಳಸುವ ಮೂಲಕ ಚಿತ್ತಾಲರು ಮನುಷ್ಯ ಸಂಬಂಧಗಳ ಸ್ವರೂಪವನ್ನು ತಿಳಿಸುವ ಪ್ರಯತ್ನ ಮಾಡುತ್ತಾರೆ. ಪುರುಷ ಪ್ರಧಾನ ಸಮಾಜದಲ್ಲಿ ಅನೇಕ ನಿರ್ಬಂಧಗಳ ಮೂಲಕ ಶೋಷಣೆಗೆ ಒಳಗಾಗಿರುವ ಮಹಿಳೆ ಚಿತ್ತಾಲರ ಸಾಹಿತ್ಯ ವಿಶಿಷ್ಟವಾಗಿ ಬಳಕೆಯಾಗಿ ಓದುಗರ ಸಹಾನುಭೂತಿಯನ್ನು ಪಡೆಯುತ್ತಾಳೆ. ಪಿತೃ ಪ್ರಧಾನ ಸಮಾಜದ ಅಸಹನೀಯ ರೀತಿ–ನೀತಿಗಳನ್ನು ಒಪ್ಪಿಕೊಳ್ಳುವ ಪುರುಷರು ಹೇಗೆ ಮಹಿಳೆಯರ ಬದುಕನ್ನು ದುರಂತಕ್ಕೀಡು ಮಾಡುತ್ತಾರೆ ಎಂಬುದನ್ನು ಚಿತ್ತಾಲರು ತಮ್ಮ ಕಥನ ಸಾಹಿತ್ಯದಲ್ಲಿ ಚರ್ಚೆಗೆ ತೆಗೆದುಕೊಂಡಿದ್ದಾರೆ. ಯಾವುದು ಸರಿ, ಯಾವುದು ತಪ್ಪು ಎಂಬ ಚರ್ಚೆಯನ್ನು ಮಾಡದೆ ಆಗಿರುವ ದುರಂತಕ್ಕೆ ಕಾರಣ ಯಾರು? ಎಂಬ ಯೋಚನೆಯನ್ನು ಮಾಡುವಂತೆ ಓದುಗರನ್ನು ಚಿತ್ತಾಲರ ಕಥನ ಸಾಹಿತ್ಯವು ಪ್ರೇರೇಪಿಸುತ್ತದೆ. ಸ್ತ್ರೀ ವಿರೋಧಿ ಧೋರಣೆಗಳಲ್ಲಿ ನಲುಗಿ ಹೋಗುವ ಮಹಿಳೆಯನ್ನು ಸಮರ್ಥವಾಗಿ ಬಿಂಬಿಸುವ ಕೆಲಸವನ್ನು ಯಶವಂತ ಚಿತ್ತಾಲರು ತಮ್ಮ ಕಥನ ಸಾಹಿತ್ಯದಲ್ಲಿ ಮಾಡಿದ್ದಾರೆ.

# ಅಧ್ಯಾಯ – ೬

# ಯು.ಆರ್.ಅನಂತಮೂರ್ತಿ ಅವರ ಕಥನ ಸಾಹಿತ್ಯದಲ್ಲಿ ಮಹಿಳೆ

ನವ್ಯ ಕಾಲಘಟ್ಟದ ಪ್ರಮುಖ ಸಾಹಿತಿಗಳಲ್ಲಿ ಯು.ಆರ್.ಅನಂತಮೂರ್ತಿಯವರು ಕೂಡ ಒಬ್ಬರಾಗಿದ್ದಾರೆ. ನವ್ಯ ಕಾವ್ಯಕ್ಕೆ ಗೋಪಾಲಕೃಷ್ಣ ಅಡಿಗರು ಹೇಗೆ ಭದ್ರ ಬುನಾದಿಯನ್ನು ಹಾಕಿಕೊಟ್ಟರೊ ಹಾಗೆ ಅನಂತಮೂರ್ತಿಯವರು ನವ್ಯ ಕಥನ ಸಾಹಿತ್ಯಕ್ಕೆ ಭದ್ರ ಬುನಾದಿಯನ್ನು ಹಾಕಿ ಕೊಟ್ಟಿದ್ದಾರೆ. ಸಂಪ್ರದಾಯ >< ಆಧುನಿಕತೆ, ಬ್ರಾಹ್ಮಣ >< ಶೂದ್ರ, ಪ್ರಕೃತಿ >< ಕಾಮಗಳಂತಹ ವಿರೋಧ ಅಂಶಗಳನ್ನು ತಮ್ಮ ಸಾಹಿತ್ಯದಲ್ಲಿ ತರುವ ಪ್ರಯತ್ನವನ್ನು ಇವರು ಮಾಡುತ್ತಾರೆ. ಈ ಮೂಲಕ ಇವರ ಕಥಾ ನಾಯಕ ಬದುಕಿಗೆ ಮುಖಾಮುಖಿಯಾಗಿ ತನ್ನ ಅಸ್ತಿತ್ವವನ್ನು ಕಂಡು ಕೊಳ್ಳುವ ಪ್ರಯತ್ನ ಮಾಡುತ್ತಾನೆ. "ನವ್ಯ ಸಾಹಿತಿಗೆ ಅನುಭವದ ಪ್ರಾಮಾಣಿಕತೆ ಮುಖ್ಯ-ವಸ್ತುವಿಗಾಗಿ ಆತ ಸಾಮಾಜಿಕ ಸಮಸ್ಯೆಗಳಿಂದ ತನ್ನ ಅನುಭವವನ್ನು ಆಶ್ರಯಿಸುತ್ತಾನೆ. ಆತ ಬದುಕನ್ನು ಒಳಗಿನಿಂದ ನೋಡುತ್ತಾನೆ. ಆದ್ದರಿಂದ ಆತ ಅಂತರ್ಮುಖಿ, ಬುದ್ಧಿಜೀವಿ, ದುರ್ಬಲ, ಸೂಕ್ಷ್ಮ ಸಂವೇದನಶೀಲನಾಗಿ ಚಿತ್ರಿತನಾಗುತ್ತಾನೆ. ಈ ಮಾತುಗಳು ಅನಂತ ಮೂರ್ತಿಯವರ ಕಥೆಗಳ ಸಂದರ್ಭದಲ್ಲಿ ನೂರಕ್ಕೆ ನೂರರಷ್ಟು ನಿಜವಾಗುತ್ತವೆ. ಅವರ ಕಥೆಗಳ ನಾಯಕ ಮೇಲೆ ಹೇಳಿದ ಲಕ್ಷಣಗಳನ್ನೆಲ್ಲಾ ಒಳಗೊಂಡವನು ಅವರ ವೈಯುಕ್ತಿಕ ನಂಬಿಕೆಗಳಿಗೂ ಪರಿಸರ ಒತ್ತಾಯದಿಂದ ಹೇರುವ ಸಾಂಪ್ರದಾಯಿಕ ಬದುಕಿಗೂ ಇರುವ ಕಂದರವೇ ಕಥೆಗಳ ಮುಖ್ಯವಸ್ತು" (ಗಿರಡ್ಡಿ ಗೋವಿಂದರಾಜ, ಕಾದಂಬರಿ ವಸ್ತು ಮತ್ತು ತಂತ್ರ, ೧೯೮೭, ಪುಟ ೧೮೩) ಎಂದು ಗಿರಡ್ಡಿ ಗೋವಿಂದರಾಜರವರು ಅನಂತಮೂರ್ತಿಯವರ ಕಥನ ಸಾಹಿತ್ಯದ ಒಳಗಣ್ಣನ್ನು ತೆರೆದಿಟ್ಟಿದ್ದಾರೆ. ಇಂತಹ ಅಂತರ್ಮುಖಿ, ಬುದ್ಧಿಜೀವಿ, ದುರ್ಬಲ ಸೂಕ್ಷ್ಮಸಂವೇದನಶೀಲನಾದ ನಾಯಕನು ತನ್ನ ಅಸ್ತಿತ್ವಕ್ಕಾಗಿ ಹಾತೊರೆಯುತ್ತಾನೆ. ಈ ಹಂತದಲ್ಲಿ ಮಹಿಳೆ ನಾಯಕನ ಜೀವನದಲ್ಲಿ ಪ್ರವೇಶಗೊಂಡು ನಾಯಕನ ಪಾಲಿಗೆ ಜೀವ ಸೆರೆಯಾಗುತ್ತಾಳೆ. ಮೊದಲ ಪೀಳಿಗೆಯ ವಿದ್ಯಾವಂತ ಮಹಿಳೆ, ಸಂಪ್ರದಾಯಸ್ಥ ಅಗ್ರಹಾರದ ಮಹಿಳೆ, ಕೆಳ ಜಾತಿಯ ಮಹಿಳೆ ಈ ಮೊದಲಾದವರೆಲ್ಲಾ ನಾಯಕನು ಪರಿಪೂರ್ಣತೆ ಯೆಡೆಗೆ ಸಾಗಲು ಶ್ರಮಿಸುತ್ತಾರೆ. ಒಂದಲ್ಲಾ ಒಂದು ರೀತಿಯಲ್ಲಿ ಈ ವಿಭಿನ್ನ ಸ್ತರದ ಮಹಿಳೆಯರು ನಾಯಕನ ಸಂವೇದನಶೀಲತೆಗೆ ಸ್ಪಂದಿಸುತ್ತಾರೆ.

ಲ್ಯಾಂಗರ್ ಎನ್ನುವ ಪ್ರಸಿದ್ಧ ಮಾನವ ಶಾಸ್ತ್ರಜ್ಞೆ ಭಾರತದಲ್ಲಿ ನಡೆಯುತ್ತಿದ್ದ ಒಂದು ಆಚರಣೆಯನ್ನು ಕಥೆಯ ರೂಪದಲ್ಲಿ ಉಲ್ಲೇಖಿಸಿದ್ದಾಳೆ. ಹೆಣ್ಣಿನ ಜೀವನದ ಎರಡು ಘಟ್ಟಗಳನ್ನು ಆಕೆಯ ಧ್ವನಿಯ ಮೂಲಕ ಸಾಂಕೇತಿಕವಾಗಿ ಗುರುತಿಸುವ ಪ್ರಯತ್ನವನ್ನು ಆಕೆ ಮಾಡುತ್ತಾಳೆ. ಹೆಣ್ಣನ್ನು ಬಾಲ್ಯದಲ್ಲಿ ಮತ್ತು ಮದುವೆಯಾಗಿ ಹೆಂಡತಿಯಾದಾಗ ಹೇಗೆ ಇರುತ್ತಾಳೆ ಅನ್ನೋದನ್ನು ಆಕೆ ಕಥೆಯಲ್ಲಿ ಧ್ವನಿ ಮೂಲಕ ವ್ಯಕ್ತಪಡಿಸುತ್ತಾಳೆ. ಹೆಣ್ಣು ತನ್ನ ಜೀವನದಲ್ಲಿ ಹೆಂಡತಿ, ತಾಯಿ, ಸೊಸೆಯಾಗುವ ಘಟ್ಟದವರೆಗೂ ಮಾರ್ದವವಾದ ಧ್ವನಿಯನ್ನು ಹೊಂದಿರುತ್ತಾಳೆ. ಆದರೆ ಅತ್ತೆಯಾದ ಕೂಡಲೆ ಮಾರ್ದವತೆಯಿಂದ ಕೂಡಿದ ಆ ಧ್ವನಿ ಗಂಡಸಿನ ಧ್ವನಿಯಾಗಿ ಮಾರ್ಪಾಡಾಗುತ್ತದೆ. ಲ್ಯಾಂಗರ್‌ಳ ಈ ಕತೆಯನ್ನು ಇಲ್ಲಿ ಉಲ್ಲೇಖಿಸುವುದರ ಮೂಲಕ ಹೆಣ್ಣಾದ ಅತ್ತೆಯು ಇನ್ನೊಬ್ಬ ಹೆಣ್ಣಾದ ಸೊಸೆಯನ್ನು ಶೋಷಿಸುವುದನ್ನು ಇಲ್ಲಿ ವಿವರಿಸಲಾಗಿದೆ. ಅನೇಕ ಬಾರಿ ಹೆಣ್ಣು ತನ್ನ ಮೇಲೆ ಆಗುತ್ತಿರುವ ಶೋಷಣೆಯನ್ನು ಅನುಭವಿಸುತ್ತಲೇ ಮುಂದೆ ತಾನು ಗಂಡಿನಂತೆ ಹೆಣ್ಣಿನ ಮೇಲೆ ಪ್ರತೀಕಾರವನ್ನು ತೋರಿಸಿಕೊಳ್ಳುವುದಕ್ಕೆ ಪ್ರಾರಂಭಿಸುತ್ತಾಳೆ. ಇದರಿಂದ ಆಕೆಗೆ ವಿಚಿತ್ರವಾದ ಸಂತೋಷ ಲಭಿಸುತ್ತದೆ. ಹೆಣ್ಣಿನ ಇಂತಹ ಪ್ರತೀಕಾರಕ್ಕೆ ವ್ಯವಸ್ಥೆಯ ಶೋಷಣೆಯೇ ಮೂಲ ಕಾರಣ ಎಂದು ಪ್ರತ್ಯೇಕವಾಗಿ ಇಲ್ಲಿ ಹೇಳಬೇಕಿಲ್ಲ. ಇಂತಹ ಮನಸ್ಥಿತಿ ಹೊಂದಿರುವ ಮಹಿಳೆಯನ್ನು 'ಪ್ರಸ್ತ' ಕತೆಯಲ್ಲಿ ಕಾಣಬಹುದು.

'ಪ್ರಸ್ತ' ಕತೆಯ ವೆಂಕಮ್ಮ ಹೆತ್ತ ಏಳು ಮಕ್ಕಳಲ್ಲಿ ಕೊನೆಗೆ ಉಳಿದಿದ್ದು ಎರಡೇ ಮಕ್ಕಳು. ತನ್ನ ಇಬ್ಬರು ಮಕ್ಕಳಿಗೂ ಮದುವೆ ಮಾಡಿದ್ದರೂ ವೆಂಕಮ್ಮನ ಮಗಳು ಸೀತಕ್ಕನ ಬದುಕು ಗಂಡನ ವ್ಯಭಿಚಾರದಿಂದ ಬರಡಾಗಿತ್ತು. ಮೊದಲಿನಿಂದಲೂ ಕಷ್ಟಗಳ ಪರಂಪರೆಯಲ್ಲಿಯೇ ಬದುಕು ನಡೆಸುತ್ತಿದ್ದ ವೆಂಕಮ್ಮ ತನ್ನ ಗಂಡ ಪ್ರವೀಣಾಚಾರ್ಯರಿಂದ ಯಾವುದೇ ಸುಖವನ್ನು ಪಡೆಯಲಾರದೆ ಅತೃಪ್ತ ಜೀವನ ನಡೆಸುತ್ತಿದ್ದರು. ಇದರ ಜೊತೆಗೆ ದಾಂಪತ್ಯ ಸುಖವನ್ನು ಅನುಭವಿಸದೆ ಬರಡಾದ ಜೀವನ ನಡೆಸುತ್ತಿದ್ದ ಮಗಳ ಬದುಕು ವೆಂಕಮ್ಮನ ಸಂಕಟವನ್ನು ಹೆಚ್ಚು ಮಾಡಿತ್ತು. "ನಾನು ಪಟ್ಟ ಕಷ್ಟ ದೇವರಿಗೆ ಗೊತ್ತು. ನನ್ನ ಅತ್ತೆಯೆಂದರೆ ನಾನು ಗಡಗಡ ನಡುಗುತ್ತಿದೆ. ನಿನ್ನ ಹಾಗೆ ವಾರೆ ಬೈತಲೆ ತೆಗೆದು ಗಂಡನ ಜೊತೆ ಸೂಳೆಯ ಹಾಗೆ ಸರಸ ಮಾಡುವ ಕಾಲವಲ್ಲ ಅದು. ನನ್ನ ಪಾಡಿಗೆ ನಾನು ದುಡಿದು ಕೊಂಡಿದ್ದರೂ ಕೂತರೆ ತಪ್ಪು, ನಿಂತರೆ ತಪ್ಪು, ಅವರೋ ವರ್ಷವಿಡೀ ಊರು ಅಲೆಯುವುದು ಅವರಿಗೊಬ್ಬಳು ರಂಭೆ ಬೇರೆ ಏಳು ಮಕ್ಕಳನ್ನು ನನ್ನದಲ್ಲಾಂತ ಹೊಂಡಕ್ಕೆ ಹಾಕಿದೆ. ಉಳಿದಿಬ್ಬರು ಮಕ್ಕಳಲ್ಲಿ ಸೀತಕ್ಕನ ಪಾಡು ಹೀಗಾಯ್ತು" (ಅನಂತಮೂರ್ತಿ.ಯು.ಆರ್, ಐದು

ದಶಕದ ಕಥೆಗಳು, ೨೦೦೭, ಪುಟ ೧೬೩) ಎಂದು ವೆಂಕಮ್ಮ ಬದುಕಿನ ತಾನು ಅನುಭವಿಸಿದ ಕಷ್ಟ ಪರಂಪರೆಯನ್ನು ಬಿಚ್ಚಿಡುತ್ತಾಳೆ. ಮಾನವ ಶಾಸ್ತ್ರಜ್ಞೆ ಲ್ಯಾಂಗರ್ ಹೇಳುವ ಕಥೆಯಲ್ಲಿನ ಹೆಣ್ಣಿನ ಧ್ವನಿ ಅತ್ತೆಯಾದ ಕೂಡಲೇ ಗಂಡಸಿನ ಧ್ವನಿಯಾಗಿ ಮಾರ್ಪಡಾಗುವ ರೀತಿಯಲ್ಲಿಯೇ ವೆಂಕಮ್ಮ ತಾನು ಸೊಸೆಯಾಗಿದ್ದಾಗ ಪಟ್ಟ ಕಷ್ಟಗಳ ನೆಪ ಇಟ್ಟು ಕೊಂಡು ಅತ್ತೆಯಾದ ಮೇಲೆ ತನ್ನ ಸೊಸೆ ನೇತ್ರಾವತಿ ಮೇಲೆ ಪ್ರತೀಕಾರ ತೀರಿಸಿಕೊಳ್ಳುತ್ತಾಳೆ.

"ನೇತ್ರಾವತಿಯ ಬಡಿವಾರವೊ–ನೋಡಿದರೆ ಹೇಸಿಗೆಯಾಗುತ್ತದೆ. ಒಳ್ಳೆ ಮುತ್ತೈದೆಯ ಹಾಗೆ ನಡುವೆ ಬೈತಲೆ ತೆಗೆಯುವುದು ಬಿಟ್ಟು, ವಾರೆ ಬೈತಲೆ ತೆಗೆಯುತ್ತಾಳೆ. ಕಣ್ಣಿಟ್ಟು ನೋಡಿದರೂ ಕಾಣಿಸಬಾರದು ಹಾಗೆ ಸಣ್ಣನೆಯ ಕುಂಕುಮವಿಡುತ್ತಾಳೆ. ಮಡಿ ಮೈಲಿಗೆಯಂತೂ ಸ್ವಲ್ಪವೂ ಇಲ್ಲ" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೧೬೨) ಎಂದು ವೆಂಕಮ್ಮ ಸಣ್ಣ ಪುಟ್ಟ ವಿಚಾರಗಳಿಗೂ ನೇತ್ರಾವತಿ ಜೊತೆ ಕಿರಿಕಿರಿಯನ್ನು ಮಾಡುತ್ತಾ ತನ್ನ ಅತ್ತೆಯ ದರ್ಪವನ್ನು ತೋರಿಸುತ್ತಾಳೆ. ತನ್ನ ಸೊಸೆ ತನ್ನ ಬಗ್ಗೆ ಮಗನ ಹತ್ತಿರ ಚಾಡಿ ಹೇಳಬಹುದೆಂದೇ ದಿನ ರಾತ್ರಿ ವೆಂಕಮ್ಮ ತನ್ನ ಮಗಳ ಜೊತೆಗೂಡಿ ಹೊಸ್ತಿಲ ಮೇಲೆ ಕೂತು ಮಗ ಸೊಸೆಯರ ಮಾತುಗಳನ್ನು ಕದ್ದು ಕೇಳಿಸಿಕೊಳ್ಳುತ್ತಾಳೆ. "ಮಗ ಒಂದು ಸೂಳೆಯಿಟ್ಟು ಕೊಂಡು ಹೆಂಡತಿಯನ್ನು ಹೊಡೆಯುತ್ತಿದ್ದರೆ" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೧೭೭) ವೆಂಕಮ್ಮ ತನ್ನ ಸೊಸೆಯನ್ನು ಗೋಳು ಹೊಯ್ದುಕೊಳ್ಳುತ್ತಿರಲಿಲ್ಲ. ಅಂದು ವೆಂಕಮ್ಮ ತನ್ನ ಜೀವನದಲ್ಲಿ ಪಡೆದ ಅತೃಪ್ತಿ, ಇಂದು ಅತ್ತೆಯಾಗಿ ಸೊಸೆಯನ್ನು ಪೀಡಿಸುವುದರಲ್ಲಿ ತೃಪ್ತಿಗೊಳ್ಳುತ್ತದೆ. ವೆಂಕಮ್ಮ ತಾನು ವ್ಯವಸ್ಥೆಯಿಂದ ಪಡೆದ ಕಹಿ ಅನುಭವಗಳನ್ನು ವ್ಯವಸ್ಥೆಯ ಒಂದು ಭಾಗವಾಗಿರುವ ಸೊಸೆಗೆ ಉಣಬಡಿಸುತ್ತಾಳೆ. ಸೊಸೆಯಾಗಿದ್ದಾಗ ಶೋಷಿತಳಾಗಿದ್ದ ವೆಂಕಮ್ಮ ಇಂದು ಶೋಷಕಿಯಾಗಿದ್ದಾಳೆ. ಒಂದು ಹೆಣ್ಣನ್ನು ಶೋಷಕಿಯನ್ನಾಗಿಸಿದ ವ್ಯವಸ್ಥೆಯ ಕರಾಳತೆಯ ಅನುಭವ ಇಲ್ಲಿ ಆಗುತ್ತದೆ.

ಸಮಾಜ ವ್ಯಕ್ತಿಯ ಮೇಲೆ ಹಲವಾರು ಕಟ್ಟುಪಾಡುಗಳನ್ನು ವಿಧಿಸುವ ಮೂಲಕ ವ್ಯಕ್ತಿ ಸಮಾಜದಲ್ಲಿ ಹೀಗೆಯೇ ನಡೆದುಕೊಳ್ಳಬೇಕೆಂದನ್ನು ಅಪೇಕ್ಷಿಸುತ್ತದೆ. ಈ ಅಪೇಕ್ಷೆಗೆ ತಕ್ಕಂತೆ ಬಹುತೇಕ ಎಲ್ಲ ಸಂದರ್ಭಗಳಲ್ಲಿಯೂ ಹೆಣ್ಣು ಮತ್ತು ಗಂಡು ಇಬ್ಬರು ಒಪ್ಪಿ ಬಾಳುತ್ತಾರೆ. ಸಮಾಜದ ಕಟ್ಟುಪಾಡುಗಳು ಜೀವ ವಿರೋಧಿ ಧೋರಣೆಗಳನ್ನು ಹೊಂದಿದ್ದರೂ ಅದನ್ನು ಇವರು ವಿರೋಧಿಸುವುದಿಲ್ಲ. ಸಮಾಜದ ಸ್ಥಾಪಿತ ಮೌಲ್ಯಗಳ

ಜೊತೆಯಲ್ಲಿಯೇ ತಮ್ಮ ಬದುಕನ್ನು ನಡೆಸುತ್ತಾರೆ. ಗಂಡಿನ ಅನೈತಿಕತೆಯನ್ನು ಸುಲಭವಾಗಿ ಒಪ್ಪಿಕೊಳ್ಳುವ ಇವರು ವಿಧವೆಯೊಬ್ಬಳ ಲೈಂಗಿಕತೆಯನ್ನು ಸಾಂಪ್ರದಾಯಿಕ ಸಮಾಜದಂತೆ ವಿರೋಧಿಸುತ್ತಾರೆ. ಇಂತಹ ಸಂದರ್ಭಗಳಲ್ಲಿ 'ಹೆಣ್ಣಿಗೆ ಹೆಣ್ಣೇ ಶತ್ರು' ಎಂಬಂತೆ ಸಮಾಜದ ಪರ ವಕಾಲತ್ತು ವಹಿಸುವ ಮಹಿಳಾ ವರ್ಗ ಕೆಟ್ಟದಾಗಿ ಮಾತನಾಡಲು ಪ್ರಾರಂಭಿಸುತ್ತದೆ. 'ಘಟಶ್ರಾದ್ಧ'ದ ನಾಣಿಯ ಅಮ್ಮ ಸಮಾಜವು ಹೆಣ್ಣಿಗೆ ಹಾಕಿಕೊಟ್ಟಿರುವ ನಿಯಮಗಳನ್ನು ದೇವರ ನಿಯಮಗಳೇನೋ ಎಂಬಂತೆ ಪಾಲಿಸುವ ಮಹಿಳಾ ವರ್ಗಕ್ಕೆ ಸೇರಿದವಳಾಗಿದ್ದಾಳೆ. ವಿಧವೆ ಯುಮನಕ್ಕ ಬಸುರಿಯಾಗಿರುವುದನ್ನು ತಿಳಿದ ಈಕೆ "ಹಾಳು ಮುಂಡೆ ಯಾಕೆ ಬಸುರಿಯಾಗಬೇಕಿತ್ತು" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೨೦೧) ಎಂದು ಬೈಯುತ್ತಾಳೆ. ತನ್ನ ಗಂಡನಿಗಿಂತ ಮುದುಕರಾದ ಉಡುಪರು ಒಂದು ಪುಟ್ಟ ಹುಡುಗಿಯ ಜೊತೆ ಮದುವೆಯಾದದ್ದನ್ನು ಸಮರ್ಥಿಸಿಕೊಳ್ಳುವ ಈಕೆ "ಇವಳು ನೀತಿಗೆಟ್ಟ ಮೇಲೆ ಉಡುಪರಿಗೆ ಸಂಸಾರ ನಡೆಯೋದು ಬೇಡವೆ, ಬೇಯಿಸಿ ಹಾಕಲೊಂದು ಜನ ಬೇಡವೆ, ಅಂತೂ ಕಾಲ ಕೆಟ್ಟಿತು" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೨೦೨) ಎಂದು ಹೇಳುವ ಮೂಲಕ ಯುಮನಕ್ಕಳನ್ನು ನೀತಿಗೆಟ್ಟವಳೆಂದು ಜರಿಯುತ್ತಾಳೆ. ಹೆಣ್ಣಿಗೊಂದು ನ್ಯಾಯ, ಗಂಡಿಗೊಂದು ನ್ಯಾಯ ಎಂಬಂತೆ ಸಮಾಜ ಹೆಣ್ಣಿನ ಮೇಲೆ ಹಾಕಿರುವ ಕಟ್ಟುಪಾಡುಗಳನ್ನು ನಾಣಿಯ ಅಮ್ಮನಂತಹ ಮಹಿಳೆಯರು ಪ್ರಶ್ನಿಸದೆ ಸಮಾಜದ ವಕ್ತಾರರಂತೆ ಕೆಲಸ ಮಾಡುತ್ತಾರೆ. ಹೆಣ್ಣಿನ ವಿರೋಧಿಯಾದ ಇಂತಹ ಕಟ್ಟುಪಾಡುಗಳನ್ನು ಪುರುಷರಂತೆ, ಮಹಿಳೆಯರು ವಿರೋಧಿಸುವುದು ಅವರು ಸಮಾಜದ ಸ್ಥಾಪಿತ ಮೌಲ್ಯಗಳ ಪರವಾಗಿರುವುದು ತೋರಿಸುತ್ತದೆ.

ನೈತಿಕತೆ ಮತ್ತು ಅನೈತಿಕತೆ ಎನ್ನುವ ವಿಷಯಗಳೆಲ್ಲಾ ಈ ಪುರುಷ ಪ್ರದಾನ ಸಮಾಜದಲ್ಲಿ ಮಹಿಳೆಗೆ ಮಾತ್ರ ಇದೆ. ಪುರುಷನು ಏನು ಮಾಡಿದರೂ ಅದು ಪ್ರಶ್ನಾರ್ಹವಲ್ಲ. ಯಾರು ಕೂಡ ಇಂತಹವನ್ನು ಪ್ರಶ್ನಿಸಬಾರದೆಂದು ಸಮಾಜವು ನಿರೀಕ್ಷಿಸುತ್ತದೆ. ಇದಕ್ಕೆ ಒಪ್ಪಿ ಮಹಿಳೆ ಬಾಳುವೆ ಮಾಡುತ್ತಾಳೆ. 'ಆಕಾಶ ಮತ್ತು ಬೆಕ್ಕು' ಜಯತೀರ್ಥ ಆಚಾರ್ಯರು ಹೆಂಡತಿಯಿದ್ದರೂ ಗಂಗೂಬಾಯಿ ಎಂಬ ಮಹಿಳೆಯ ಜೊತೆ ಸಂಬಂಧ ಇಟ್ಟುಕೊಳ್ಳುತ್ತಾರೆ. ತನ್ನ ಗಂಡನ ಅನೈತಿಕೆ ಗೊತ್ತಾದರೂ ಆಚಾರ್ಯರ ಹೆಂಡತಿ ಅದನ್ನು ವಿರೋಧಿಸುವುದಿಲ್ಲ. ಬದಲಿಗೆ ಗಂಡ ಸತ್ತ ನಂತರ ಆಕೆಯನ್ನು ತಮ್ಮ ಮನೆಯಲ್ಲಿಯೇ ಉಳಿಸಿಕೊಳ್ಳುವ ಔದಾರ್ಯವನ್ನು ತೋರುತ್ತಾರೆ!

ಮುಂದಿನ ಪೀಳಿಗೆಯ ಸಾವಿತ್ರಿ ಕೂಡ ತಾಯಿಯಂತೆ ಅಪ್ಪನ ಅನೈತಿಕತೆಯನ್ನು ವಿರೋಧಿಸದೆ ಸಹಜವೆಂಬಂತೆ ವರ್ತಿಸುತ್ತಾಳೆ.

'ಅವೆಲ್ಲ ಋಣಾನುಬಂಧ ಯಾರ ಕೈಯಿಂದಲೂ ತಪ್ಪಿಸಿಕೊಳ್ಳೋಕೆ ಆಗಲ್ಲ' ಎಂದು ಹೇಳುವ ಈಕೆ ಅಪ್ಪನ ಅನೈತಿಕತೆಗೆ ಋಣಾನುಬಂಧದ ಅರ್ಥಛಾಯೆಯನ್ನು ನೀಡಲು ಪ್ರಯತ್ನಿಸುತ್ತಾಳೆ. "ಯಾವ ಜನ್ಮದ ಋಣವೋ ತೀರಬೇಕಲ್ಲ" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೩೭೧) ಎಂದು ಬಾಯಿ ಮುಚ್ಚಿಕೊಳ್ಳುವ ರುಕ್ಮಿಣಿಯಮ್ಮ ಮತ್ತು ಆಕೆಯ ಮಗಳು ಸಾವಿತ್ರಿಯಲ್ಲಿ ಭದ್ರತೆಯ ಕೊರತೆ ಇದೆ. ರುಕ್ಮಿಣಿಯಮ್ಮಳಿಗೆ ಗಂಡ ಆಚಾರ್ಯನನ್ನು ಬಿಟ್ಟರೆ ಬೇರೆ ಭದ್ರತೆ ಇಲ್ಲ. ಇನ್ನು ಸಾವಿತ್ರಿ ಮದುವೆಯಾಗಿ ಗಂಡನನ್ನು ಕಳೆದುಕೊಂಡು ತವರು ಮನೆ ಸೇರಿದವಳು. ಆಕೆಗೂ ತಂದೆ ಆಚಾರ್ಯನನ್ನು ಬಿಟ್ಟರೆ ಬೇರೆ ಗತಿಯಿಲ್ಲ. ಇಂತಹ ಅಸಹಾಯಕ ಪರಿಸ್ಥಿತಿಯಲ್ಲಿ ಆಚಾರ್ಯರ ಅನೈತಿಕತೆಯನ್ನು ಪ್ರಶ್ನಿಸುವಷ್ಟು ಧೈರ್ಯ ಇವರಿಗಿಲ್ಲ. ಸಮಾಜದ ಕಟ್ಟುಪಾಡುಗಳನ್ನು ಬಲವಾಗಿ ನಂಬಿರುವುದರ ಜೊತೆಗೆ ಇವರ ಅಸಹಾಯಕತೆ ಆಚಾರ್ಯರ ಅನೈತಿಕತೆಯನ್ನು ಪ್ರಶ್ನಿಸಿ ಸಮಾಜದ ಮತ್ತು ಅಚಾರ್ಯರ ಕೆಂಗಣ್ಣಿಗೆ ಗುರಿಯಾಗುವುದನ್ನು ತಪ್ಪಿಸಿಕೊಳ್ಳುತ್ತಾರೆ.

ಪುರುಷ ತನಗೆ ಸಮಾಜ ನೀಡಿರುವ ಲೈಂಗಿಕ ಸ್ವಾತಂತ್ರ್ಯವನ್ನು ಸ್ವೇಚ್ಛಚಾರ ಎಂಬಂತೆ ಬಳಸಿಕೊಳ್ಳುತ್ತಾನೆ. ಆದ್ದರಿಂದಲೇ ವಿವಾಹ ಪೂರ್ವ ಮತ್ತು ವಿವಾಹ ನಂತರದ ಲೈಂಗಿಕತೆಗೆ ಆತ ಹಿಂದೆಮುಂದೆ ನೋಡುವುದಿಲ್ಲ. ಮದುವೆಯಾಗಿ ಹೆಂಡತಿ ಇದ್ದರೂ ಆಕೆಯಲ್ಲಿ ಪ್ರೀತಿಯ ಸಂಬಂಧ ಇಟ್ಟುಕೊಳ್ಳದೆ ಹೊರಗಿನ ಸಂಬಂಧದಲ್ಲಿ ತನ್ನ ಲೈಂಗಿಕತೆಯನ್ನು ತೃಪ್ತಿಪಡಿಸಿಕೊಳ್ಳುವುದಕ್ಕೆ ಪುರುಷ ಹೆಣಗಾಡುತ್ತಾನೆ. "ಈ ಲೋಕಕ್ಕೆ ಸೂಳೆಯಾಗಬೇಕು, ಪರಲೋಕಕ್ಕೆ ಮಾತ್ರ ಹೆಂಡತಿ ಬೇಕು" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೩೫೮) ಎಂದು ನೀತಿ ಮಾಡಿಕೊಂಡಿರುವ ಪುರುಷರು ತಮ್ಮ ಲೈಂಗಿಕತೆಯ ತೃಪ್ತಿಗಾಗಿ ಮನೆಯ ಹೊರಗಿನ ಸಂಬಂಧಗಳನ್ನು ಬೆಳೆಸಿಕೊಳ್ಳುತ್ತಾರೆ. ಮೇಲ್ವರ್ಗ ಮತ್ತು ಮೇಲ್ಜಾತಿಯ ಪುರುಷರು ಇಂತಹ ಸಂಬಂಧಗಳಿಗಾಗಿ ಕೆಳವರ್ಗ ಮತ್ತು ಕೆಳಜಾತಿಯ ಮಹಿಳೆಯರನ್ನು ಬಳಸಿಕೊಳ್ಳುತ್ತಾರೆ. "ಎಣ್ಣೆ ಗಂಪು ಬಣ್ಣದ ಮಾಟದಾದ ಮೂಗಿನ, ತೋರವಾದ ನಿತಂಬದ, ಮೈಯೆಲ್ಲ ಮೃದು ಮೃದು ಹೆಣ್ಣು ಲಚ್ಚಿ.... ಚಿಮ್ಮುತ್ತಾಳೆ, ಜಿಗಿಯುತ್ತಾಳೆ, ಬಾಯಿ ಬಿಟ್ಟು ನಗುತ್ತಾಳೆ, ರಸರಸವಾದ ನಡೆನುಡಿ ತಡವಿದರೆ ಕೈತುಂಬ ಮೈತುಂಬ ವೈಯ್ಯಾರ ಖುಷಿ ಮೋಜು ತಪ್ಪಲ್ಲವೆಂದು ಜೀವಕ್ಕೆ ಹಾಯೆನ್ನಿಸುತ್ತಾಳೆ. ಹೆಣ್ಣಿನ ಸಂಗ

ಮಾಡುವಾಗ ಏನೂ ಮಾಡುವದೂ ಹೇಸಿಗೆಯಲ್ಲ ಎಂದು ಮನಸ್ಸಿಗೆ ಎನ್ನಿಸುವ ಚೆಲುವು ಇವಳದು. ಎತ್ತೆತ್ತಿ ಕೊಡುತ್ತಾಳೆ, ನಿನ್ನದು ಎನ್ನಿಸುತ್ತಾಳೆ. ತಂಪೆನಿಸುತ್ತಾಳೆ, ಮುಗಿದ ಮೇಲೆ ಮೈಲಿಗೆಯಾಯಿತೆಂದು ವಾಕರಿಕೆ ಬರುವುದಿಲ್ಲ ಪೂರ್ತ ಹೆಣ್ಣು ಇವಳು. ಅಪ್ಪಟ್ಟ ಹೆಣ್ಣು ಇವಳು, ನೂರಕ್ಕೆ ನೂರು ಶಾರದೆಯ ಹಾಗಲ್ಲ. ಶಾರದೆ ಬಟ್ಟೆ ಬಿಟ್ಟಿದರೂ ಬೆತ್ತಲೆಯಾಗುವುದಿಲ್ಲ. ಬಲಿಗೆ ಹೋಗುವ ಪ್ರಾಣಿಯಂತೆ ಕಾಣುತ್ತಾಳೆ. ಲಚ್ಚಿ ಬಟ್ಟೆ ತೊಟ್ಟರೂ ಬೆತ್ತಲೆ, ಒಬ್ಬಳನ್ನು ಹಗಲಿಗೆಂದು ಆತ್ಮದ ಸಹವಾಸಕ್ಕೆಂದು ದೇವರು ಸೃಷ್ಟಿಸಿದ; ಇನ್ನೊಬ್ಬಳನ್ನು ಕತ್ತಲಿನ ಸುಖಕ್ಕೆಂದು ಸೃಷ್ಟಿಸಿದ" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೧೭೧) ಎಂದು ಹೇಳಿಕೊಳ್ಳುವ ಮೇಲ್ಜಾತಿಯ ಪುರುಷರಿಗೆ ಕೆಳಜಾತಿಯ ಮಹಿಳೆಯರು ಹಾಯೆನಿಸುತ್ತಾರೆ. ಹೆಂಡತಿಯೊಂದಿಗೆ ಗದರುತ್ತಾ, ಇಟ್ಟುಕೊಂಡವಳೊಂದಿಗೆ ಪ್ರೀತಿಯನ್ನು ತೋರುವ ಪುರುಷರು ತಮ್ಮ ಹೆಂಡತಿಯ ಮೇಲೆ ಅಧಿಪತ್ಯ ತೋರಿಸುವಂತೆ, ಇಟ್ಟುಕೊಂಡವಳೊಂದಿಗೆ ತಮ್ಮ ಹಕ್ಕನ್ನು ಚಲಾಯಿಸುವುದಿಲ್ಲ. ಆಕೆಯೂ ಅಷ್ಟೇ ಇವನ ಮೇಲೆ ಹಕ್ಕನ್ನು ಸ್ಥಾಪಿಸಲು ಮುಂದಾಗುವುದಿಲ್ಲ. ಕೆಳಜಾತಿಯ ಇಂತಹ ಮಹಿಳೆಯರಿಗೆ ಮೇಲ್ಜಾತಿಯ ಪುರುಷರ ಮೇಲಿನ ತಮ್ಮ ಅಧಿಪತ್ಯಕ್ಕಿಂತ ತಮ್ಮ ಬದುಕು ನಡೆಯುವುದು ಮುಖ್ಯವಾಗುತ್ತದೆ. ಇವರು ಲೈಂಗಿಕತೆಯನ್ನು ಮುಂದಿಟ್ಟುಕೊಂಡು ಆರ್ಥಿಕವಾಗಿ ತಮ್ಮ ಬದುಕು ಭದ್ರವಾಗಿಸಿಕೊಳ್ಳುವುದರ ಕಡೆ ತಮ್ಮ ಗಮನ ಕೇಂದ್ರೀಕರಿಸುತ್ತಾರೆ. "ಬೇಡ ಲಚ್ಚಿ ಇನ್ನು ನನಗೆ ಬೇಡ ಲಚ್ಚಿ . ಸಣ್ಣಮ್ಮ ಮದುವೆಯಾಗಲು ಒಪ್ಪುತ್ತಾಳೋ ಕೇಳಲು ಬಂದೆ. ನೀನು ತುಂಬ ಒಳೆಯವಳು ಲಚ್ಚಿ" ಎಂದು 'ಪ್ರಶ್ನೆ' ಕಥೆಯ ರಂಗಯ್ಯ ಲಚ್ಚಿಯ ಸಹವಾಸ ತನಗಿನ್ನು ಬೇಡ ಎಂದು ಹೇಳಿದರೂ ಲಚ್ಚಿ ಧೃತಿಗೆಡುವುದಿಲ್ಲ ಬದಲಿಗೆ "ನಾನೇನು ಮಹಾ, ಬಿಡಿಯಯ್ಯ– ನೀವು ಒಳ್ಳೇ ಹೇಳ್ತೀರಿ. ನಿಮ್ಮ ಮದುವೆ ಕಣ್ತುಂಬ ನೋಡೋದೆ ನನ್ನ ಆಸೆ ಅಲ್ಲವ? ಹೋಗಲಿ ಈ ತೋಟವೊಂದನ್ನ ನನ್ನ ಅಮ್ಮನ ನೆನಪಿಗಾದರೂ ದೊಡ್ಡಯ್ಯ ನಮ್ಮ ಹೆಸರಿಗೆ ಮಾಡಿಸಿ ಕೊಡಲು ಹೇಳಿ. ನಿಮ್ಮ ಹೊಟ್ಟೆ ತಣ್ಣಗಿರಲಿ" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೧೧೪) ಎಂದು ಹೇಳುವ ಮೂಲಕ ಭದ್ರ ಬದುಕನ್ನು ಕಟ್ಟಿಕೊಳ್ಳುವ ಪ್ರಯತ್ನದಲ್ಲಿ ಲಚ್ಚಿ ಇದ್ದಾಳೆ. ಮೇಲ್ಜಾತಿಯ ಪುರುಷರಿಗೆ ಸ್ಫೂರ್ತಿಯ ಚಿಲುಮೆಯಾಗಿರುವ ಕೆಳಜಾತಿಯ ಮಹಿಳೆಯರು ಮುಕ್ತ ಲೈಂಗಿಕತೆಯನ್ನು ರಾಜರೋಷವಾಗಿಯೇ ಒಪ್ಪಿಕೊಂಡು ಗೊಂದಲ ಮುಕ್ತವಾದ ಜೀವವನ್ನು ಬಾಳುತ್ತಾರೆ.

"ಈ ದೇಹದಲ್ಲಿರುವ ತನಕ ನಾವೆಲ್ಲರೂ ಮನುಷ್ಯರೇ ಕ್ರೋಧ, ಕಾಮ, ಮೋಹ ಯಾರನ್ನೂ ಬಿಟ್ಟಿದ್ದಿಲ್ಲ" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ

೧೨೩) ಎಂಬಂತೆ ಹೆಣ್ಣಾಗಲೀ, ಗಂಡಾಗಲೀ ಈ ಕಾಮ ಮೋಹಗಳ ಸೆಳೆತಗಳಿಗೆ ಒಳಗಾಗಿಯೇ ತೀರುತ್ತಾರೆ. ಲೈಂಗಿಕತೆ ಎನ್ನುವುದು ಪ್ರಕೃತಿ ಸಹಜವಾದದ್ದು, ವಯೋಸಹಜವಾದ ವಾಂಛೆಗಳಿಗೆ ಯಾವುದೇ ಲಿಂಗ ಬೇಧವಿರುವುದಿಲ್ಲ. ಆದರೆ ಸಮಾಜ ಗಂಡಿಗೆ ಹಾಕಿರದ ಮಿತಿಯನ್ನು ಈ ವಿಷಯದಲ್ಲಿ ಹೆಣ್ಣಿಗೆ ಹಾಕಿದೆ. ಕೆಲವೊಮ್ಮೆ ಸಮಾಜ ಹಾಕಿರುವ ಈ ಮಿತಿಯನ್ನು ಮಹಿಳೆ ಮೀರುವ ಕೆಲಸವನ್ನು ಮಾಡುತ್ತಾಳೆ. 'ಪ್ರಕೃತಿ' ಕಥೆಯ ಲಕ್ಷ್ಮಿ ಮದುವೆಯಾಗಿ ಆರು ತಿಂಗಳಿಗೆ ಗಂಡ ಸತ್ತು ಅಪ್ಪನ ಆಶ್ರಯಕ್ಕೆ ಬಂದಿದ್ದಾಳೆ. ಈ ಲಕ್ಷ್ಮಿ ತನ್ನ ವಯೋಸಹಜವಾದ ಬಯಕೆಗಳಿಗಾಗಿ ಶಾನುಭೋಗನ ಮಗ ಕಿಟ್ಟನ ಸಂಬಂಧವನ್ನು ಬೆಳೆಸುತ್ತಾಳೆ. ಅವಳ ಈ ಪ್ರಕ್ರಿಯೆಯಲ್ಲಿ ಅನೈತಿಕತೆಯನ್ನು ಕಾಣಲಾಗುವುದಿಲ್ಲ. ಗಂಡ ಇದ್ದೂ ಈ ಸಂಬಂಧವನ್ನು ಲಕ್ಷ್ಮಿ ಬೆಳೆಸಿದ್ದರೆ ಅದು ಅನೈತಿಕತೆಯಾಗುತ್ತಿತ್ತು. "ಹುಚ್ಚೆದ್ದು ಕುಣಿಯುವ ಇಂದ್ರಿಯಗಳನ್ನು 'ತೆಪ್ಪಗಿರು ನನ್ನ ಕಂಕುಳಲ್ಲಿ' ಎಂದು ಅದುಮಿಡಲು" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೧೨೩) ಸಾಧ್ಯವಿಲ್ಲ. ಆದ್ದರಿಂದಲೇ ಲಕ್ಷ್ಮಿ ತನ್ನ ವಯೋಸಹಜವಾದ ವಾಂಛೆಗಳಿಗಾಗಿ ಕಿಟ್ಟನ ಸಂಬಂಧ ಬೆಳಸುವ ಮೂಲಕ ಜೀವನದ ಸಾರ್ಥಕತೆಯನ್ನು ಅನುಭವಿಸುತ್ತಾಳೆ. ವಿಧವೆಯರಿಗೆ ಸಮಾಜ ವಿಧಿಸಿರುವ ಕಟ್ಟುಪಾಡುಗಳಿಂದಲೇ ಲಕ್ಷ್ಮಿ ಕದ್ದು ಮುಚ್ಚಿ ತನ್ನ ಸಂಬಂಧವನ್ನು ಮುಂದುವರೆಸುತ್ತಾಳೆ. ಆ ಮೂಲಕ ವ್ಯವಸ್ಥೆಯನ್ನು ಮೀರಿ 'ಪ್ರಕೃತಿ'ಗೆ ಹತ್ತಿರವಾಗುತ್ತಾಳೆ. ಪ್ರಕೃತಿಯ ವಿರುದ್ಧ ನಿಂತರೆ ಮನುಷ್ಯನ ದುರಂತವಾಗುತ್ತದೆ. ಹಾಗೆಯೇ ಪ್ರಕೃತಿ ಸಹಜವಾದ ಆಸೆಗಳ ವಿರುದ್ಧ ಮನುಷ್ಯ ನಿಲ್ಲಬಾರದೆನ್ನುವುದನ್ನು ಈ ಕತೆ ಧ್ವನಿಸುತ್ತದೆ.

ಮೇಲ್ಜಾತಿಯ ಮಹಿಳೆಯರು ಕುಟುಂಬದ ಒಳಗೆಯೇ ಕೆಲಸ ಕಾರ್ಯಗಳನ್ನು ನೋಡಿಕೊಳ್ಳುವುದರಿಂದ ಹೊರಗಿನ ಪ್ರಪಂಚದ ಬಗೆಗೆ ಅವರಿಗೆ ಅರಿವು ಇರುವುದಿಲ್ಲ. ಅಲ್ಲದೆ ಅವರು ತಮ್ಮ ಎಲ್ಲ ಖರ್ಚು ವೆಚ್ಚಗಳಿಗಾಗಿ ಗಂಡನನ್ನೇ ಆಶ್ರಯಿಸುವುದರಿಂದ ಅವರಿಗೆ ಆರ್ಥಿಕ ಭದ್ರತೆಯು ಇರುವುದಿಲ್ಲ. ಮಾನ ಮರ್ಯಾದೆ, ಸಂಪ್ರದಾಯ ಕಟ್ಟುಪಾಡು ಈ ಮೊದಲಾದವುಗಳಿಗೆ ಹೆಚ್ಚು ಮಹತ್ವ ಕೊಡುವ ಇವರು ತಮ್ಮ ಬದುಕನ್ನು ಸಮರ್ಥವಾಗಿ ಕಟ್ಟಿಕೊಳ್ಳುವುದರಲ್ಲಿ ವಿಫಲರಾಗಿರುತ್ತಾರೆ. ಗಂಡನ ಅನೈತಿಕತೆಯ ಪ್ರಶ್ನೆ ಬಂದಾಗಲೂ ಮೌನರಾಗುತ್ತಾರೆ. ಗಂಡನ ಅನೈತಿಕತೆ ಬಗ್ಗೆ ಗೊತ್ತಿದ್ದರೂ ಗೊತ್ತಿಲ್ಲದಂತೆ ನಟಿಸುತ್ತಾರೆ. ಆದರೆ ಕೆಳ ಜಾತಿಯ ಮಹಿಳೆಯರು ತಮ್ಮ ಗಂಡನ ಅನೈತಿಕತೆಯ ಒಂದಷ್ಟು ಸುಳಿವು ಸಿಕ್ಕಿದರೂ ಸಾಕು ಅದನ್ನು ಪ್ರತಿಭಟಿಸದೆ ಸುಮ್ಮನಿರುವುದಿಲ್ಲ. ಮೇಲ್ಜಾತಿಯ ಮಹಿಳೆಯರು ತಮ್ಮ ಗಂಡನ ಅನೈತಿಕತೆಯ ಬಗ್ಗೆ ಮಾತನಾಡಿದರೆ ಜನ ತಮ್ಮ ಬಗ್ಗೆ ಮಾತನಾಡಿಕೊಂಡು ತಮ್ಮ ಮಾನ ಮರ್ಯಾದೆಗೆ

ಕುಂದುಂಟಾಗುತ್ತದೆಯೆಂದು ಗಂಡನ ಅನೈತಿಕತೆಯನ್ನು ಒಪ್ಪಿಬಾಳುತ್ತಾರೆ. ಆದರೆ ಅಬ್ಬಕ್ಕನಂತಹ ಕೆಳ ಜಾತಿಯ ಮಹಿಳೆ ಗಂಡನ ಅನೈತಿಕತೆಯನ್ನು ತನ್ನದೇ ಆದ ರೀತಿಯಲ್ಲಿ ಪ್ರತಿಭಟಿಸುತ್ತಾರೆ. ಅಬ್ಬಕ್ಕ ತನ್ನ ಗಂಡ ತುಕ್ರನಿಗೆ ಇರುವ ಹೆಣ್ಣಿನ ಚಟವನ್ನು ಕುರಿತು "ತುಕ್ರನ ಕಚ್ಚೆ ಒದರಿದರೆ ಮಕ್ಕಳು ಉದುರುತ್ತಾವೆ" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೧೨೭) ಎಂದು ಬಹಿರಂಗವಾಗಿಯೇ ಹಾಸ್ಯ ಮಾಡುತ್ತಾಳೆ. ಗಂಡ ತುಕ್ರನ ಅನೈತಿಕತೆಯ ವಿರುದ್ಧ ಅಬ್ಬಕ್ಕ ತನ್ನ ತಾಳಿಯನ್ನು ಕಿತ್ತು ಬಿಸಾಕುವ ಮೂಲಕ ಪ್ರತಿಭಟನೆ ತೋರುತ್ತಾಳೆ. ಮತ್ತೊಮ್ಮೆ ಗಂಡ ಮನೆ ಬಿಟ್ಟು ಹೋದಾಗ ಆತನ ಅನೈತಿಕತೆಯ ಬಗ್ಗೆ ಪರಿಚಯವಿದ್ದ ಅಬ್ಬಕ್ಕ ತಾನೂ ಕೂಡ ಎಂಕಪ್ಪ ಶೆಟ್ಟಿ ಜೊತೆ ಸ್ನೇಹ ಬೆಳಸುವ ಮೂಲಕ ವಿರೋಧವನ್ನು ವ್ಯಕ್ತಪಡಿಸುತ್ತಾಳೆ. ಗಂಡನಿಲ್ಲದಿದ್ದರೂ ತಾನು ಕೂಡ ಸಂತೋಷವಾಗಿರಬಲ್ಲೆ ಎಂದು ತೋರಿಸಲು ಅಬ್ಬಕ್ಕ ಶೆಟ್ಟಿಯ ಜೊತೆ ಸಂಬಂಧ ಬೆಳೆಸಿದ್ದಳೇ ಹೊರತು ಇಲ್ಲಿ ಅನೈತಿಕತೆ ಇಲ್ಲ. ಏಕೆಂದರೆ ಗಂಡ ಬಂದ ನಂತರ ಅಬ್ಬಕ್ಕ ಶೆಟ್ಟಿಯನ್ನು ನಕ್ಕು ಮಾತನಾಡಿಸಿ ದೂರವಿಡುತ್ತಾಳೆ. ಗಂಡನ ಅನೈತಿಕತೆಯ ವಿರುದ್ಧ ಕೆಳಜಾತಿಯ ಮಹಿಳೆಯರ ಪ್ರತಿಭಟನೆಯು ಈ ರೀತಿ ದಿಟ್ಟವಾಗಿರುವುದನ್ನು ಗಮನಿಸಬೇಕಾಗುತ್ತದೆ. ಅವರು ಬೆಳೆದು ಬಂದ ಪರಿಸರ, ಬದುಕುತ್ತಿರುವ ವಾತಾವರಣ, ಅವರು ಬದುಕನ್ನು ಸ್ವೀಕರಿಸುವ ರೀತಿ ಈ ಮೊದಲಾದವುಗಳೆಲ್ಲ ಮೇಲ್ಜಾತಿಯ ಮಹಿಳೆಯರಿಗಿಂತ ಭಿನ್ನವಾಗಿರುವುದರಿಂದಲೇ ಕೆಳಜಾತಿಯ ಮಹಿಳೆಯರ ಪ್ರತಿಭಟನೆಯ ಸ್ವರೂಪವು ಮೇಲ್ಜಾತಿಯ ಮಹಿಳೆಯರಿಗಿಂತ ಭಿನ್ನ ರೀತಿಯಲ್ಲಿ ವ್ಯಕ್ತವಾಗುತ್ತದೆ.

ಸಂಪ್ರದಾಯ ಬ್ರಾಹ್ಮಣ ಸಮಾಜದ ಕೊಳೆಯ ಜೊತೆ ಬಾಳುತ್ತಿರುವ 'ಘಟಶ್ರಾದ್ಧ'ದ ವಿಧವೆ ಯಮುನಕ್ಕ ಒಂಟಿಯಾಗಿ ಇಡೀ ವ್ಯವಸ್ಥೆಯ ವಿರೋಧವನ್ನು ಕಟ್ಟಿಕೊಂಡು ಜೀವಂತವಾಗಿ ಶ್ರಾದ್ಧಕ್ಕೆ ಒಳಪಡುತ್ತಾಳೆ. ವ್ಯವಸ್ಥೆಯು ಮಹಿಳೆಯ ವಿಷಯದಲ್ಲಿ ಎಷ್ಟು ಕ್ರೂರವಾಗಬಹುದು ಎಂಬುದಕ್ಕೆ 'ಘಟಶ್ರಾದ್ಧ' ಸಾಕ್ಷಿಯಾಗಿದೆ. ಸಂಪ್ರದಾಯಸ್ಥ ಬ್ರಾಹ್ಮಣ ಸಮಾಜ ಮಹಿಳೆಯನ್ನು ಶೋಷಿಸುವ ರೀತಿಯನ್ನು ಇದು ಧ್ವನಿಸುತ್ತದೆ. "ಯಮುನಕ್ಕ ತುಂಬಾ ಚಿಕ್ಕವರು. ಗುಂಡ ಗುಂಡಗೆ ಅಮ್ಮನಿಗಿಂತಲೂ ಚೆನ್ನಾಗಿ ಯಮುನಕ್ಕ ಕಾಣುತ್ತಿದ್ದರು." (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೧೮೪) ಇಂತಹ ಯಮುನಕ್ಕಳ ಗಂಡ ಮದುವೆಯಾಗಿ ಸ್ವಲ್ಪದಿನಕ್ಕೆ ಹಾವು ಕಚ್ಚಿ ಸತ್ತು ಹೋಗಿದ್ದನು. ವಿಧವೆಯಾದ ಯಮುನಕ್ಕ ಹೆಂಡತಿಯಿಲ್ಲದ ಶೇಷಗಿರಿ ಉಡುಪರನ್ನು ನೋಡಿಕೊಳ್ಳುವುದಕ್ಕಾಗಿ ಅವರ ಆಶ್ರಯದಲ್ಲಿದ್ದಳು. ಸಂಪ್ರದಾಯಸ್ಥವಾದ ಬ್ರಾಹ್ಮಣ ಸಮಾಜ ವಿಧವೆ ಯಮುನಕ್ಕಳ ಮೇಲೆ ಅನೇಕ

ವಿರೋಧಗಳನ್ನು ಹೇರಿತ್ತು. ಆದರೆ ಚಿಕ್ಕ ವಯಸ್ಸಿನ ದಾಂಪತ್ಯ ಸುಖ ಕಾಣದ ಯಮುನಕ್ಕಳ ಮನೋವಾಂಛೆಯ ಮೇಲೆ ನಿಷೇಧ ಹೇರಲು ಸಮಾಜ ವಿಫಲವಾಯಿತು. ಯಮುನಕ್ಕ ತನ್ನ ವಯೋಸಹಜವಾದ ಆಸೆಗಳಿಗಾಗಿ ಮೇಷ್ಟ್ರರ ಸಂಬಂಧ ಬೆಳೆಸಿ ಗರ್ಭಿಣಿಯಾಗುತ್ತಾಳೆ. ಈಕೆ ಗರ್ಭಿಣಿಯಾಗಿರುವ ವಿಷಯ ತಿಳಿದ ಮೇಷ್ಟ್ರರು ಜಾರಿಕೊಳ್ಳುತ್ತಾನೆ. ಅಗ್ರಹಾರದ ಜನರಿಗೆ ಗೊತ್ತಾಗಿ ಆಕೆಯ ಮೇಲೆ ಜೋರು ಮಾಡಲು ಆರಂಭಿಸುತ್ತಾರೆ. ಸಹಜವಾಗಿ ಹೆದರಿದ ಆಕೆ ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸಿ ವಿಫಲವಾಗುತ್ತಾಳೆ. ಬೇರೆ ದಾರಿ ಕಾಣದೆ ಯಮುನಕ್ಕ ಕೊನೆಗೆ ಗರ್ಭಪಾತ ಮಾಡಿಸಿಕೊಳ್ಳುತ್ತಾಳೆ. ಮಡಿ ಹೆಂಗಸು ಈ ರೀತಿ ನಿಯಮಗಳನ್ನು ಮೀರಿದ್ದರಿಂದ ಯಮುನಕ್ಕಳಿಗೆ ಜೀವವಿದ್ದಂತೆಯೇ ಉಡುಪರು ಶ್ರಾದ್ಧ ಮಾಡಿ ಜಾತಿಯಿಂದ ಹೊರಗೆ ಹಾಕುತ್ತಾರೆ. ಪ್ರಕೃತಿ ಸಹಜವಾದ ಆಸೆ ಮತ್ತು ಸಾಮಾಜಿಕ ನಿರ್ಬಂಧಗಳ ನಡುವೆ ಸಂಘರ್ಷ ಉಂಟಾಗಿ ವ್ಯಕ್ತಿಗೆ ಸೋಲಾಗುವುದು ಘಟಶ್ರಾದ್ಧದ ವಸ್ತುವಾಗಿದೆ. ಅಗ್ರಹಾರದ ಸಮಾಜ ಯಮುನಕ್ಕಳ ವಿಷಯದಲ್ಲಿ ಕ್ರೂರಿಯಾಗಿ ನಡೆದುಕೊಂಡಿದೆ. ನಾಣಿ ಮತ್ತು ಯಮುನೆಯರನ್ನು ಬಿಟ್ಟರೆ ಎಲ್ಲರೂ ಕ್ರೂರಿಗಳಂತೆ ವರ್ತಿಸುತ್ತಾರೆ. ಅಗ್ರಹಾರ ಬ್ರಾಹ್ಮಣರು ಇರಲಿ ಕೊನೆಗೆ ಬರುವ ಕ್ರೈಸ್ತ ಪಾದ್ರಿ ಕೂಡ "ಪಾಪಿಗಳನ್ನು ದೇವರು ರಕ್ಷಿಸುತ್ತಾನೆ. ನೀವು ಹೆದರುವುದು ಬೇಡ" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೧೮೦) ಎಂದೇಳುವ ಮೂಲಕ ಯಮುನಕ್ಕ ಮಾಡಿರುವ ಕೆಲಸ ಪಾಪದ್ದು ಎಂದು ಭಾವಿಸುತ್ತಾನೆ. ಯಮುನಕ್ಕಳ ಪರವಾಗಿ ನಿಂತು ಅಗ್ರಹಾರದ ಜನರನ್ನು ಎದುರಿಸುವ ಕೆಲಸವನ್ನು ಈ ಧರ್ಮ ಪಾದ್ರಿ ಮಾಡುವುದಿಲ್ಲ. "ಭಯ ಪಡಬೇಡಿ ನಿಮ್ಮ ಅಗ್ರಹಾರದ ಜನ ನಿಮ್ಮನ್ನು ದೂರ ಹಾಕುತ್ತಾರೆ. ಆದರೆ ನಮ್ಮ ಕರ್ತನನ್ನು ನೀವು ನಂಬಿದರೆ ಅವನು ನಿಮ್ಮನ್ನು ಕಾಪಾಡುತ್ತಾನೆ. ಇಗರ್ಜಿಗೆ ನನ್ನ ಜೊತೆ ಬನ್ನಿ ಅಲ್ಲಿ ನಿಮಗೆ ರಕ್ಷಣೆ ಕೊಡುತ್ತೇವೆ" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೧೮೧) ಎನ್ನುವ ಮೂಲಕ ಪರೋಕ್ಷವಾಗಿ ಯಮುನಕ್ಕಳನ್ನು ಮತಾಂತರಗೊಳಿಸುವುದಕ್ಕೆ ಮುಂದಾಗುತ್ತಾನೆ. ಕ್ರೂರಿಯಾದ ಸಮಾಜದ ವಿರುದ್ಧ ಒಂಟಿಯಾಗಿ ಸೆಣಸಾಡುವ ಶಕ್ತಿಯಿಲ್ಲದ ಯಮುನಕ್ಕ ತನ್ನ ವ್ಯಕ್ತಿತ್ವವನ್ನೇ ಬಲಿಕೊಡುತ್ತಾಳೆ.

"ಕಂಡ ಕಂಡವರೆಲ್ಲ ನೀನು ಸಕೇಶಿ, ನಿನ್ನ ಸ್ನಾನ ಮಾಡಿದ ತಲೆ ನೀರು ನೆಲಕ್ಕೆ ಬೀಳಬಾರದು. ಮೈಲಿಗೆ ಎನ್ನುತ್ತಿದ್ದರು. ಬದುಕಿದ್ದೆಲ್ಲ ಗಂಡ ಸತ್ತ ಮುಂಡೆಯರ ಜೊತೆ ಅಥವಾ ಗಂಡಂದಿರಿಗೆ ಬಡಿಸಿಯಾದ ಮೇಲೆ 'ಉಸ್ಸಪ್ಪ' ಎಂದು ಎರಡನೆಯ ಪಂಕ್ತಿಗೆ ಕೂರುವ ಹೆಂಗಸರ ಜೊತೆ" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭,

ಪುಟ ೨೦೦) ಇದು ವಿಧವೆಯರ ಹಣೆಬರಹ. ಸಮಾಜ ವಿಧವೆಯರ ಬಾಳನ್ನು ನಿರ್ಧರಿಸಿರುವ ರೀತಿ ಇದು. ಇದನ್ನು ಪ್ರಶ್ನಿಸಲಾರದ, ವಿರೋಧಿಸಲಾರದ ಮಹಿಳೆಯರು ವ್ಯವಸ್ಥೆಯ ಕ್ರೂರ ಹಿಡಿತದಲ್ಲಿ ನಲುಗಿ ಹೋಗುತ್ತಾರೆ. ವಿಧವೆಯಾದರೂ, ಶುಷ್ಕ ಜೀವನ ನಡೆಸುತ್ತಿದ್ದರೂ 'ಪ್ರಶ್ನೆ'ಯ ಪಾರ್ವತಿ ಪುರುಷನೊಬ್ಬನ ಸಂಬಂಧವನ್ನು ಬೆಳೆಸಿ ಗರ್ಭಿಣಿಯಾಗಿ ಸಮಾಜವನ್ನು ಎದುರಿಸಲಾರದೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ವಿಧವೆಯ ಪುನರ್‌ವಿವಾಹಕ್ಕೆ ಅವಕಾಶವಿಲ್ಲದ ಸಮಾಜದಲ್ಲಿ ಚಿಕ್ಕ ವಯಸ್ಸಿನ ವಿಧವೆಯರಾದ ಯಮುನಕ್ಕ ಮತ್ತು ಪಾರ್ವತಿ ಸಹಜವಾದ ಕಾಮನೆಗಳಿಗಾಗಿ ಕದ್ದುಮುಚ್ಚಿ ಪುರುಷನ ಜೊತೆ ಸಂಬಂಧ ಬೆಳೆಸುತ್ತಾರೆ. ವ್ಯಕ್ತಿ ಸ್ವಾತಂತ್ರ್ಯದ ಬಗ್ಗೆ ಅರಿವೇ ಇಲ್ಲದ ಇವರು ಕ್ರೂರ ಸಮಾಜದ ನಿರ್ಬಂಧಗಳ ವಿರುದ್ಧ ಹೋರಾಡಲು ಅಸಮರ್ಥರಾದಾಗ ತಮ್ಮ ವ್ಯಕ್ತಿತ್ವವನ್ನೇ ಬಲಿ ಕೊಡುತ್ತಾರೆ. ಪಾರ್ವತಿ ತಾನೇ ಆತ್ಮಹತ್ಯೆ ಮಾಡಿಕೊಳ್ಳುವ ಮೂಲಕ ಮತ್ತು ಯಮುನಕ್ಕ ಗರ್ಭಪಾತ ಮಾಡಿಸಿಕೊಳ್ಳುವ ಮೂಲಕ ತಮ್ಮ ಅಸಹಾಯಕತೆಯನ್ನು ಬಿಂಬಿಸುತ್ತಾರೆ. ಈ ಇಬ್ಬರ ಘಟನೆಗಳಲ್ಲಿಯೂ ವ್ಯವಸ್ಥೆಯೇ ವಿಜಯವನ್ನು ಸಾಧಿಸಿದೆ. ವ್ಯವಸ್ಥೆಯು ಯಮುನಕ್ಕ ಮತ್ತು ಪಾರ್ವತಿಯ ಜೊತೆ ಸಂಬಂಧ ಬೆಳೆಸಿದ ಪುರುಷರಿಗೆ ಯಾವುದೇ ಶಿಕ್ಷೆಯನ್ನು ವಿಧಿಸುವುದಿಲ್ಲ. ಅವರ ಬಗ್ಗೆ ಯಾವುದೇ ಚಕಾರವನ್ನು ಎತ್ತದ ಸಮಾಜ ಯಮುನಕ್ಕ ಮತ್ತು ಪಾರ್ವತಿಯರಿಗೆ ಮಾತ್ರ ಶಿಕ್ಷೆ ವಿಧಿಸುತ್ತದೆ. ಜೀವ ವಿರೋಧಿಯಾದ ವ್ಯವಸ್ಥೆಯು ಪುರುಷರ ಪಕ್ಷಪಾತಿಯಾಗಿ ಹೆಣ್ಣಿನ ಜೀವನವನ್ನು ಬಲಿತೆಗೆದುಕೊಳ್ಳುತ್ತದೆ. "ಅಮ್ಮ ಬಸುರಿಯಾಗಲ್ಲವೆ; ಯಮುನಕ್ಕನೂ ಯಾಕೆ ಬಸುರಿಯಾಗಬಾರದು?" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೧೧೦) ಎಂಬ ನಾಣಿಯ ಪ್ರಶ್ನೆಯಲ್ಲಿನ ಮಾನವೀಯತೆಯು ಸಮಾಜವನ್ನು ತಿರಸ್ಕರಿಸುವುದನ್ನು ಕಾಣಬಹುದಾಗಿದೆ.

ಸಮಾಜ ವ್ಯವಸ್ಥೆಯಲ್ಲಿ ಮನುಷ್ಯ ಪ್ರಾಣಿಗಳ ಲೈಂಗಿಕತೆ ರೀತಿಯಲ್ಲಿ ಸ್ಪರ್ಧೆಗೆ ಇಳಿಯಬಾರದೆಂದು ವಿವಾಹ ವ್ಯವಸ್ಥೆಯನ್ನು ಮನುಷ್ಯ ಮಾಡಿಕೊಂಡಿದ್ದಾನೆ. ಈ ವಿವಾಹ ವ್ಯವಸ್ಥೆಯಲ್ಲಿ ಪುರುಷ ಮತ್ತು ಮಹಿಳೆಯರ ಲೈಂಗಿಕತೆಯು ಕ್ರಮಬದ್ಧವಾಗಿರಬೇಕೆದು ಸಮಾಜಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಈ ವಿವಾಹ ವ್ಯವಸ್ಥೆ ಕಿರಿಯ ಪೀಳಿಗೆಗೆ ರಕ್ಷಣೆಯನ್ನು ಮತ್ತು ಕ್ರಮಬದ್ಧವಾದ ಜೀವನವನ್ನು ನೀಡುತ್ತದೆ. ಆದರೆ ಈ ವಿವಾಹ ವ್ಯವಸ್ಥೆಯಲ್ಲಿ ಪಕ್ಷಪಾತ ಧೋರಣೆ ಇದೆ. ಇಲ್ಲಿ ಮಹಿಳೆಯರ ಲೈಂಗಿಕತೆಗೆ ಬಂಧನ, ನಿಯಂತ್ರಣ ಇದೆಯೇ ಹೊರತು, ಪುರುಷನ ಲೈಂಗಿಕತೆಗೆ ಯಾವುದೇ ಬಂಧನ ಮತ್ತು ನಿಯಂತ್ರಣವಿಲ್ಲ. ಹತ್ತಾರು ಮದುವೆಗಳನ್ನು

ಮಾಡಿಕೊಳ್ಳುವ ಸ್ವಾತಂತ್ರ್ಯ ಹೊಂದಿರುವ ಈತ ಹೆಂಡತಿ ಇದ್ದರೂ ವಿವಾಹೇತರ ಸಂಬಂಧಗಳನ್ನು ಬೆಳೆಸಬಹುದು. ಈ ವಿಷಯದಲ್ಲಿ ಸಮಾಜ ಆತನಿಗೆ ಒಪ್ಪಿಗೆಯನ್ನು ನೀಡಿದೆ. ಯಾವುದೇ ನಿಯಮಗಳನ್ನು ಆತ ಪಾಲಿಸಬೇಕೆಂಬ ಒತ್ತಡ ಅವನ ಮೇಲೆ ಇಲ್ಲ. ಆದರೆ ಹೆಂಗಸಿಗೆ ಈ ನಿಯಮಗಳನ್ನು ಪಾಲಿಸಲೇಬೇಕೆಂಬ ಒತ್ತಡಗಳನ್ನು ಸಮಾಜ ಹಾಕುತ್ತದೆ. ಆರ್ಥಿಕವಾಗಿ ಸಬಲನಾದ ಪುರುಷ, ಮಹಿಳೆಯರ ಲೈಂಗಿಕತೆಯ ಮೇಲೂ ನಿಯಂತ್ರಣ ಸಾಧಿಸಲು ಪ್ರಾರಂಭಿಸಿದ್ದಾನೆ. ಒಟ್ಟಾರೆ ಮಹಿಳೆಯರ ದೇಹ ಮತ್ತು ಬುದ್ಧಿಗಳ ಮೇಲೆ ಪುರುಷರು ತಮ್ಮ ನಿಯಂತ್ರಣವನ್ನು ಸಾಧಿಸಿದ್ದಾರೆ. ಈ ನಿಯಂತ್ರಣಗಳ ಒಳಗೆ ಬದುಕುವ ಮಹಿಳೆಯರಿಗೆ ಅದರಿಂದ ಹೊರಬರಬೇಕೆನ್ನುವ ತುಡಿತ ಇದ್ದರೂ ವ್ಯವಸ್ಥೆ ಅದಕ್ಕೆ ಅವಕಾಶ ಮಾಡಿಕೊಡುವುದಿಲ್ಲ. ಮೇಲ್ಜಾತಿಯ ಯಮುನಕ್ಕ ಮತ್ತು ಪಾರ್ವತಿಯ ವಿಷಯದಲ್ಲಿ ಸಮಾಜ ತನ್ನ ನಿಯಂತ್ರಣ ಸಾಧಿಸಿ ಅವರ ವ್ಯಕ್ತಿತ್ವವನ್ನು ಹತ್ತಿಕ್ಕಿದೆ.

ಮೇಲ್ಜಾತಿಯವರು ಪಡೆಯಲಾಗದ ಲೈಂಗಿಕ ಸ್ವಾತಂತ್ರ್ಯವನ್ನು ಕೆಳಜಾತಿ ಮಹಿಳೆಯರು ಪಡೆದುಕೊಂಡಿರುತ್ತಾರೆ. ಪುನರ್‌ವಿವಾಹ ಸಾಧ್ಯವಿಲ್ಲದ ಸಮಾಜದಲ್ಲಿ ಕೆಳಜಾತಿಯ ಮಹಿಳೆಯರು ಕೂಡಿಕೆಯನ್ನು ಮಾಡಿಕೊಳ್ಳುತ್ತಾರೆ. ಹಾಗೆ ಮಾಡಿಕೊಂಡರೂ ಕೆಲವೊಮ್ಮೆ ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ತಾವು ಮಾಡಿದ್ದು ಸರಿಯೋ? ತಪ್ಪೋ? ಎಂಬ ದ್ವಂದ್ವಕ್ಕೆ ಅವರು ಒಳಗಾಗುತ್ತಾರೆ. 'ತಾಯಿ' ಕಥೆಯ ಅಬ್ಬಕ್ಕ ಕೂಡ ಇಂತಹ ದ್ವಂದ್ವಕ್ಕೆ ಒಳಗಾಗಿದ್ದಾಳೆ. ಈಕೆ ತನ್ನ ಗಂಡ ಸತ್ತು ಹೋದ ಮೇಲೆ ದೇವರಂತಹ ಮನುಷ್ಯನನ್ನು ಕೂಡಿಕೆ ಮಾಡಿಕೊಳ್ಳುತ್ತಾಳೆ. ಇದನ್ನು ತಿಳಿದ ಆಕೆಯ ಮೊದಲ ಗಂಡನ ಮಗ ಅವಳನ್ನು ತೊರೆದು ಹೋಗುತ್ತಾನೆ. ತಾಯಿ ಅಬ್ಬಕ್ಕ ಎಂಟೊಂಬತ್ತು ವರ್ಷವಾದರೂ ತನ್ನನ್ನು ನೋಡಲು ಬಾರದ ಮಗನನ್ನು ನೆನೆಸಿಕೊಂಡು ದುಃಖಿಸುತ್ತಾಳೆ. ಒಂಟಿಯಾಗಿ ಬಾಳಲು ಸಾಧ್ಯವಾಗದೆ ಪ್ರೀತಿಗೆ ಸಿಲುಕಿ ತಾನು ಹೆತ್ತ ಮಗನನ್ನೇ ದೂರ ಮಾಡಿಕೊಂಡ ದುಃಖ ಆಕೆಯನ್ನು ಆವರಿಸುತ್ತದೆ. "ಹಾಗೆ ತಾನು ಮಾಡಬಾರದಿತ್ತೋ ಏನೋ?" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೨೦೧) ಎಂಬ ದ್ವಂದ್ವಕ್ಕೆ ಆಕೆ ಸಿಲುಕುತ್ತಾಳೆ. ಆದರೆ ಮರುಕ್ಷಣ ತಾನು ಕೂಡಿಕೆ ಮಾಡಿಕೊಂಡಿದ್ದು ತಪ್ಪಲ್ಲ. ಸೀತು, ಅಕ್ಕು, ಮೀಟಿ ಎಲ್ಲರೂ ತಮ್ಮ ಜಾತಿಯಲ್ಲಿ ಮಾಡಿಕೊಂಡಿದ್ದಾರೆ. ಲೋಕದಲ್ಲಿ ಯಾರೂ ಮಾಡಬಾರದ್ದನ್ನು ತಾನು ಮಾಡಿಲ್ಲ ಎಂಬ ಅಭಿಪ್ರಾಯಕ್ಕೆ ಅಬ್ಬಕ್ಕ ಬರುತ್ತಾಳೆ. ಮಹಿಳೆಯ ಲೈಂಗಿಕತೆಯ ಮೇಲೆ ನಿಯಂತ್ರಣ ಸಾಧಿಸುವ ಪುರುಷ ಪ್ರಧಾನ ಸಮಾಜದ ವಕ್ತಾರನಂತಿರುವ ಅಬ್ಬಕ್ಕನ ಮಗ ಚೆಲುವ ತಾಯಿಯ ಕೂಡಿಕೆಯನ್ನು ವಿರೋಧಿಸುತ್ತಾನೆ ಮತ್ತು ಮನೆ ಬಿಟ್ಟು

ಹೋಗುತ್ತಾನೆ. ಇದರಿಂದ ಅಬ್ಬಕ್ಕ ದ್ವಂದ್ವಕ್ಕೆ ಸಿಲುಕುತ್ತಾಳೆ. "ಅಯ್ಯೋ! ತಾನು ಪಾಪಿಯಲ್ಲವೆ? ಅದು ಎಂತಹ ಮೋಹ? ಯಾವ ತಾಯಿಯ ಕರುಳೂ ಹಾಗೆ ಮಾಡಿರಲಿಕ್ಕಿಲ್ಲ. ಆಗ ನಾಲ್ಕು ಜನ ಆಡಿಕೊಂಡಂತೆ ತಾನೂ ಸೂಳೆಗಿಂತಲೂ ಅತಂತ್ರವಾಗಿ ನಡೆಯಲಿಲ್ಲವೆ?" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೩೪) ಎಂದು ಯೋಚಿಸಿದ ಅಬ್ಬಕ್ಕ ತಾನೂ ಮಾಡಿಕೊಂಡ ಕೂಡಿಕೆಯನ್ನು ಸೂಳೆತನ ಎಂದು ಕರೆದುಕೊಳ್ಳುತ್ತಾಳೆ. ಗಂಡಸಿನ ಮೋಹ ಪಾಶಕ್ಕೆ ಸಿಲುಕಿದ ತನ್ನನ್ನು ತಾನು ಅಬ್ಬಕ್ಕ ರಾಕ್ಷಸಿ, ಕಡುಪಾಪಿ, ಪಿಶಾಚಿ ಎಂದು ಹಳಿದುಕೊಳ್ಳುತ್ತಾಳೆ. "ತನ್ನನ್ನೊಲಿದವನು ಸಭ್ಯಸ್ಥ. ಆದರೆ ಆ ಹಾಳು ಮೋಹದ ದೆಸೆಯಿಂದಲೇ ಈಗ ಕೈ ತಪ್ಪಿ ಹೋದನಲ್ಲವೇ ಮಗ?" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೩೫-೩೬) ಎಂದು ಅಬ್ಬಕ್ಕ ತನ್ನ ಮಗ ತನ್ನ ಕೈ ತಪ್ಪಿ ತಾನು ಹೋಗಲು ಮಾಡಿಕೊಂಡ ಕೂಡಿಕೆಯು ಕಾರಣ ಎಂದು ಭಾವಿಸುತ್ತಾಳೆ. ಕೂಡಿಕೆ ಮಾಡಿಕೊಂಡ ಮನುಷ್ಯ ಸಭ್ಯ ಎಂಬ ಹೆಮ್ಮೆ ಆಕೆಗಿದೆ. ಈಕೆ ಕೂಡಿಕೆಯನ್ನು ಮಾಡಿಕೊಂಡರೂ ಹೆತ್ತ ಮಗ ದೂರ ಹೋಗದಿದ್ದರೆ ಅಬ್ಬಕ್ಕನಿಗೆ ತಾನು ಮಾಡಿದ ಕೆಲಸ ಸರಿಯೋ? ತಪ್ಪೋ? ಎಂಬ ದ್ವಂದ್ವ ಕಾಡುತ್ತಿರಲಿಲ್ಲ. ಆದರೆ ಅಬ್ಬಕ್ಕನ ಮಗ ಈಕೆಯನ್ನು ತಿರಸ್ಕರಿಸಿ ಹೋದರಿಂದಲೇ ಆಕೆಗೆ ಸರಿ, ತಪ್ಪುಗಳ ದ್ವಂದ್ವ ಆರಂಭವಾಗಿದೆ. ಈ ಸಂಘರ್ಷದಿಂದಲೇ ಅವಳ ಮನಸ್ಸು ಪ್ರಕ್ಷುಬ್ಧವಾಗಿದೆ. ವ್ಯವಸ್ಥೆ ತನ್ನ ಕ್ರೂರ ವರ್ತುಲದಲ್ಲಿ ಮುಂದಿನ ಪೀಳಿಗೆಯನ್ನು ಹೇಗೆ ಬಂಧಿಸಿ, ತನ್ನ ಪರವಾಗಿ ಮಾಡಿಕೊಳ್ಳುತ್ತದೆ ಎಂಬುದಕ್ಕೆ ಚೆಲುವ ಸಾಕ್ಷಿಯಾಗಿದ್ದಾನೆ. ವ್ಯವಸ್ಥೆಯ ಪರವಾಗಿ ನಿಂತಿರುವ ಚೆಲುವನಿಂದಲೇ ಅಬ್ಬಕ್ಕ ಇಂದು ದ್ವಂದ್ವಗಳಲ್ಲಿ ಸಿಲುಕಿದ್ದಾಳೆ. ಮಹಿಳಾ ವಿರೋಧಿ ವ್ಯವಸ್ಥೆಯ ಕಂಬದ ಬಾಹುವಿನ ವಿಸ್ತಾರದ ಅರಿವನ್ನು ಈ ಕಥೆ ಮಾಡಿಕೊಡುತ್ತದೆ.

ಸಂಪ್ರದಾಯಬದ್ಧವಾದ ಜೀವ ವಿರೋಧಿ ಬ್ರಾಹ್ಮಣ ಸಮಾಜವನ್ನು ಮತ್ತು ಅದರ ಆಚರಣೆಗಳನ್ನು ಅನಂತಮೂರ್ತಿಯವರು ನಿಷ್ಠುರವಾಗಿಯೇ ಕಂಡಿದ್ದಾರೆ. ಜೀವ ವಿರೋಧಿ ಬ್ರಾಹ್ಮಣ ಸಮಾಜದ ಗೊಡ್ಡು ಆಚರಣೆಗಳು ಮಹಿಳೆಯನ್ನು ಶೋಷಿಸುವ ರೀತಿಯನ್ನು ಗಮನಿಸಿದ್ದಾರೆ. ಸಮಾಜದ 'ಪ್ರಸ್ತ' ಎನ್ನುವ ಆಚರಣೆಯು ಮಹಿಳೆಯ ಜೀವ ವಿರೋಧಿ ನೆಲೆಯಲ್ಲಿ ಕೆಲಸ ಮಾಡುವುದನ್ನು ಇವರು ಗ್ರಹಿಸಿದ್ದಾರೆ. 'ಪ್ರಸ್ತ' ಕತೆಯ ಸೀತಕ್ಕ ಮದುವೆಯಾಗಿ ಚಿಕ್ಕ ವಯಸ್ಸಿಗೆ ಗಂಡನ ಮನೆಗೆ ಹೋಗುತ್ತಾಳೆ. ಆದರೆ ಆಕೆಯ ಗಂಡ ಶೀನಪ್ಪಯ್ಯ ತಾನು ಇಟ್ಟುಕೊಂಡ ವೇಶ್ಯೆಯ ಜೊತೆಗೆ ಸೇರಿಕೊಂಡು ಸೀತಕ್ಕನನ್ನು ಹಿಂಸಿಸಲು ಪ್ರಾರಂಭಿಸುತ್ತಾನೆ. ಇಟ್ಟುಕೊಂಡವಳಿಗೋಸ್ಕರ

ಶೀನಪ್ಪಯ್ಯ ಮದುವೆಯಾದ ಚಿಕ್ಕ ವಯಸ್ಸಿನ ಹೆಂಡತಿಯನ್ನು ಹಿಂಸಿಸುವುದನ್ನು ವ್ಯವಸ್ಥೆ ವಿರೋಧಿಸುವುದಿಲ್ಲ. ಹಿಂಸೆ ತಾಳಲಾರದ ಸೀತಕ್ಕ ತವರು ಮನೆ ಸೇರುತ್ತಾಳೆ. ತುಂಬಾ ವರ್ಷಗಳಾದ ಮೇಲೆ ಶೀನಪ್ಪಯ್ಯನನ್ನು ಹುಡುಕಿ ಮತ್ತೆ ಅವರ ದಾಂಪತ್ಯ ಜೀವನಕ್ಕೆ ಅವನನ್ನು ಸೇರಿಸುವ ಕೆಲಸವನ್ನು ಹಿರಿಯರು ಮಾಡುತ್ತಾರೆ. ಹುಡುಕಿದ ಮೇಲೆ ಮತ್ತೊಮ್ಮೆ ಹಿರಿಯರು ಶೀನಪ್ಪಯ್ಯ ಮತ್ತು ಸೀತಕ್ಕರಿಗೆ ಮದುವೆ ಮಾಡುತ್ತಾರೆ. ಮುಟ್ಟುನಿಂತ ಸೀತಕ್ಕನಿಗೆ ಮತ್ತೊಮ್ಮೆ ಶೀನಪ್ಪಯ್ಯನಿಗೆ ಮದುವೆ ಮಾಡುವ ಹಿರಿಯರು ಆಕೆಯ ಕಷ್ಟಗಳೆಲ್ಲಾ ಮುಗಿಯಿತು ಎಂದು ಭಾವಿಸುತ್ತಾರೆ. ಈಗಾಗಲೇ ಅನೇಕ ಹೆಣ್ಣಿನ ರುಚಿ ನೋಡಿದ ಶೀನಪ್ಪಯ್ಯ ಸೀತಕ್ಕನನ್ನು ಇನ್ನೂ ಮುಟ್ಟಾಗುತ್ತಿರಬಹುದೆಂದು ಭಾವಿಸುತ್ತಾನೆ ಮತ್ತು ಆಕೆಯೊಡನೆ ಪ್ರಸ್ತ ಮಾಡಿಕೊಳ್ಳಬೇಕೆಂದು ಬಯಸುತ್ತಾನೆ. "ಮದುವೆ ಮಾಡಿಕೊಂಡು ಗೃಹಸ್ಥನಾದ ಮೇಲೆ ಪ್ರಸ್ತದ ಶಾಸ್ತ್ರವಾಗದಿದ್ದರೆ ಸದ್ಗತಿಯಿಲ್ಲವೆನ್ನುತ್ತಾರೆ. ಅಲ್ಲದೆ ಈಗ ನನಗೆ ದಾನವನ್ನು ಹಿಡಿಯುವ ಅಧಿಕಾರ ಸಹ ಇಲ್ಲವಂತೆ ಪ್ರಸ್ತವಾಗದ್ದರಿಂದ" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೧೬೨) ಎಂದು ಶೀನಪ್ಪಯ್ಯ ಸೀತಕ್ಕನಿಗಾಗಿ ಶಾಸ್ತ್ರದ ನೆಪವೊಡ್ಡುತ್ತಾನೆ. ಕೊನೆಗೆ ಹಿರಿಯರು ಕೂಡ ಮುಟ್ಟು ನಿಂತ ಸೀತಕ್ಕನಿಗೆ ಪ್ರಸ್ತದ ಶಾಸ್ತ್ರ ಮಾಡುತ್ತಾರೆ. "ತಾನು ಇಟ್ಟುಕೊಂಡ ಸೂಳೆಗಿಂತ ಈ ಸೀತಕ್ಕ ತುಂಬಾ ಚಿಕ್ಕವಳಲ್ಲದೆ, ಇನ್ನೂ ಮುಟ್ಟಾಗುತ್ತಿರಬಹುದು ಇವಳು ಎಂದುಕೊಂಡು ಶೀನಪ್ಪಯ್ಯ ಮೆತ್ತಗೆ ಸೀತಕ್ಕನ ಕೈ ಹಿಡಿದು ಎಳೆಯ ಹೋದರೂ..... ಸೀತಕ್ಕ ಒದ್ದುಕೊಳ್ಳುತ್ತಾ ಅಲ್ಲಿಂದ ನಡು ಮನೆಗೆ ಓಡಿದಳು." (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೧೬೪) ಮುಟ್ಟು ನಿಂತು ಮುದಿಯಾಗಿರುವ ಸೀತಕ್ಕನಲ್ಲಿ ಯಾವುದೇ ಲೈಂಗಿಕ ವಾಂಛೆಗಳು ಈಗ ಇಲ್ಲ. ಇದನ್ನು ಅರ್ಥ ಮಾಡಿಕೊಳ್ಳದ ವ್ಯವಸ್ಥೆ ಆಕೆಯನ್ನು ಮದುವೆ ಮತ್ತು ಪ್ರಸ್ತ ಎನ್ನುವ ಆಚರಣೆಗೆ ಒಳಪಡಿಸುತ್ತದೆ. ಶೀನಪ್ಪಯ್ಯನಿಗೆ ತನ್ನ ಲೈಂಗಿಕ ವಾಂಛೆ ತೀರಲು ಒಂದು ಹೆಣ್ಣಿನ ದೇಹ ಬೇಕು. ವ್ಯವಸ್ಥೆಗೆ ಅವರಿಬ್ಬರು ಒಟ್ಟಿಗೆ ಇರುವುದು ಬೇಕು. ಈ ನಡುವೆ ಸೀತಕ್ಕನ ಭಾವನೆಗಳಿಗೆ ಯಾವುದೇ ಬೆಲೆ ಇಲ್ಲ. ಹೀಗೆ ಚಿಕ್ಕ ವಯಸ್ಸಿನಲ್ಲಿಯೇ ಗಂಡನಿಂದ ಶೋಷಣೆಗೆ ಒಳಗಾಗುತ್ತಿರುವ ಸೀತಕ್ಕನಿಗೆ ವ್ಯವಸ್ಥೆಯ ಗೊಡ್ಡು ಆಚರಣೆಗಳು ಮತ್ತಷ್ಟು ಶೋಷಿಸುತ್ತದೆ. ಆದರೆ ಆ ಶೋಷಣೆಯ ಅರಿವು ಆಕೆಗಿಲ್ಲ. ಇಷ್ಟು ದಿನ ಅಮ್ಮನ ಜೊತೆಯಲ್ಲಿ ಮಲಗುತ್ತಿದ್ದ ತಾನು ಇಂದು ಗಂಡನ ಜೊತೆಯಲ್ಲಿ ಮಲಗಬೇಕೆಂಬ ಗಾಬರಿ ಸೀತಕ್ಕನಲ್ಲಿದೆ. ಶೀನಪ್ಪಯ್ಯ ಆಕೆಯನ್ನು ಲೈಂಗಿಕವಾಗಿ ಬಳಸಿಕೊಳ್ಳುವುದಕ್ಕೆ ನೋಡಿದಾಗ ಗಾಬರಿಗೊಂಡ ಆಕೆ ಅಲ್ಲಿಂದ ಓಡಿ ಬಂದು ತಾಯಿಯ ಹತ್ತಿರ ಸೇರುತ್ತಾಳೆ. ತಾಯಿಯೂ ಕೂಡ ಇದರ ಬಗ್ಗೆ

ಪ್ರಶ್ನಿಸುವುದಿಲ್ಲ. ಸೀತಕ್ಕ ಕೂಡ ಆ ಬಗ್ಗೆ ಏನೂ ಹೇಳದೆ, ಯಥಾ ಪ್ರಕಾರ ಅಮ್ಮ-ಮಗಳು, ಪುಂಡರೀಕ ಮತ್ತು ನೇತ್ರಾವತಿಯ ಮಾತುಕತೆ ಕೇಳಲು ಮುಂದಾಗುತ್ತಾರೆ. ಮುಟ್ಟು ನಿಂತಿರುವ ಸೀತಕ್ಕ ಒದ್ದುಕೊಳ್ಳುತ್ತ ಮಲಗುವ ಕೋಣೆಯಿಂದ ನಡುಮನೆಗೆ ಬರುವ ಮೂಲಕ ಒಂದು ಸಣ್ಣ ಪ್ರತಿಭಟನೆಯನ್ನು ತೋರಿದ್ದಾಳೆ. ಆದರೆ ಆಕೆಗೆ ತನ್ನ ಮೇಲಾಗಿರುವ ಶೋಷಣೆ ಮತ್ತು ತಾನು ತೋರಿಸುತ್ತಿರುವ ಪ್ರತಿಭಟನೆ ಈ ಎರಡರ ಬಗೆಗೂ ಅರಿವಿಲ್ಲದಿರುವುದು ವಿಪರ್ಯಾಸವಾಗಿದೆ.

ಸಮಾಜದಲ್ಲಿ ಆಗುತ್ತಿರುವ ಆಧುನಿಕ ಬದಲಾವಣೆಗಳನ್ನು ಒಂದು ಕುಟುಂಬದಲ್ಲಿ ಆಗುತ್ತಿರುವ ಆಧುನಿಕ ಬದಲಾವಣೆಗಳಲ್ಲಿ ತರುವ ಪ್ರಯತ್ನವನ್ನು ಅನಂತಮೂರ್ತಿ ಅವರು ಮಾಡುತ್ತಾರೆ. ಆಧುನಿಕತೆ ಕುಟುಂಬವನ್ನು ಪ್ರವೇಶಿಸುತ್ತಲೇ ಸಂಪ್ರದಾಯದ ಜೊತೆ ಸಂಘರ್ಷವೂ ಉಂಟಾಗುತ್ತದೆ. 'ಹೋಟೆಲ್' ಎನ್ನುವ ಆಧುನಿಕತೆಯ ಪ್ರತಿಮೆ ಅನಂತಮೂರ್ತಿ ಅವರ ಕಥೆಗಳಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತದೆ. ಸಂಪ್ರದಾಯಬದ್ಧ ಬ್ರಾಹ್ಮಣ ಸಮಾಜದಲ್ಲಿ ಹೋಟೆಲಿಗೆ ಸ್ಥಾನವಿಲ್ಲ. ತಾವು ಹೋಟೆಲಿಗೆ ಹೋದರೆ ತಮ್ಮ ಬ್ರಾಹ್ಮಣತ್ವ ಕಳೆದು ಹೋಗುತ್ತದೆ ಎಂಬ ನಂಬಿಕೆ ಅವರಲ್ಲಿ ಬಲವಾಗಿದೆ. ಸಂಭಾವನೆಗಾಗಿ ಊರೂರು ಅಲೆಯುವುದನ್ನೇ ವೃತ್ತಿಯನ್ನಾಗಿಸಿಕೊಂಡಿರುವ ಬ್ರಾಹ್ಮಣರು ಒಳ್ಳೆಯ ಹಣ ಸಿಗುವ ಬೇರೆ ವೃತ್ತಿಯನ್ನು ಕೈಗೊಳ್ಳುವಂತಿರಲಿಲ್ಲ. ಬ್ರಾಹ್ಮಣರು ಈ ವೃತ್ತಿಯನ್ನು ಬಿಟ್ಟು ಬೇರೆ ವೃತ್ತಿಯನ್ನು ಸ್ವೀಕರಿಸುವುಕ್ಕೆ ನಿಷೇಧವಿದ್ದ ಆ ಕಾಲದಲ್ಲಿ ಅಲ್ಲೊಬ್ಬರು ಇಲ್ಲೊಬ್ಬರು ಎನ್ನುವಂತೆ ಈ ವೃತ್ತಿಯನ್ನು ಬಿಟ್ಟು ಹೋಟೆಲ್ ಇಡುವ ಸಾಹಸವನ್ನು ಮಾಡಿದ್ದರು. ಅಗ್ರಹಾರದ ಕೆಲವು ಜನರು ಇದನ್ನು ವಿರೋಧಿಸಿದ್ದರೂ ಹೋಟೆಲ್ ಇಟ್ಟ ಬ್ರಾಹ್ಮಣರು ಧೃತಿಗೆಡುವುದಿಲ್ಲ. ಒಳ್ಳೆ ಸಂಪಾದನೆಯಿಂದಾಗಿ ನೆಮ್ಮದಿಯ ಜೀವನವನ್ನು ಅವರು ನಡೆಸುತ್ತಿರುತ್ತಾರೆ. ಇದರ ಬಗ್ಗೆ ತಿಳಿದ 'ಪ್ರಸ್ತ' ಕತೆಯ ನೇತ್ರಾವತಿ ತನ್ನ ಗಂಡ ಸಂಭಾವನೆಗಾಗಿ ಊರೂರು ಅಲೆಯುತ್ತಾ ಭಿಕ್ಷುಕನ ಹಾಗೆ ತಿರುಗುವುದನ್ನು ವಿರೋಧಿಸುತ್ತಾಳೆ. ಶಾಲೆಯ ಮೆಟ್ಟಿಲು ಹತ್ತಿ ಇಂಗ್ಲಿಷ್‌ನಲ್ಲಿ ತಿಂಗಳುಗಳ, ವಾರಗಳ, ಅಂಕೆಗಳ ಹೆಸರುಗಳನ್ನು ಹೇಳುವಷ್ಟು ಬಲು ಚೂಟಿ ಹೆಣ್ಣು ಮಗಳಾದ ಈಕೆ ತಕ್ಕಮಟ್ಟಿಗೆ ಆಧುನಿಕತೆಯನ್ನು ಮೈಗೂಡಿಸಿಕೊಂಡಿದ್ದಾಳೆ. "ಎಂಥ ಹಾಳು ಸಂಭಾವನೆಯೋ? ಒಳ್ಳೆ ಭಿಕ್ಷೆ ಬೇಡುವ ಕೆಲಸ" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೧೬೬) ಎಂದು ಗಂಡನ ಕೆಲಸವನ್ನು ವಿರೋಧಿಸುವ ಇವಳು ಗಣಪಯ್ಯನ ರೀತಿಯಲ್ಲಿ ಹೋಟೆಲ್ ಇಡುವಂತೆ ಗಂಡನಿಗೆ ಒತ್ತಾಯಿಸುತ್ತಾಳೆ. "ಮೈಲಿಗೆ ಮುಟ್ಟಿಸಿಕೊಳ್ಳುವಾಗ ಆ ಹಾಳು ಜುಟ್ಟನ್ನು ಕತ್ತರಿಸಿ ಹಾಕಿ ಸಂಪೂರ್ಣ ಕ್ರಾಪು ಬಿಡಿ" (ಅನಂತಮೂರ್ತಿ.ಯು.ಆರ್, ಐದು

ದಶಕದ ಕಥೆಗಳು, ೨೦೦೭, ಪುಟ ೧೬೭) ಎಂದು ನೇತ್ರಾವತಿ ಗಂಡನಿಗೆ ಆಧುನಿಕನಾಗಲು ಪ್ರೇರೇಪಿಸುತ್ತಾಳೆ. ಗಂಡ ಪುಂಡರೀಕನಿಗೂ ಹೆಂಡತಿ ಹೇಳುವಂತೆ ಹೋಟೆಲ್ ಇಡಲು ಮತ್ತು ಕ್ರಾಪು ಬಿಡಲು ಆಸೆ ಇದೆ. ಆದರೆ ಅಮ್ಮ ಏನೆಂದುಕೊಳ್ಳುತ್ತಾಳೆನ್ನುವ ಭಯ ಆತನ ಮನಸ್ಸಿನಲ್ಲಿದೆ. ಆಧುನಿಕತೆ ಮತ್ತು ಸಂಪ್ರದಾಯ ಎರಡನ್ನೂ ಬಿಡಲಾಗದ ಮನಸ್ಥಿತಿಯಲ್ಲಿ ಪುಂಡರೀಕನಿದ್ದಾನೆ. ಹೋಟೆಲ್ ಇಡುವುದು ಮತ್ತು ಕ್ರಾಪು ಬಿಡುವುದು ಅಗ್ರಹಾರದ ಬ್ರಾಹ್ಮಣರಿಗೆ ಆಧುನಿಕತೆಯ ಸಂಕೇತವಾಗಿದೆ. ಇಂತಹ ಆಧುನಿಕ ಮನೋಭಾವಕ್ಕೆ ಒಗ್ಗಿಕೊಳ್ಳಲು ಅವರ ಸಂಪ್ರದಾಯ ನಿಷ್ಠವಾದ ಮನಸ್ಥಿತಿ ಬಿಡುವುದಿಲ್ಲ. ಆದರೆ ನೇತ್ರಾವತಿ ಆಧುನಿಕ ಶಿಕ್ಷಣ ಕಲಿತ ಹೆಣ್ಣು ಮಗಳು. ಜೊತೆಗೆ ಜಾತಿಗೆ ಅನುಗುಣವಾಗಿಯೇ ವೃತ್ತಿ ಮಾಡಬೇಕೆನ್ನುವುದನ್ನು ವಿರೋಧಿಸುವವ ಳಾಗಿದ್ದಾಳೆ. ಈ ಕಾರಣಕ್ಕಾಗಿಯೇ ಈ ವ್ಯವಸ್ಥೆಯನ್ನು ದಾಟುವ ಪ್ರಯತ್ನವನ್ನು ಮಾಡುತ್ತಾಳೆ. ನೇತ್ರಾವತಿಯ ಆಧುನಿಕತೆ ಮತ್ತು ವ್ಯವಸ್ಥೆ ಸಂಪ್ರದಾಯಕತೆಯ ನಡುವಿನ ಸಂಘರ್ಷ ಬಹಿರಂಗವಾಗಿ ಆಗದಿದ್ದರೂ ನೇತ್ರಾವತಿ ಸಂಪ್ರದಾಯವನ್ನು ಹೊಸ್ತಿಲ ಒಳಗೆಯೇ ವಿರೋಧಿಸುವ ಒಂದು ಸಣ್ಣ ಪ್ರಯತ್ನವನ್ನು ಮಾಡುತ್ತಾಳೆ.

“ನಿತ್ಯ ಒಂದೇ ಕಥೆ ಈ ಹಾಳು ಕೊಂಪೇಲಿ ನನಗೂ ಹೆಣಗಿ ಹೆಣಗಿ ಸಾಕಾಯ್ತು ನಾಣಿ ಇವತ್ತು ಈ ದನಾನ ಹುಲೀ ಹಿಡಿತು, ನಾಳೆ ನಾಯೀನ ಕುರ್ಕು ಹೊತ್ತುಕೊಂಡು ಹೋಯಿತು, ಒಂದೋ ಎರಡೋ? ಕೊಗ್ಗ ಹೇಳುತ್ತಿದ್ದ ಕಾಡಾನೆಯೊಂದು ಬೇರೆ ಬಂದು ಸೇರಿಕೊಂಡಿದೆಯಂತೆ. ಅಷ್ಟು ಸಾಲದೆಂದರೆ ಕೊಳೆ ರೋಗ, ಆ ರೋಗ ಈ ರೋಗ, ಮಲೇರಿಯಾಂತ ಮತ್ತೆ ಸಾವಿರ ಕೈಗೆ ಮೂರು ಕಾಸು ಹತ್ತದ ಮೇಲೆ ಇಲ್ಲೆ ಯಾಕೆ ಸಾಯಬೇಕು ಹೇಳು” (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೧೭೭) ಎನ್ನುವ ‘ಪ್ರಕೃತಿ’ ಕಥೆಯ ಸೀತಮ್ಮನಿಗೆ ಅಗ್ರಹಾರದ ಬದುಕು ಬೇಸರ ತಂದಿದೆ. ಇನ್ನೊಂದು ಕಡೆ ಗಂಡ ಸಂಕಪ್ಪಯ್ಯ ಮಗ ನಾರಾಯಣ ಹೋಟೆಲಿಡುತ್ತೇನೆನ್ನುವ ಮಾತಿಗೆ ವಿರೋಧ ಮಾಡುತ್ತಿದ್ದಾರೆ ಎನ್ನುವ ಚಿಂತೆ ಕೂಡ ಅವರನ್ನು ಕಾಡುತ್ತಿದೆ. ಕೊನೆಗೆ ಸೀತಮ್ಮ ಮಗ ನಾರಾಯಣನ ಹೋಟೆಲಿಡುವ ಆಸೆಗೆ ಗಂಡನನ್ನು ಎದುರು ಹಾಕಿಕೊಂಡು ಜೊತೆ ನಿಲ್ಲುತ್ತಾಳೆ. ಕಿತ್ತಳೆ ಹಣ್ಣನ್ನು ಈ ನೆಲದಲ್ಲಿ ಬೆಳೆಯಬೇಕೆಂಬ ಹುಚ್ಚಿನಲ್ಲಿ ಸಂಕಪ್ಪಯ್ಯ ಸಾವಿರಾರು ರೂಪಾಯಿ ಹಣವನ್ನು ಖರ್ಚು ಮಾಡಿದ್ದಾನೆ. ಆದರೂ ಆರು ವರ್ಷದಿಂದಲೂ ಬೆಳೆ ಕೈಗೆ ಹತ್ತಿಲ್ಲ. ಆದರೂ ಇದೇ ಭೂಮಿಯಲ್ಲಿ ಬೆಳೆ ತೆಗೆಯಬೇಕೆಂಬ ಹುಚ್ಚು ಆಲೋಚನೆ ಆತನದು. ಇದರಿಂದ ಬೇಸತ್ತ ನಾರಾಯಣ ಹೋಟೆಲನ್ನು ಇಟ್ಟು ಹೆಚ್ಚು ಹಣ ಸಂಪಾದಿಸಲು ಮುಂದಾಗುವುದರಿಂದ “ಸಂಕಪ್ಪಯ್ಯ ಏನು ಸಂತೋಷವಿದೆ ಕಚ್ಚೆ ಹರುಕರಿಗೆ ಗೊತ್ತೆ?

ಶಿಖಂಡಿ ನರಪೇತಲಗಳು ಹೋಟೆಲಿಟ್ಟಂತಲ್ಲ ತಿಳಕೊಳ್ಳಲಿ ಸೊಂಟದಲ್ಲಿ ದಮ್ಮಿರದ ಈ ಬೇವರ್ಸಿಗಳು" (ಅನಂತಮೂರ್ತಿ.ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೯೪) ಎಂದು ವಿರೋಧಿಸುತ್ತಾನೆ. ಆಧುನಿಕತೆಯ ಸಂಕೇತವಾದ ಹೋಟೆಲನ್ನು ಸಂಕಪ್ಪಯ್ಯ ತನ್ನ ವ್ಯವಸಾಯದ ಹಂಬಲದಲ್ಲಿ ನಿರಾಕರಿಸಿ ಜೀವನದ ಸಾರ್ಥಕತೆ ಹೊಂದುವ ನಿರ್ಧಾರ ಮಾಡುತ್ತಾನೆ. ಸೀತಮ್ಮ ಗಂಡನನ್ನು ಹಳ್ಳಿಯಲ್ಲಿ ಬಿಟ್ಟು ಪೇಟೆಗೆ ಹೋಗುವ ನಿರ್ಧಾರದಲ್ಲಿ, ನಾರಾಯಣನ ಉದ್ಯೋಗದ ಬದಲಾವಣೆಯಲ್ಲಿ ಜೀವನದ ಸಾರ್ಥಕತೆ ಪಡೆಯುವ ಹಂಬಲವಿದೆ. 'ಹೋಟೆಲ್'ನ ಪ್ರತಿಮೆ ಈ ರೀತಿಯಲ್ಲಿ ನೇತ್ರಾವತಿ, ಸೀತಮ್ಮ, ನಾರಾಯಣರ ಜೀವನದಲ್ಲಿ ಪ್ರವೇಶಗೊಂಡು ಹೊಸ ಬದುಕನ್ನು ಕಟ್ಟಿಕೊಳ್ಳಲು ಕನಸಿನಂತೆ ಬಳಕೆಯಾಗುತ್ತದೆ. ಏಕಕಾಲಕ್ಕೆ ಸಂಪ್ರದಾಯದ ಜೊತೆ ಸಂಘರ್ಷವನ್ನು ಉಂಟು ಮಾಡುತ್ತದೆ.

'ಸಂಸ್ಕಾರ'ದ ಪ್ರಾಣೇಶಚಾರ್ಯರು ಒಂದು ಜನಾಂಗದ ಸಾಂಸ್ಕೃತಿಕ ಪ್ರತಿನಿಧಿ ಹಾಗೂ ಬುದ್ಧಿಜೀವಿಗಳು. ಬದುಕಿನಲ್ಲಿ ಆದರ್ಶಗಳನ್ನು ತುಂಬಿಕೊಂಡಿರುವ ಇವರ ಜೀವನ ಸಂಪೂರ್ಣವಾಗಿ ವೈಧಿಕ ಧರ್ಮಕ್ಕೆ ಒಳಗೊಂಡಿದೆ. ಚಂದ್ರಿಯ ಸಹವಾಸ ಮಾಡಿದ ನಂತರ ಪ್ರಾಣೇಶಚಾರ್ಯರಿಗೆ ತಮ್ಮ ವಿದ್ವತ್ತಿನ ಆವರಣ ಕಳಚಿ ಬೀಳುತ್ತದೆ. ದ್ವಂದ್ವಕ್ಕೆ ಆಚಾರ್ಯರು ಒಳಗಾಗುತ್ತಾರೆ. ಮುಕ್ತಿ ಮಾರ್ಗದಲ್ಲಿರುವ ತಮ್ಮನ್ನು ಪರೀಕ್ಷಿಸಲೆಂದೇ ಬ್ರಾಹ್ಮಣ ಜನ್ಮ ಕೊಟ್ಟು ರೋಗಿಷ್ಠೆಯಾದ ಭಾಗೀರಥಿಯ ಜೊತೆ ಸಂಸಾರ ಮಾಡಲು ದೇವರು ತನ್ನನ್ನು ತೊಡಗಿಸಿದ್ದಾನೆ ಎಂದು ಪ್ರಾಣೇಶಚಾರ್ಯರು ಭಾವಿಸಿದ್ದಾರೆ. "ಒಣಗಿ ಮರುಟಿದ ಭಾಗೀರಥಿಯ ಕೀಚುಗಾಯಿ ದೇಹಕ್ಕೆ ಸ್ನಾನ ಮಾಡಿಸಿ, ಮಡಿಯುಡಿಸಿ, ಯಥಾವತ್ತಾಗಿ ಪೂಜೆ ನೈವೇದ್ಯಾದಿಗಳು ಮುಗಿದ ಮೇಲೆ ದೇವರ ಪ್ರಸಾದದ ಹೂ ಮುಡಿಸಿ, ತೀರ್ಥ ಕೊಟ್ಟು, ಅವಳಿಂದ ಕಾಲು ಮುಟ್ಟಿಸಿಕೊಂಡು, ಆಶೀರ್ವದಿಸಿ, ರವೆಗಂಜಿಯನ್ನು..." (ಯು.ಆರ್.ಅನಂತಮೂರ್ತಿ, ಸಂಸ್ಕಾರ, ೧೯೬೫, ಪುಟ ೭) ಮದ್ದನ್ನು ನೀಡಿ ಪ್ರಾಣೇಶಚಾರ್ಯರು ಗುಡಿಗೆ ಹೋಗಿ ಮಾರುತಿ ಪೂಜೆ ಮಾಡುತ್ತಾ ಹೆಂಡತಿ ಜೊತೆ ಇಪ್ಪತ್ತು ವರ್ಷಗಳಿಂದ ಕಳೆದಿದ್ದಾರೆ. "ಗಂಡನಿಂದ ಇಂತಹ ಸೇವೆಯನ್ನು ಮಾಡಿಸಿಕೊಳ್ಳುವ ಭಾಗೀರಥಿ ನನ್ನನ್ನು ಕಟ್ಟಿಕೊಂಡು ನಿಮಗೇನು ಸುಖ? ಮನೆಗೊಂದು ಮಗು ಬೇಡವೇ? ಇನ್ನೊಂದು ಮದುವೆಯಾಗಿ" (ಯು.ಆರ್.ಅನಂತಮೂರ್ತಿ, ಸಂಸ್ಕಾರ, ೧೯೬೫, ಪುಟ ೭) ಎಂದು ಹೇಳಿದರೂ ಆಚಾರ್ಯರು ಅದನ್ನು ನಿರಾಕರಿಸುತ್ತಾರೆ. ಹೆಂಡತಿ ರೋಗಿಯಾಗಿದ್ದರಿಂದ ನಾನು ಇನ್ನಷ್ಟು ಹದವಾದೆ ಎಂದು ಆಚಾರ್ಯರು ತಮ್ಮ ಸ್ಥಿತಿಯ ಬಗ್ಗೆ ಸಂತೋಷಪಡುತ್ತಾರೆ. ಆದರೆ ಚಂದ್ರಿಯನ್ನು ಕೂಡಿದ ನಂತರ ತನ್ನ ಹೆಂಡತಿಯ

ಬತ್ತಿದ ಎದೆಯನ್ನು ಕಂಡು ಮೊದಲ ಬಾರಿಗೆ ಅಸಹ್ಯಪಟ್ಟುಕೊಳ್ಳುತ್ತಾರೆ. ಮೊದಲ ಬಾರಿಗೆ ಆಚಾರ್ಯರಿಗೆ ಸುಂದರ-ಅಸುಂದರ ಕಲ್ಪನೆಯ ವ್ಯತ್ಯಾಸ ಗೊತ್ತಾಗತೊಡಗುತ್ತದೆ. ಸ್ತ್ರೀ ಸೌಂದರ್ಯವೆಲ್ಲ ನಾರಾಯಣನ ಪಾದ ಸೇವೆಯನ್ನು ಮಾಡುವ ಲಕ್ಷ್ಮಿಯದ್ದು, ರತಿಯೆಲ್ಲ ವಸ್ತ್ರಾಪಹರಣದ ಕೃಷ್ಣನದ್ದು ಎಂದು ಕೊಂಡಿದ್ದ ಆಚಾರ್ಯರಿಗೆ ಚಂದ್ರಿಯನ್ನು ಕೂಡಿದ ನಂತರ ಅವೆಲ್ಲದರಲ್ಲಿ ಒಂದು ಪಾಲು ತನಗೂ ಬೇಕೆನ್ನುವ ಭಾವ ಮೂಡಿದೆ. ರೋಗಗ್ರಸ್ತ ಹೆಂಡತಿ ತನ್ನ ಸಾತ್ವಿಕತೆಯ ಯಜ್ಞಭೂಮಿ ಎಂದು ತಿಳಿದು ಆಚಾರ್ಯರು ಮೋಕ್ಷದ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಆದರೆ ಚಂದ್ರಿಯನ್ನು ಕೂಡಿದ ನಂತರ ನಿಷ್ಕಾಮ ಕರ್ಮದ ಜೀವನ ನಡೆಸಲು ತನಗೆ ತಾಕತ್ತುಂಟೋ ಇಲ್ಲವೋ ಎಂದು ದ್ವಂದ್ವಕ್ಕೊಳಗಾಗುತ್ತಾರೆ.

"ಚಂದ್ರಿಯಂಥ ಚೆಲುವೆ, ಗಟ್ಟಿಗೆ, ಒಳ್ಳೆಯ ಹೆಂಗಸು ಈ ನೂರು ಮೈಲಿಯಲ್ಲಿ ಇದ್ದಳು ಎಣಿಸಿ ಬಿಡಿ ಇದ್ದರೆ ಜಾತಿ ಬಿಟ್ಟು ಬಿಡುವೆ ಸೂಳೆಯಾದರೆ ಏನಯ್ಯ ನಾರಣಪ್ಪನಿಗೆ ಅವಳು ಹೆಂಡತಿಗಿಂತ ಹೆಚ್ಚಾಗಿ ನಡಕೊಂಡಳೊ ಇಲ್ಲವೊ ಹೇಳಿ ನೋಡುವ, ಅವನು ಕುಡಿದು ವಾಂತಿ ಮಾಡಿಕೊಂಡರೆ ಬಾಚಿದಳು. ಅಲ್ಲದೆ ನಮ್ಮ ವಾಂತಿನೂ ಬಾಚಿದಳಲ್ಲಯ್ಯ! ಅರ್ಧರಾತ್ರಿ ಅವನು ಬಂದು ಎಬ್ಬಿಸಲಿ ತುಟಿ ಪಿಟಿಕ್ಕೆನ್ನದೆ ನಗ್ತ ನಗ್ತ ಅಡಿಗೆ ಮಾಡಿ ಬಡಿಸ್ತಿದ್ದಳು. ಯಾವ ಬ್ರಾಹ್ಮಣ ಹೆಂಗಸು ಅಷ್ಟು ಮಾಡ್ತಾಳಯ್ಯ? ಎಲ್ಲ ಪಿರಿ ಪಿರಿ ಮುಂಡೇರು ಥತ್" (ಯು.ಆರ್.ಅನಂತಮೂರ್ತಿ, ಸಂಸ್ಕಾರ, ೧೯೬೫, ಪುಟ ೬೩) ಎನ್ನುವ ಶ್ರೀಪತಿಯ ಮಾತಿನಂತೆ ಚಂದ್ರಿ ಅಗ್ರಹಾರದ ಪುರುಷರಿಗೆ ಸ್ಫೂರ್ತಿ ಸೆಲೆಯಾಗಿದ್ದಾಳೆ. ಇಂತಹ ಚಂದ್ರಿ ಆಚಾರ್ಯರ ಜೊತೆಗೆ ಕೂಡಿದ ನಂತರ ಧನ್ಯತೆಯನ್ನು ಅನುಭವಿಸುತ್ತಾಳೆ. ಈ ಕೂಡುವಿಕೆಯನ್ನು ತನ್ನ ಬಾಳಿಗೆ ಅಕಸ್ಮಾತ್ತಾಗಿ ನುಗ್ಗಿ ಬಂದ ಅದೃಷ್ಟವೆಂದೆ ಆಕೆ ಭಾವಿಸುತ್ತಾಳೆ. ಚಂದ್ರಿ ನಾರಣಪ್ಪನ ಶವಸಂಸ್ಕಾರ ಮುಗಿಸಿ ಬದುಕಲು ಯಾವ ಗೊಂದಲವಿಲ್ಲದೆ ಕುಂದಾಪುರಕ್ಕೆ ಹೋಗುತ್ತಾಳೆ. ಪ್ರಾಣೇಶಾಚಾರ್ಯ ಮತ್ತು ಚಂದ್ರಿಯ ಸಂಬಂಧವು ಇಬ್ಬರಲ್ಲೂ ವಿರೋಧಾಭಾಸವನ್ನು ಹುಟ್ಟು ಹಾಕುತ್ತದೆ. ಮೊದಲ ಬಾರಿಗೆ ಹೆಣ್ಣಿನ ಸಂಗ ಮಾಡಿದ್ದ ಪ್ರಾಣೇಶಾಚಾರ್ಯರಿಗೆ ಇದರಿಂದ ಸಂತೋಷವಾದರೂ ಮುಂದೇ ತಾವು ನಿಷ್ಕಾಮ ಕರ್ಮ ಕೈಗೊಳ್ಳಲು ಸಾಧ್ಯವಾಗುವುದಿಲ್ಲವೆಂಬ ಗೊಂದಲವಿದೆ. ಆದರೆ ಪ್ರಾಣೇಶಾಚಾರ್ಯರಂತಹ ಸಾತ್ವಿಕ ಮನುಷ್ಯನನ್ನು ಕೂಡಿದ ಧನ್ಯತೆ ಚಂದ್ರಿಗಿದೆ. ಆಕೆಗೆ ನಿಶ್ಚಿತವಾದ ಬದುಕಿನ ಆದರ್ಶ ಇಲ್ಲವಾದ್ದರಿಂದಲೇ ಯಾವುದೇ ಗೊಂದಲವಿಲ್ಲದ ಬದುಕನ್ನು ಚಂದ್ರಿ ಆರಿಸಿಕೊಳ್ಳುತ್ತಾಳೆ. ಲಚ್ಚಿಯಂತೆ ಚಂದ್ರಿ ಕೆಳಜಾತಿಗೆ ಸೇರಿದ್ದರೂ ಪುರುಷರಿಗೆ ಸ್ಫೂರ್ತಿಯ ಚಿಲುಮೆಯಾಗುತ್ತಾಳೆ. ಕತ್ತಲಿನ ಸುಖಕ್ಕಾಗಿಯೇ ದೇವರು

ಚಂದ್ರಿ ಲಚ್ಚಿಯಂತಹವರನ್ನು ಸೃಷ್ಟಿಸಿದ್ದಾನೆ ಎಂದು ಪುರುಷರು ಭಾವಿಸಿ ಕತ್ತಲಿನಲ್ಲಿ ಸುಖ ಪಡೆದು ಹಗಲಿನಲ್ಲಿ ದ್ವಂದ್ವಕ್ಕೊಳಗಾಗುತ್ತಾರೆ.

"ಬೆಳ್ಳಿ ಹೊಲತಿಯಾದರೇನಂತೆ? ನಾರಣಪ್ಪ ಹೇಳುವುದಿಲ್ಲವೆ ಕಾಳಿಯಾದರೇನು? ಬೋಳಿಯಾದರೇನು? ಬೆಳ್ಳಿ ಕಾಳಿಯೂ ಅಲ್ಲ, ಬೋಳಿಯೂ ಅಲ್ಲ, ಬಚ್ಚ ಗಲ್ಲದ, ಬತ್ತಿದ ಮೊಲೆಯ ಬೇಳೆ ಹುಳಿ ವಾಸನೆ ಬರುವ ಬಾಯಿಯ ಯಾವ ಬ್ರಾಹ್ಮಣ ಹುಡುಗಿ ಅವಳಿಗೆ ಸಮ? ಕೈಗೆ ತೊಡೆಗೆ ಭರ್ತಿಯಾಗಿ ಸಿಗುವ, ಮರಳಿನಲ್ಲಿ ಮಣ್ಣಿನಲ್ಲಿ ಎಣೆಯಾಡುವ ಹಾವಿನಂತೆ ತನ್ನ ಜೊತೆ ಹೊರಳುವ ಬೆಳ್ಳಿಗೇನು ಕೊರತೆ?" (ಯು.ಆರ್.ಅನಂತಮೂರ್ತಿ, ಸಂಸ್ಕಾರ, ೧೯೬೫, ಪುಟ ೬೫) ಎಂದು ಮದುವೆಯಾಗಿದ್ದರೂ ಶ್ರೀಪತಿ, ಬೆಳ್ಳಿಯಂತಹವಳ ಸಹವಾಸ ಮಾಡಿದ್ದಾನೆ. ಅನಸೂಯ ತನ್ನ ಅಳಿಯ ಶ್ರೀಪತಿಗೆ ಬೆಳ್ಳಿಯಂತಹ ವೇಶ್ಯೆಯರ ಸಂಪರ್ಕ ಇದೆಯೆಂದು ತಿಳಿದು ಆತನಿಗೆ ಬುದ್ಧಿ ಕಲಿಸಲು ಮುಂದಾಗುತ್ತಾಳೆ. "ನಿನ್ನ ಗಂಡನಿಗೆ ಒಪ್ಪ ಬೇಡ ಹೀಗೆ ತೊಡೆಯನ್ನು ಗಂಡು ಹಾಕಿಕೊಂಡು ಕೌಂಚಿ ಮಲಗಿ ಬಿಡು ಬುದ್ಧಿ ಬರಲಿ" (ಯು.ಆರ್.ಅನಂತಮೂರ್ತಿ, ಸಂಸ್ಕಾರ, ೧೯೬೫, ಪುಟ ೬೬)ಎಂದು ಮಗಳಿಗೆ ಹೇಳಿ ಕೊಡುತ್ತಾಳೆ. ತಾಯಿಯ ಮಾತು ಕೇಳಿದ ಮಗಳು ಲೀಲಾವತಿ ಗಂಡ ರಾತ್ರೆ ತನ್ನನ್ನು ಬಳಸಲು ಬಂದರೆ 'ಚೂಟಿದರು, ಕಚ್ಚಿದರು' ಎಂದು ಹೇಳುತ್ತಾ ತಾಯಿಯ ಪಕ್ಕದಲ್ಲಿ ಬಂದು ಆರಂಭಿಸಿ ಗಂಡನ ಜೊತೆಗೆ ದೈಹಿಕ ಸಂಪರ್ಕವನ್ನು ಕಳೆದುಕೊಳ್ಳುತ್ತಾಳೆ. ಗಂಡನ ಅನೈತಿಕತೆಯ ವಿರುದ್ಧ ಲೀಲಾವತಿ ಮಾಡುವ ಈ ಕ್ರಿಯೆಯು ಸಹ ಪ್ರತಿಭಟನೆಯ ಒಂದು ರೂಪವೇ ಆಗಿದೆ. ಹೋರಾಟ ಮಾಡಿ, ಬಹಿರಂಗವಾಗಿ ಧಿಕ್ಕಾರಗಳನ್ನು ಕೂಗಿದರೆ ಮಾತ್ರ ಅದು ಪ್ರತಿಭಟನೆಯಾಗುವುದಿಲ್ಲ. ಲೀಲಾವತಿಯಂತೆ ಮೌನವಾಗಿಯೂ ಮಾಡಬಹುದು.

'ಅವಸ್ಥೆ' ಸ್ವಾತಂತ್ರ್ಯೋತ್ತರ ಭಾರತದ ರಾಜಕಾರಣದ ಒಂದು ಮಾದರಿಯನ್ನು ಕಟ್ಟಿಕೊಡುತ್ತದೆ. ರಾಜಕಾರಣದ ಜೊತೆ ಜೊತೆಗೆ ಮನುಷ್ಯನ ದ್ವಂದ್ವಗಳನ್ನು ಕಟ್ಟಿಕೊಡುತ್ತದೆ. ಕೃಷ್ಣಪ್ಪನ ಅಪ್ಪನ ಭೀಕರ ಕೊಲೆ, ಅಣ್ಣಾಜಿಯ ಕೊಲೆ ನರಸಿಂಹಭಟ್ಟನ ದೌರ್ಜನ್ಯ, ಮಹಿಳೆಯ ಮೇಲೆ ಪೋಲೀಸ್ ಅಧಿಕಾರಿಯ ಅತ್ಯಾಚಾರ ಇವೆಲ್ಲಾ ಕೃಷ್ಣಪ್ಪನ ಹೋರಾಟವನ್ನು ತೀವ್ರ ಮಾಡುತ್ತದೆ. ಎಂತಹ ಸಮಾಜವನ್ನು ತನ್ನ ಹೋರಾಟದಿಂದ ಸೃಷ್ಟಿಸಬೇಕೆಂದು ಕೃಷ್ಣಪ್ಪ ಭಾವಿಸಿದ್ದನೋ ಅಂತಹದ್ದನ್ನು ತನ್ನ ಕುಟುಂಬದಲ್ಲಿಯೇ ನಿರ್ಮಿಸಲು ವಿಫಲನಾಗುತ್ತಾನೆ. ಎಲ್ಲಾ ಬಗೆಯ ಶೋಷಣೆ, ದೌರ್ಜನ್ಯಗಳಿಂದ ಮುಕ್ತವಾದ ಸಮಾಜವನ್ನು ನಿರ್ಮಿಸಬೇಕೆಂಬ ಕನಸು ಕಾಣುವ

ಕೃಷ್ಣಪ್ಪ ಕೌಟುಂಬಿಕ ನೆಲೆಯಲ್ಲಿ ಹೆಂಡತಿಯನ್ನು ಶೋಷಿಸುತ್ತಾನೆ. "...ಹೆಂಡತೀಂತ ಒಬ್ಬಳು ಇದ್ದಾಳೆ. ಆದರೆ ಅವಳನ್ನು ನಾನು ಹೊಡೀತೀನಿ" (ಯು.ಆರ್.ಅನಂತಮೂರ್ತಿ, ಅವಸ್ಥೆ, ೧೯೭೮, ಪುಟ ೧೪೫-೧೪೬) ಎಂದು ಬಹಿರಂಗವಾಗಿ ಹೇಳಿಕೊಳ್ಳುತ್ತಾನೆ. ಜೊತೆಗೆ ಹೆಂಡತಿಯಾದ ಸೀತೆಯು ಕೂಡ ತನ್ನ ಮತ್ತು ಗಂಡನ ನಡುವೆ ಒಂದು ದೂರವನ್ನು ಕಾಯ್ದುಕೊಂಡು ಬಂದಿದ್ದಾಳೆ. "ದೊಡ್ಡ ಮನುಷ್ಯನ ಹೆಂಡತಿಯಾಗಿರೋ ಕಷ್ಟ ನಿಮಗೇನು ಗೊತ್ತು? ಎಲ್ಲರೂ ನನ್ನ ಎಷ್ಟು ಕೀಳಾಗಿ ನೋಡ್ತಾರೇಂತ ನನಗೆ ಗೊತ್ತಿಲ್ವ?" (ಯು.ಆರ್.ಅನಂತಮೂರ್ತಿ, ಅವಸ್ಥೆ, ೧೯೭೮, ಪುಟ ೧೪೭) ಎಂದು ಮಹೇಶ್ವರಯ್ಯನವರಿಗೆ ಹೇಳುವ ಮಾತಿನಲ್ಲಿ ತಮ್ಮಿಬ್ಬರ ನಡುವಿನ ಹೊಂದಾಣಿಕೆ ಕಷ್ಟ ಸಾಧ್ಯ ಎಂಬ ಅಂಶವಿದೆ. ಹೆಂಡತಿಯ ಜೊತೆ ಯಾವಾಗಲೂ ಕುಡಿದ ಕೃಷ್ಣಪ್ಪ ಇರುವುದರಿಂದಲೇ ಕೃಷ್ಣಪ್ಪನಿಗೆ ಆಕೆಯೊಡನೆ ಹೊಂದಾಣಿಕೆ ಸಾಧ್ಯವಾಗುವುದಿಲ್ಲ. ಇದರಿಂದಾಗಿ ಆತನ ಗಮನ ಲೂಸಿನಾ, ಗೌರಿ ದೇಶಪಾಂಡೆಯವರ ಕಡೆ ಹರಿಯುತ್ತದೆ. ತಾನು ಕುಡಿಯದೆ ಸಂಭೋಗಿಸಿದ ಹೆಣ್ಣು ಲೂಸಿನಾ ಎಂದು ಅವನೇ ಒಪ್ಪಿಕೊಳ್ಳುತ್ತಾನೆ. ಕೃಷ್ಣಪ್ಪನಿಗೆ ಹಿತವಾಗುವ ಹಾಗೆ ಲೂಸಿನಾ ತನ್ನನ್ನು ಅರ್ಪಿಸಿಕೊಂಡಿದ್ದರಿಂದ ಕೃಷ್ಣಪ್ಪನಿಗೆ ಹಿಡಿಸುತ್ತಾಳೆ. ಸೀತೆಯಲ್ಲಿ ಈಕೆಯಂತಹ ಚಾಕಚಕ್ಯತೆ ಇಲ್ಲದೆ ಇರುವುದರಿಂದ ಆಕೆಯನ್ನು ದೂರವಿಟ್ಟಿದ್ದಾನೆ. ಕೃಷ್ಣಪ್ಪನ ವ್ಯಕ್ತಿತ್ವಕ್ಕೆ ಗೌರಿ ದೇಶಪಾಂಡೆ ವ್ಯಕ್ತಿತ್ವ ಹೊಂದಾಣಿಕೆಯಾದರೂ, ಎಲ್ಲಾ ವಿಚಾರಗಳನ್ನು ಆಕೆಯ ಜೊತೆಯಲ್ಲಿ ಕೃಷ್ಣಪ್ಪ ಚರ್ಚಿಸುತ್ತಿದ್ದರೂ, ಆಕೆ ಒಂದು ಗಂಡಿಗಷ್ಟೇ ತನ್ನನ್ನು ಕಟ್ಟಿ ಹಾಕಬೇಕೆಂಬ ಸಾಂಪ್ರದಾಯಿಕ ನೆಲೆಯನ್ನು ತಿರಸ್ಕರಿಸುವುದರಿಂದ ಆಕೆಯೊಡನೆ ಕೃಷ್ಣಪ್ಪ ತನ್ನ ಜೀವನವನ್ನು ಮುಂದುವರೆಸಲು ಸಾಧ್ಯವಾಗುವುದಿಲ್ಲ. ಕೃಷ್ಣಪ್ಪನ ದ್ವಂದ್ವ ಅಸಹಾಯಕ ವ್ಯಕ್ತಿತ್ವದಿಂದಾಗಿಯೇ ಅವನ ಕುಟುಂಬವು ಛಿದ್ರವಾಗಿದೆ. ಸಾಮಾಜಿಕವಾಗಿ ಇರುವ ಅಸಹನೆಯು ಕೃಷ್ಣಪ್ಪನ ಕುಟುಂಬದ ಮೇಲೆ ಪ್ರತಿಫಲಿತವಾಗಿದೆ. "ಹೌದು ಆದರೆ ನಾನೇ ಅವಳನ್ನು ಹೆಚ್ಚು ಡಿಸ್ಟ್ರಾಯ್ ಮಾಡ್ತಿದೀನಿ ಅನ್ನಿಸತ್ತೆ" (ಯು.ಆರ್.ಅನಂತಮೂರ್ತಿ, ಅವಸ್ಥೆ, ೧೯೭೮, ಪುಟ ೧೭೬) ಎಂದು ಕೃಷ್ಣಪ್ಪ ಹೇಳಿಕೊಳ್ಳುವ ಮೂಲಕ ಅವನಲ್ಲಿರುವ ಅಪರಾಧಿ ಭಾವ ಅನಾವರಣಗೊಳ್ಳುತ್ತದೆ. "ನಾವು ಇಡಿಯಾಗಿ ಉಳಿಯೋದೇ ಇಲ್ಲಾಂತ ಅನ್ನಿಸತ್ತೆ ಗೌರಿ ಕೃಷ್ಣಪ್ಪ ಬಹಳ ಕಷ್ಟ ಪಡುತ್ತ ತನ್ನ ಸದ್ಯದ ಪಾಡನ್ನು ಹೇಳಿಕೊಳ್ಳುಲು ನೋಡಿದ ತನ್ನ ಹೃದಯವನ್ನು ಸೂಚಿಸುವಂತೆ ಎದೆಯನ್ನು ಮುಟ್ಟಿ ಹೇಳಿದ: 'ಇಲ್ಲೂ ನನಗೆ ಇಂಟಿಗ್ರಿಟಿ ಸಾಧ್ಯ ಆಗ್ತ ಇಲ್ಲ' ಕೈಯನ್ನು ಹೊರ ಚಾಚಿ ರಾಜಕೀಯ ಪ್ರಪಂಚವನ್ನು ಸೂಚಿಸಲು ಯತ್ನಿಸುತ್ತ ಹೇಳಿದ: 'ಅಲ್ಲೂ ನನಗೆ ಇಂಟಿಗ್ರಿಟಿ ಸಾಧ್ಯ ಆಗ್ತಾ ಇಲ್ಲ'. ಹೀಗೆ ಹೇಳಿದ ಮೇಲೆ

ಹಗುರವಾಗಿ ನಿಟ್ಟುಸಿರಿಟ್ಟು ಈ ಕೋಲನ್ನು ಆತುಕೊಂಡು ನಿಲ್ಲೋದು ಸಾಧ್ಯವ ಅಂತ ಪ್ರಯತ್ನಿಸೋದಷ್ಟೇ ಸದ್ಯ ನಾನು ಮಾಡಬಹುದಾದ್ದು" (ಯು.ಆರ್.ಅನಂತಮೂರ್ತಿ, ಅವಸ್ಥೆ, ೧೯೭೮, ಪುಟ ೧೭೬) ಎನ್ನುವ ಕೃಷ್ಣಪ್ಪನ ಮಾತಿನಲ್ಲಿ ಅಸಹಾಯಕತೆ ತುಂಬಿದೆ. ಸಂಕೀರ್ಣ ವ್ಯಕ್ತಿತ್ವದ ಕೃಷ್ಣಪ್ಪ ತನ್ನ ವೈಯಕ್ತಿಕ ಜೀವನ ಸರಿ ಮಾಡಿಕೊಳ್ಳದೆ ಸಾಮಾಜಿಕ ಸುಧಾರಣೆಗೆ ಮುಂದಾಗಿ ಎರಡರಲ್ಲೂ ಅಸ್ತಿತ್ವ ಕಂಡುಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ. ಸೀತೆ, ಲೂಸಿನಾ, ಗೌರಿದೇಶಪಾಂಡೆ ಯಂತಹವರನ್ನು ಬೇಕಾದ ಹಾಗೆ ಬಳಸಿಕೊಂಡ ಕೃಷ್ಣಪ್ಪ ಕೊನೆಗೆ ಅವರಿಗೂ ಬೇಡದವನಾಗಿದ್ದಾನೆ. ಕೃಷ್ಣಪ್ಪನಿಗೆ ಉಂಟಾದ ವಿಫಲತೆಯ ಅರಿವನ್ನು ಈ ಮಹಿಳೆಯರು ತಮ್ಮದೇ ಆದ ರೀತಿಯಲ್ಲಿ ಮೂಡಿಸುತ್ತಾರೆ.

ಮಂಜುನಾಥ ದೇವಾಲಯದೊಳಗೆ ಹರಿಜನರಿಗೆ ಪ್ರವೇಶ ಮಾಡಿಸುವ ಆದರ್ಶವನ್ನು 'ಭಾರತೀಪುರ'ದ ಜಗನ್ನಾಥ ಹೊಂದಿದ್ದಾನೆ. ಆದರೆ ಇದಕ್ಕೆ ಸಾಮಾಜಿಕವಾಗಿ ವಿರೋಧಗಳು ಇದ್ದಂತೆ ಜಗನ್ನಾಥ ಕುಟುಂಬದ ಒಳಗೂ ವಿರೋಧವಿದೆ. ಜಗನ್ನಾಥನ ಚಿಕ್ಕಿ, ಹೊಲೆಯರು ದೇವಸ್ಥಾನವನ್ನು ಪ್ರವೇಶಿಸುವುದನ್ನು ತಿರಸ್ಕರಿಸುತ್ತಾರೆ. "ಅವಕ್ಕೆ ಹಾಸಕ್ಕೆ ಹೊದೆಯೋಕ್ಕೆ ಬೇಕಾದಷ್ಟು ಇರೋವಾಗ ದೇವಸ್ಥಾನದೊಳಗೆ ಹೋಗಿ ಅವಕ್ಕೇನು ಕಡೀ ಬೇಕಾಗಿದೆ ಹೇಳಿ" (ಯು.ಆರ್.ಅನಂತಮೂರ್ತಿ, ಭಾರತೀಪುರ, ೨೦೦೮, ಪುಟ ೯೯) ಎಂದು ನೇರವಾಗಿ ಹೊಲೆಯರ ದೇವಸ್ಥಾನದ ಪ್ರವೇಶವನ್ನು ವಿರೋಧಿಸುತ್ತಾಳೆ. ಅಲ್ಲದೆ ಜಗನ್ನಾಥನ ಮನೆಯವರು ಬಹಳ ಹಿಂದಿನದಿಂದಲೂ ಮಂಜುನಾಥಸ್ವಾಮಿಯ ಸೇವೆಯನ್ನು ಮಾಡಿಕೊಂಡು ಬಂದಿರುವುದನ್ನು ಹೊಲೆಯ ದೇವಾಲಯದ ಪ್ರವೇಶದಿಂದ ಜಗನ್ನಾಥ ಹಾಳು ಮಾಡುತ್ತಾನೆಂಬ ಭಯ ಕೂಡ ಅವಳನ್ನು ಕಾಡಿದೆ. "ಏನೇ ಮಾಡೋ ಜಗಣ್ಣ, ಮನೆತನದ ಮರ್ಯಾದೆ ಮರೀಬೇಡ ಸೂರ್ಯನ್ನ ತಿನ್ನಕ್ಕೆ ಹೋಗಿ ಹನುಮಂತ ಮೂತಿ ಸುಟ್ಟುಕೊಂಡನಂತೆ ರಾಯರನ್ನ ಕೇಳು ಹೇಳ್ತಾರೆ. ನೀನಿನ್ನೂ ಕೂಸು ಮೂರು ದಿನ ನಿನಗೆ ಎಚ್ಚರಾನೇ ಬರ್ಲಿಲ್ಲ ಅಡಿಗರು ತೊಡೆ ಮೇಲೆ ಮಲಗಿಸಿಕೊಂಡು ಮೃತ್ಯುಂಜಯ ಜಪ ಮಾಡ್ತ ಕೂತರು ನಿನ್ನಮ್ಮ ಎದುರು ಕೂತು ಕಣ್ಣೀರಿಡ್ತ ದೇವರನ್ನ ಬೇಡಿಕೊಂಡ್ರು; ಒಬ್ನೇ ಮಗ ಉಳಿಸು ಅಂತ–ದೇವರ ಕೋಣೆ ಎದುರು ನಂಗಿನ್ನೂ ಕಣ್ಣಿಗೆ ಕಟ್ಟಿದ ಹಾಗಿದೆ. ಮನೇಲಿ ಎಲ್ರೂ ಉಪವಾಸ. ನಿಂಗೆ ಮೈ ತುಂಬ ಚಿಟಿಕೆ ಹಾಕಿ ಎಷ್ಟು ಸುಟ್ಟರೂ ಗ್ಯಾನ ಬರ್ಲಿಲ್ಲ. ಕೊನೆಗೆ ನಿನ್ನಮ್ಮ ಮಂಜುನಾಥ ಸ್ವಾಮಿಗೆ ಬಂಗಾರದ ಕಿರೀಟ ಮಾಡಿಸಿ ಕೊಡ್ತೀನೀಂತ ಹರಕೆ ಹೇಳಿಕೊಂಡ ತಕ್ಷಣ ನೀನು ಕಣ್ಣು ಬಿಟ್ಟೆ, ಇದನ್ನೆಲ್ಲ ನೀನು ಈಗ ಮರೆತು ಬಿಡೋದು ಸರಿಯೋ?"

(ಯು.ಆರ್.ಅನಂತಮೂರ್ತಿ, ಭಾರತೀಪುರ, ೨೦೦೮, ಪುಟ ೧೦೦) ಎನ್ನುವ ಚಿಕ್ಕಿ ಮಾತಲ್ಲಿ ಮಂಜುನಾಥಸ್ವಾಮಿಯಿಂದಲೇ ಜೀವದಾನ ಪಡೆದ ಜಗನ್ನಾಥ ಇಂದು ಆ ಸ್ವಾಮಿಯ ವಿರುದ್ಧ ಹೋಗುವುದು ಸರಿಯಲ್ಲ ಎಂಬ ಕಾಳಜಿ ಇದೆ. ಪರಂಪರಾನುಗತ ಮೌಲ್ಯವನ್ನೇ ಬದುಕಾಗಿ ಸ್ವೀಕರಿಸಿರುವ ಚಿಕ್ಕಿ ಜಗನ್ನಾಥನ ಈ ನಡೆ ಅಸಂಗತವಾಗಿ ತೋರಿದೆ ಪರಂಪರಾನುಗತ ನಂಬಿಕೆಗಳ ವಿರುದ್ಧ ಜಗನ್ನಾಥ ಹೋದರೆ ಸ್ವಾಮಿಯ ಕೋಪಕ್ಕೆ ಆತ ಎಲ್ಲಿ ತುತ್ತಾಗುವನೋ ಎಂಬ ಭಯವೂ ಆಕೆಯಲ್ಲಿದೆ. ತನ್ನ ಎಲ್ಲಾ ಪ್ರಯತ್ನಗಳಿಗೂ ವಿರೋಧ ತೋರಿಸುವ ಚಿಕ್ಕಿಯ ವರ್ತನೆಗಳನ್ನು ಜಗನ್ನಾಥ ಆಕೆಯ ವ್ಯಕ್ತಿತ್ವದ ದೌರ್ಬಲ್ಯ ಎಂದು ಪರಿಗಣಸದೆ ವ್ಯವಸ್ಥೆಯ ಕುರೂಪತೆ ಎಂಬುದನ್ನು ಸರಿಯಾಗಿ ಊಹಿಸುತ್ತಾನೆ. ಚಿಕ್ಕಿಯ ವಿರೋಧದ ನಡುವೆಯೂ ಜಗನ್ನಾಥ ಸಾಲಿಗ್ರಾಮವನ್ನು ಹೊಲೆಯರ ಕೈಯಲ್ಲಿ ಮುಟ್ಟಿಸುತ್ತಾನೆ. ಇದರಿಂದ ಸಾಲಿಗ್ರಾಮ ಮೈಲಿಗೆಯಾಗಿದೆ ಎಂದು ಭಾವಿಸಿದ ಚಿಕ್ಕಿ ದುಃಖಕ್ಕೊಳಗಾಗುತ್ತಾಳೆ. ಈ ಎಲ್ಲಾ ಸಂದರ್ಭಗಳು ಚಿಕ್ಕಿಯ ನೆಮ್ಮದಿಯನ್ನು ಕೆಡಿಸುತ್ತವೆ. “ಹೇಳ್ದೆ ಅವರು, ಅಡಿಗರಿಗೆ ಹೇಳಿಕಳಿಸಿದ್ದಾರಂತೆ ಸಾಲಿಗ್ರಾಮನ್ನ ಶುದ್ಧ ಮಾಡಿ ಪೂಜೆ ಮಾಡಿ ಹೋಗಿಂತ ಅದರ ತೀರ್ಥವಿಲ್ಲದೆ ತಾನು ಹೇಗೆ ಊಟ ಮಾಡ್ಲಿ ಅಂತ ಅವರು ಅಳ್ತಾರೆ ನಂಗವರನ್ನ ನೋಡಿದ್ರೆ ಪಾಪ ಅನ್ನಿಸತ್ತೆ. ನಾಳೆ ಗೋಪಾಲ ಬರ್ತಾನಂತಲ್ಲ ಅದೇ ಅವರಿಗೆ ನೆಮ್ಮದಿ” (ಯು.ಆರ್.ಅನಂತಮೂರ್ತಿ, ಭಾರತೀಪುರ, ೨೦೦೮, ಪುಟ ೧೪೮) ಎನ್ನುವ ಮಾತಿನಲ್ಲಿ ಪರಂಪರಾನುಗತ ಮೌಲ್ಯಕ್ಕೆ ತಮ್ಮನ್ನು ತಾವು ಅರ್ಪಿಸಿಕೊಂಡ ಚಿಕ್ಕಿಯ ವ್ಯಕ್ತಿತ್ವ ಗೋಚರಿಸುತ್ತದೆ. ಪರಂಪರಾನುಗತ ಮೌಲ್ಯಕ್ಕೆ ಒಮ್ಮೆ ವ್ಯಕ್ತಿ ಬದ್ಧನಾದರೆ ಸಾಕು ಅವನನ್ನು ಪೂರ್ಣವಾಗಿ ಆವರಿಸುತ್ತದೆ. ಕೊನೆಗೆ ಆ ವ್ಯಕ್ತಿಯ ಬದುಕನ್ನು ಪರಂಪರಾನುಗತ ಮೌಲ್ಯ ನಿಯಂತ್ರಿಸುತ್ತದೆ ಎಂಬುದಕ್ಕೆ ಚಿಕ್ಕಿ ಉದಾಹರಣೆಯಾಗಿದ್ದಾಳೆ.

ಆಧುನಿಕ ವಿದ್ಯಾಭ್ಯಾಸ ಪಡೆದ ಮಾರ್ಗರೇಟ್ ಆಧುನಿಕ ಮನೋಭಾವವನ್ನು ಒಳಗೊಂಡವಳಾಗಿದ್ದಾಳೆ. ತನ್ನ ತಂದೆ ತಾಯಿಯರ ದಾಂಪತ್ಯದಿಂದ ರೋಸಿ ಹೋಗಿರುವ ಮಾರ್ಗರೇಟ್‌ಗೆ ಮದುವೆಯಲ್ಲಿ ನಂಬಿಕೆ ಇಲ್ಲ. ಇಂಗ್ಲೆಂಡ್‌ನಲ್ಲಿ ಒಂಟಿಯಾಗಿ ಜೀವಿಸುತ್ತಿರುವ ಮಾರ್ಗರೇಟ್ ಜಗನ್ನಾಥ್ ಮತ್ತು ಚಂದ್ರಶೇಖರ್ ಇಬ್ಬರ ನಡುವೆಯೂ ಸಂಬಂಧ ಇಟ್ಟುಕೊಂಡಿದ್ದಾಳೆ. ಚಂದ್ರಶೇಖರ್‌ನ ವಿಷಯವನ್ನು ಜಗನ್ನಾಥ್‌ಗೆ ಯಾವುದೇ ಮುಚ್ಚು ಮರೆ ಇಲ್ಲದೆ ಹೇಳುವ ಇವಳು ಆತನಲ್ಲಿ, ಚಂದ್ರಶೇಖರ್ ಬಗ್ಗೆ ಅಸೂಯೆಯೊಂದನ್ನು ಹುಟ್ಟು ಹಾಕಿದ್ದಾಳೆ. ಜಗನ್ನಾಥನ ಹುಳುಕುಗಳನ್ನು ರಾಯರಂತೆ ಮಾರ್ಗರೇಟ್ ನೇರವಾಗಿ ತಿಳಿಸುವ ಧೈರ್ಯ

ಹೊಂದಿದ್ದಾಳೆ. "ಜಗನ್ ನಿನ್ನ ನೊಬಿಲಿಟಿಗಿಂತ ಚಂದರ್‌ನ ಅಸೂಯೆಯೇ ಹೆಚ್ಚು ನಿಜ ಅನ್ನಿಸುತ್ತೆ One Cant Really Feel That You Are There ನಿನ್ನ ಅಪೂರ್ಣತೆಯ ಯಾತನೆ ನಾಟಕ ಅಂತ ಅನ್ನಿಸಬಹುದು: ಆದರೆ ಚಂದರ್ ಹೆಚ್ಚು ಸಫರ್ ಮಾಡ್ತಾನೆ. ನೋಡು ಅವನ ಕ್ರೌರ್ಯ ಇದೆಯಲ್ಲ, ಅದರಿಂದ ಅವ ನಿಜ ಆಗ್ತಾನೆ. Even his meanness.... but you are not enought of a man" (ಯು.ಆರ್.ಅನಂತಮೂರ್ತಿ, ಭಾರತೀಪುರ, ೨೦೦೮, ಪುಟ ೩೫) ಎನ್ನುವಂತಹ ಮಾತುಗಳು ಮಾರ್ಗರೇಟ್‌ಳಂತಹವರ ಬಾಯಿಂದ ಮಾತ್ರ ಬರಲು ಸಾಧ್ಯ. ಜಗನ್ನಾಥನ ಇಡೀ ವ್ಯಕ್ತಿತ್ವವನ್ನು ಈ ಮಾತುಗಳು ಅನಾವರಣ ಮಾಡುತ್ತದೆ. ಮಾರ್ಗರೇಟ್‌ಳನ್ನು ಮೊದಲು ಪಡೆದಿದ್ದ ಜಗನ್ನಾಥನಿಗೆ ಆಕೆ ಚಂದ್ರಶೇಖರನ ಜೊತೆಯಲ್ಲಿ ಸುಖದಿಂದಿದ್ದಾಳೆ ಎನ್ನುವ ಅಂಶವು ಜಗನ್ನಾಥ ಮಾಡ ಹೊರಟಿರುವ ಸಾಧನೆಯನ್ನು ಅಲುಗಾಡಿಸುವ ಪ್ರಯತ್ನ ಮಾಡುತ್ತದೆ. ಮಾರ್ಗರೇಟ್ ಮತ್ತು ಚಂದ್ರಶೇಖರ ಸಂಬಂಧವು ಜಗನ್ನಾಥನು ಕಾವೇರಿಯ ಮೇಲೆ ಮೋಹ ಬೆಳೆಸಿಕೊಳ್ಳಲು ಪರೋಕ್ಷವಾಗಿ ಕಾರಣವಾಗುತ್ತದೆ. ಮಾರ್ಗರೇಟ್ ತನ್ನ ತಂದೆ ತಾಯಿಯರ ರೀತಿಯ ಬದುಕು ತನ್ನದಾಗಬಾರದೆಂದು ತನ್ನ ಅಸ್ತಿತ್ವಕ್ಕಾಗಿ ಹೋರಾಟ ಮಾಡಿ ವರ್ತಮಾನದಲ್ಲಿ ಸುಖದಿಂದಿದ್ದಾಳೆ. ಆದರೆ ಜಗನ್ನಾಥ ವರ್ತಮಾನದಲ್ಲಿ ಇತಿಹಾಸವನ್ನು ಸೃಷ್ಟಿಸಿ ಸಾಧನೆಯನ್ನು ಮಾಡಬೇಕೆಂಬ ಉತ್ಸಾಹದಲ್ಲಿ ವರ್ತಮಾನದ ತನ್ನ ಬದುಕಿನಲ್ಲಿ ನೋವುಣ್ಣುತ್ತಿದ್ದಾನೆ. ತಾನು ಭಾರತದಲ್ಲಿ ಹೀಗೆ ನೋವುಣ್ಣುತ್ತಿದ್ದರೆ, ಆಕೆ ಇಂಗ್ಲೆಂಡಿನಲ್ಲಿ ಸುಖವಾಗಿದ್ದಾಳೆ ಎಂಬುದನ್ನು ಜಗನ್ನಾಥನಿಗೆ ಜೀರ್ಣಿಸಿ ಕೊಳ್ಳಲಿಕ್ಕಾಗದ ಸಂಗತಿಯಾಗಿದೆ. ವರ್ತಮಾನದ ಬದುಕಿನ ನೋವುಣ್ಣುತ್ತಿರುವ ಜಗನ್ನಾಥನಿಗಿಂತ, ವರ್ತಮಾನದ, ಬದುಕಿನಲ್ಲಿ ಸುಖದಲ್ಲಿರುವ ಮಾರ್ಗರೇಟ್‌ಳ ಬದುಕು ಹೆಚ್ಚು ಅಪ್ಯಾಯಮಾನವಾಗುತ್ತದೆ.

"ನಾಗಮಣಿ ನನ್ನ ಸೊಸೆ. ಶಿವಮೊಗ್ಗದಲ್ಲಿ ಲಾಯರ್ ಆಗಿದ್ದಾನಲ್ಲ ನನ್ನ ಮಗ– ಅವನ ಹೆಂಡತಿ. ಶಿವಮೊಗ್ಗದಲ್ಲಿ ಬಾಡಿಗೆ ಹೆಚ್ಚು, ಸಂಪಾದನೆ ಸಾಲದು, ಇಲ್ಲಿ ಮನೇಲಿ ನನ್ನ ಹೆಂಡತಿ ತೀರಿಹೋದ ಮೇಲೆ ಬರೋವ್ರಿಗೆ ಹೋಗೋವ್ರಿಗೆ ಮಾಡಿಹಾಕೋರು ಇಲ್ಲ. ನನ್ನ ಕಿರೇ ಮಗಳಿಗಿನ್ನೂ ಹತ್ತು ವರ್ಷ. ಆದ್ರಿಂದ ನಾಗಮಣಿ ಇಲ್ಲೆ ಇದ್ದಾಳೆ. ಏನು ಮಾಡೋದು ಹೇಳಿ. ನಮ್ಮದು ಪ್ರಖ್ಯಾತ ಶ್ರೋತ್ರಿಯ ಮನೆತನಾಂತ ಜನ ಹುಡುಕಿಕೊಂಡು ಇಲ್ಲಿಗೆ ಬರ್ತಾರೆ. ಒಂದೊಂದು ಸಾರಿ ಮನೇಲಿ ಹದಿನೈದು ಇಪ್ಪತ್ತು ಜನ ಯಾತ್ರಿಕರಿರ್ತಾರೆ. ಹಿರೇ ಮಗನ್ನ ಲೌಕಿಕಕ್ಕೆ ಬಿಟ್ಟಿದ್ದೇನೆ. ಇನ್ನೊಬ್ಬನ್ನ ವೈದಿಕ ಧರ್ಮಕ್ಕೆ ಹಚ್ಚಿದ್ದೇನೆ. ಶಂಕರನಿಗೆ ಎಲ್ಲ ಗೊತ್ತು. ಜ್ಯೋತಿಷ್ಯ,

ವೇದ, ಪೂಜಾವಿಧಿಗಳು ಎಲ್ಲ. ಪ್ರಾಚೀನವಾಗಿ ಬಂದದ್ದನ್ನ ಕೈ ಬಿಡಲಿಕ್ಕೆ ಆಗಲ್ವಲ್ಲ ಹೇಳಿ. ಅವನಿಗೆ ಮುಂದಿನ ಸಾರಿ ಮದುವೆ ಮಾಡಿದ ಮೇಲೆ ನಾಗಮಣಿನ್ನ ಅವಳ ಗಂಡನ ಹತ್ರ ಶಿವಮೊಗ್ಗಕ್ಕೆ ಕಳಿಸ್ತೇನೆ" (ಯು.ಆರ್.ಅನಂತಮೂರ್ತಿ, ಭಾರತೀಪುರ, ೨೦೦೮, ಪುಟ ೫೭) ಅಲ್ಲಿಯವರೆಗೂ ನಾಗಮಣಿ ಅಡಿಗೆ ಮನೆಯಲ್ಲಿ ರುಚಿಯಾದ ಕೂಳು ಬೇಯಿಸಲೆಂದೇ ಬದುಕಬೇಕಾಗಿದೆ. ಅರಳುತ್ತಿರುವ ತನ್ನ ಸೌಂದರ್ಯದ ಪರಿವೆ ಕೂಡ ನಾಗಮಣಿಗಿಲ್ಲ. ಆಕೆಯನ್ನು ಅಡುಗೆ ಮನೆಯಲ್ಲಿ ಕಟ್ಟಿ ಹಾಕಿರುವ ವ್ಯವಸ್ಥೆಗೂ ಆಕೆಯ ವಯೋಸಹಜವಾದ ವಾಂಛೆಗಳ ಅರಿವಿಲ್ಲ. ಯಾರಿಗೂ ತಿಳಿಯದಂತೆ ಲೈಂಗಿಕ ತುಡಿತಗಳ ಅಗ್ನಿಯಲ್ಲಿ ಉರಿಯುತ್ತಿದ್ದ ನಾಗಮಣಿ ತನ್ನ ಶುಷ್ಕವಾದ ಬದುಕಿನಿಂದ ಬೇಸರಗೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ವ್ಯವಸ್ಥೆಯ ಕಾರಣದಿಂದ ಜಡ್ಡುಗಟ್ಟಿ ಹೋದ ನಾಗಮಣಿಯ ಜೀವನದ ಶಕ್ತಿ ಅರಳಲು ಸಾಧ್ಯವಾಗದೆ ಮಧ್ಯದಲ್ಲಿಯೇ ಬಾಡಿ ಹೋಗುತ್ತದೆ. ವ್ಯವಸ್ಥೆಯ ಕ್ರೂರ ಬಂಧನವು ವ್ಯಕ್ತಿಯನ್ನು ವಿರೂಪಗೊಳಿಸುವುದಕ್ಕೆ ನಾಗಮಣಿ ಮತ್ತೊಂದು ಉದಾಹರಣೆಯಾಗಿ ನಿಲ್ಲುತ್ತಾಳೆ.

"ಅಷ್ಟೆಲ್ಲ ಮಡಿ ಮಾಡುವ ಅಕ್ಕು ಕೂಡ ಏನೂಂತ ಅಂದುಕೊಂಡಿದ್ದೀಯ? ಅವರಿಗೆ ಈ ಆಸುಪಾಸಿನಲ್ಲಿ ಯಾರು ಯಾರನ್ನ ಇಟ್ಟುಕೊಂಡಿದ್ದಾರೆ, ಯಾರು ಯಾರಿಗೆ ಬಸುರಾದರು ಎಲ್ಲಾ ಗೊತ್ತು. ಅವರ ಹಿತ್ತಲಿಗೆ ಬರೋ ಹೆಂಗಸರು ಎಲ್ಲವನ್ನೂ ಅಕ್ಕುಗೆ ಹೇಳಿ ಕೊಳ್ತಾರೆ. ಗಂಡಂದಿರನ್ನು ಹೇಗೆ ವಶಪಡಿಸಿಕೊಳ್ಳಬೇಕು ಅನ್ನೋ ಗುಪ್ತ ಸಮಾಲೋಚನೆಯನ್ನೂ ಅಕ್ಕು ಜೊತೆ ಈ ಶೂದ್ರ ಹೆಂಗಸರು ನಡೆಸ್ತಾರೆ. ಆದರೆ ಅಕ್ಕು ಮಾತ್ರ ಎರಡು ಮಡಿ ಸೀರೆ, ದಿನಕ್ಕೊಂದು ಹೊತ್ತು ಊಟ, ಇಷ್ಟರಲ್ಲೇ ಜೀವನ ಸಾಗಿಸ್ತಾರೆ. ಅದ್ಭುತವಾದ ಹೆಣ್ಣು ಅದು. ಕಾಫಿ ಟೀ ಏನೂ ಕುಡಿಯಲ್ಲ. ಆದರೆ ಗೊತ್ತ? ಅವರಿಗೂ ಒಂದು ನಸ್ಯದ ಚಟವಿತ್ತಂತೆ. ಕೇಶವನ ಹತ್ತಿರ ಅಂಗಡೀಂದ ತರಸಿಕೋತ ಇದ್ದರಂತೆ. ಆದರೆ ಗೌರಿ ಏನೋ ಒಂದು ಥರಾ ಆಗಿ ಬಿಟ್ಟಿದ್ದಾಳೆ ಅಂತ ಅವರಿಗೆ ಅನ್ನಿಸಿದ ಮೇಲೆ ನಸ್ಯಾನೂ ಬಿಟ್ಟುಬಿಟ್ಟರಂತೆ... ಅವರಂಥ ತಾಯೀನ ನಾನು ನೋಡಿಯೇ ಇಲ್ಲ". (ಯು.ಆರ್.ಅನಂತಮೂರ್ತಿ, ದಿವ್ಯ, ೨೦೦೮, ಪುಟ ೧೬೭-೧೬೮) ಇಂತಹ ಅಕ್ಕು ಬ್ರಾಹ್ಮಣರ ಮಡಿ ಹೆಂಗಸು. ಮಡಿ-ಮೈಲಿಗೆಯನ್ನು ಪಾಲಿಸುವ ಈಕೆ ತನ್ನ ಮನೆಗೆ ಯಾರೋ ತಂದುಬಿಟ್ಟ ಮಗುವನ್ನು ತನ್ನ ಮಗುವಂತೆ ಜೋಪಾನ ಮಾಡುತ್ತಾಳೆ.

ಅಕ್ಕುವಿನಂತೆಯೇ 'ಭವ'ದ ಸೀತಮ್ಮ ಕೂಡ ಒಬ್ಬ ಪರದೇಶಿ ಹುಡುಗನನ್ನು ತಮ್ಮ ಮಗನಂತೆ ಭಾವಿಸಿದ್ದಾರೆ. "ನಾನು ಯಾರೆಂದು ಹೇಳಬೇಡಿ ಚಿಕ್ಕಪ್ಪ. ಅಮ್ಮನಿಗೆ ಈ

ಇಪ್ಪತ್ತೈದು ವರ್ಷಗಳ ನಂತರ ಗುರ್ತು ಹತ್ತತ್ತೋ ನೋಡುವ, ಅದೂ ಈ ನನ್ನ ವೇಷದಲ್ಲಿ ಹತ್ತಿದರೆ ಇನ್ನೂ ದಿನಕರ ನಿರ್ನಾಮವಾಗಿಲ್ಲ ಅಂತ" (ಯು.ಆರ್.ಅನಂತಮೂರ್ತಿ, ಭವ, ೨೦೦೯, ಪುಟ ೧೮) ಎಂದು ಹೇಳಿದ್ದ ದಿನಕರನನ್ನು ಸೀತಮ್ಮ ಅಯ್ಯೋ ದಿನಕರನಲ್ಲವ ಎಂದು ಗುರ್ತು ಹಿಡಿದಿದ್ದರು. ಆಕೆಯ ಕಣ್ಣುಗಳು ಮಾತೃ ಸ್ಪರ್ಶದ ಸುಖವನ್ನು ದಿನಕರನಿಗೆ ಆಕೆ ಮಡಿಯಲ್ಲಿದ್ದರಿಂದ ನೀಡಿತ್ತು. ಯಾರದೋ ಮಗನಾದ ದಿನಕರನನ್ನು ಸೀತಮ್ಮ ತಮ್ಮ ಮಗನಂತೆ ಸಾಕಿ ಬೆಳೆಸಿದ್ದಾರೆ. ಇಡೀ ದೇಶವೆಲ್ಲಾ ಈ ಮಾಣಿಯನ್ನು ಭಾರಿ ತಿಳುವಳಿಕಸ್ತ ಅಂತ ಗೌರವಿಸುತ್ತದೆ. ಆದರೆ ಈ ಮಾಣಿಗೆ ತನ್ನ ತಾಯಿ ಯಾರೂ ತಿಳಿಯದು. "ತಂದೆ ಯಾರು ತಿಳಿಯದು, ತನ್ನ ಊರು ಯಾವುದು ತಿಳಿಯದು. ಅದಕ್ಕೇ ದೇವರನ್ನೇ ತಾಯಿ, ತಂದೆ ಅಂತ ತಿಳೀಲಿಕ್ಕೆ ಏನೋ ಈ ವೇಷದಲ್ಲಿ ಅಲೀತಿದೆ". (ಯು.ಆರ್.ಅನಂತಮೂರ್ತಿ, ಭವ, ೨೦೦೯, ಪುಟ ೨೨) ಈ ಕಾರಣದಿಂದಲೇ ಸೀತಮ್ಮನಿಗೆ ತಮ್ಮ ಸಾಕು ಮಗ ದಿನಕರನ ಮೇಲೆ ಅತೀವವಾದ ಪ್ರೀತಿ ಮತ್ತು ಕಾಳಜಿ. ದೂರವಿರುವ ದಿನಕರನನ್ನು ತಾನು ನೋಡದೆ ಸಾಯುವುದಿಲ್ಲ ಎಂದು ಹೇಳುತ್ತಿದ್ದ ಸೀತಮ್ಮನಿಗೆ ಅವನೇ ಬಂದಾಗ ಅವರ ಸಂತೋಷ ಮುಗಿಲು ಮುಟ್ಟುತ್ತದೆ. ಅಕ್ಕು ಮತ್ತು ಮಗು ಹಾಗೂ ಸೀತಮ್ಮ ಮತ್ತು ದಿನಕರನ ಸಂಬಂಧ ಪ್ರಪಂಚದ ಬೇರೆ ಹೆತ್ತ ತಾಯಿಗಳಂತೆ ಸಹಜವಾದದ್ದಾಗಿದೆ. ಆದರೆ ಬೇರೆ ಯಾರದೋ ಮಕ್ಕಳಿಗೆ ತಾಯಿಯರಾಗಿರುವ ಅಕ್ಕು ಮತ್ತು ಸೀತಮ್ಮ ಪ್ರಪಂಚದ ಬೇರೆ ಹೆತ್ತ ತಾಯಿಯರಿಗಿಂತ ಭಿನ್ನವಾಗಿ ನಿಲ್ಲುತ್ತಾರೆ. ಮಾತೃ ಪ್ರೇಮಕ್ಕೆ ತಮ್ಮ ತಾಯ್ತನದ ಮೂಲಕ ಹೊಸ ಭಾಷ್ಯಕ್ಕೆ ಕಾರಣರಾಗುತ್ತಾರೆ.

ಸೀತಮ್ಮನಿಗೆ ಆಧ್ಯಾತ್ಮ ಎನ್ನುವುದು ಕಠಿಣವಾದ ದಾರಿ ಅಲ್ಲ. ದೈನಂದಿನ ಚಟುವಟಿಕೆಗಳಲ್ಲಿ ಸೀತಮ್ಮ ಮುಳುಗಿಕೊಂಡರೂ ಅವುಗಳಿಂದ ದೂರವಿರುವ ಕಲೆಯನ್ನು ಆಕೆ ಚೆನ್ನಾಗಿ ಕರಗತ ಮಾಡಿಕೊಂಡಿದ್ದಾಳೆ. "ದೋಸೆ ಮಾಡುವಷ್ಟೇ ಸುಲಭವಾಗಿ ಮನೆ ಮುಂದಿನ ಚಿತ್ತಾರದಲ್ಲಿ ಶ್ರೀಚಕ್ರವನ್ನು ಕೂಡ ಬಿಡಿಸಬಲ್ಲರು. ಇಂತಹ ಸೀತಮ್ಮ ಗಂಗೂಬಾಯಿಯ ಬಗ್ಗೆ ದಿನಕರನಿಗೆ ಹೇಳುತ್ತಾ ಬೆಳ್ಳಗಾದ ಕೂದಲಿಗೆ ಬಣ್ಣ ಹಾಕಿಕೊ ಎಂದರೆ ಇವಳು ಕೇಳ್ತಾಳ? ವೈರಾಗ್ಯ ಬಂದು ಬಿಟ್ಟಿದೆ" (ಯು.ಆರ್.ಅನಂತಮೂರ್ತಿ, ಭವ, ೨೦೦೯, ಪುಟ ೫೪) ಎಂದು ತನ್ನ ಆಧುನಿಕ ಮನಸ್ಥಿತಿಯನ್ನು ಬಿಚ್ಚಿಡುತ್ತಾಳೆ. "ಸೀತಮ್ಮ ತನ್ನ ಮಗ ನಾರಾಯಣ ಗಂಗೂಬಾಯಿಯ ಜೊತೆ ಕದ್ದುಮುಚ್ಚಿ ಸಂಬಂಧ ಇಟ್ಟುಕೊಳ್ಳುವ ಬದಲು ಆಕೆಯ ಜೊತೆ ಮದುವೆ ಮಾಡಿಕೊಳ್ಳಲಿ ಎಂದು ಆಸೆ ಪಡುತ್ತಾರೆ. ಆದ್ದರಿಂದಲೇ ಗಂಗೂ ಕೂಡ ನನಗೆ ಬಳಗದವಳಂತೆಯೇ" (ಯು.ಆರ್.ಅನಂತಮೂರ್ತಿ, ಭವ, ೨೦೦೯, ಪುಟ

೬೬) ಎಂದು ಸೀತಮ್ಮ ಹೇಳುತ್ತಾರೆ. ಯಾರಿಂದಲೂ ಪ್ರೀತಿಯನ್ನು ನಿರೀಕ್ಷಿಸದ ಸೀತಮ್ಮ ಎಲ್ಲರಿಗೂ ಪ್ರೀತಿಯನ್ನು ಹಂಚುತ್ತಾರೆ. ಭಾಷೆ ಗೊತ್ತಿರದಿದ್ದರೂ ದಿನಕರನನ್ನು ತನ್ನ ಮಗನಂತೆ ಸೀತಮ್ಮ ಕಾಣುತ್ತಾರೆ. ತಾವರೆ ಎಲೆ ಮೇಲಿನ ಬಿಂದುವಿನಂತೆ ಸೀತಮ್ಮ ಬದುಕಿಗೆ ಅಂಟಿಯೂ ಅಂಟದಂತೆ ಇರುತ್ತಾರೆ. ಈ ರೀತಿಯ ಸೀತಮ್ಮ ಆಧ್ಯಾತ್ಮಿಕತೆಯ ನೆಲೆಯಲ್ಲಿ ಬಿಡುಗಡೆ ಪಡೆಯುತ್ತಾಳೆ.

'ದಿವ್ಯ'ದ ಗೌರಿಯಲ್ಲಿ, ಸೀತಮ್ಮನಂತೆ ಬದುಕಿನಲ್ಲಿ ಒಂದಾಗಿದ್ದರೂ ವೈರಾಗ್ಯದ ಅಂಶ ಆಕೆಯಲ್ಲಿ ವ್ಯಕ್ತವಾಗುತ್ತದೆ. "ಸುತ್ತಲಿನ ಜನ ಆಕೆಯನ್ನು ದೇವತೆ ಎಂದೇ ಭಾವಿಸಿದ್ದಾರೆ. ಮನೆಯ ಹೊರಗಡೆಯ ಜನ ಗೌರಿಯಲ್ಲಿ ದೇವಿಯನ್ನು ಕಾಣುವ ಪ್ರಯತ್ನ ಮಾಡುತ್ತಾರೆ. ಆದರೆ ಮಂಜಯ್ಯನ ಮನೆ ಒಳಗಡೆಯ ಸಮಸ್ಯೆಯನ್ನು ಗೌರಿ ಹಂತ ಹಂತವಾಗಿ ಲೌಕಿಕದ ರೀತಿಯಲ್ಲಿ ನಿವಾರಣೆ ಮಾಡುತ್ತಾಳೆ. ಆದ್ದರಿಂದ ಅವಳೊಬ್ಬ ಮನುಷ್ಯಳೂ ಹೌದು, ದೇವಿಯೂ ಹೌದು". (ಯು.ಆರ್.ಅನಂತಮೂರ್ತಿ, ದಿವ್ಯ, ೨೦೦೮, ಪುಟ ೧೬೪) ಲೌಕಿಕದಲ್ಲಿ ಇದ್ದು ಕೂಡ ಸ್ಪಿರಿಚುಯಲ್ ಅನ್ನುವ ರೀತಿ ಸೀತಮ್ಮ ಮತ್ತು ಗೌರಿ ನಡೆದುಕೊಳ್ಳುತ್ತಾರೆ. ಯಾವುದೇ ಗೊಂದಲಗಳಿಲ್ಲದ, ನಿರೀಕ್ಷೆಗಳಿಲ್ಲದ ಸಂಘರ್ಷವಿಲ್ಲದ ಪ್ರೀತಿಯಲ್ಲಿ 'ಭವ'ಗೊಂಡಾಗ ಮಾತ್ರ ಸೀತಮ್ಮ ಮತ್ತು ಗೌರಿಯಂತೆ ಜೀವನದಲ್ಲಿ 'ದಿವ್ಯ'ರಾಗಲು ಸಾಧ್ಯವಾಗುತ್ತದೆ.

ಸಂಪ್ರದಾಯ><ಆಧುನಿಕತೆ, ಬ್ರಾಹ್ಮಣ><ಶೂದ್ರ, ಪ್ರಕೃತಿ><ಕಾಮಗಳಂತಹ ವಿರೋಧಗಳನ್ನು ಅನಂತಮೂರ್ತಿಯವರು ಜಾತಿ ಮತ್ತು ರಾಜಕೀಯಕ್ಕೆ ಸಂಬಂಧಿಸಿದ ಕಥಾ ವಸ್ತುವಿನ ಕೇಂದ್ರದಲ್ಲಿಟ್ಟು ಸಂವಹಿಸುತ್ತಾರೆ. ಅನಂತಮೂರ್ತಿಯವರ ಕಥನ ನಾಯಕನು ಇಂತಹ ಯಾವುದಾದರೊಂದು ವಿರೋಧಗಳಲ್ಲಿ ಸಿಕ್ಕಿಕೊಂಡು ಬದುಕಿಗೆ ಮುಖಾಮುಖಿಯಾಗುತ್ತಿರುತ್ತಾನೆ. ಆ ನಾಯಕ ಇಂತಹ ಪ್ರಯತ್ನದಲ್ಲಿ ವಿಫಲನಾಗುತ್ತಿದ್ದಾನೆ ಎಂಬುದರ ಅರಿವು ಓದುಗರಿಗೆ ಆಗುವ ಮೊದಲೇ ಅಲ್ಲಿನ ಮಹಿಳೆಯರು ತಮ್ಮ ವಿಶಿಷ್ಟವಾದ ನಡೆಯಿಂದ ಗಮನ ಸೆಳೆಯುತ್ತಾರೆ. ಆ ಸಂದರ್ಭದಲ್ಲಿ ನಾಯಕನ ದ್ವಂದ್ವ, ಅಸಹಾಯಕತೆ, ಸಂಘರ್ಷಗಳಿಗಿಂತ ಮಹಿಳೆ ವ್ಯಕ್ತಿತ್ವ, ಗಟ್ಟಿತನ, ನಿರ್ಧಾರ, ಬದುಕು ಇವೇ ಮೊದಲಾದವು ಹೆಚ್ಚು ಅಪ್ಯಾಯಮಾನವೆನಿಸುತ್ತದೆ.

# ಅಧ್ಯಾಯ – ೭

## ಪಿ.ಲಂಕೇಶ್‌ರ ಕಥನ ಸಾಹಿತ್ಯದಲ್ಲಿ ಮಹಿಳೆ

ಬದುಕಿನ ವಾಸ್ತವದ ಸತ್ಯಗಳಿಗೆ ಅತ್ಯಂತ ನಿಷ್ಠುರವಾಗಿ ಸ್ಪಂದಿಸುವ ನವ್ಯ ಲೇಖಕರರಲ್ಲಿ ಲಂಕೇಶ್ ಪ್ರಮುಖರಾಗಿದ್ದಾರೆ. ಕನಸು, ಕಾಮ, ಸಾವು, ಗೊಂದಲ, ಅನಾಥ ಪ್ರಜ್ಞೆ ಅಸಹಾಯಕತೆ ಈ ಮೊದಲಾದವುಗಳನ್ನು ಲಂಕೇಶ್ ತಮ್ಮ ಕಥನ ಸಾಹಿತ್ಯದ ಪ್ರಧಾನ ಧಾರೆಯನ್ನಾಗಿಸಿದ್ದಾರೆ. "ನಮ್ಮ ಸಾಮಾನ್ಯ ಅನುಭವದ ಪ್ರಕಾರ ಅತ್ಯಂತ ಪರಿಶುದ್ಧರು ಅನಿಸಿಕೊಂಡ ವ್ಯಕ್ತಿಯ ಬದುಕಿನಲ್ಲಿ ಎಷ್ಟೋ ಕೀಳು, ಪೋಲಿ, ಕ್ಷುಲ್ಲಕ ಸಂಗತಿಗಳು ನಡೆದು ಹೋಗಿರುತ್ತವೆ. ಕತೆಗಾರನೂ ಹಾಗೆ, ಕತೆಯ ನಾಯಕನೂ ಹಾಗೆ; ಅವರು ಮನುಷ್ಯನ ಹಾಗೆ ಇರಬೇಕು, ಯಂತ್ರಗಳ ಹಾಗಲ್ಲ" (ಪಿ.ಲಂಕೇಶ್, ಪ್ರಸ್ತುತ, ೨೦೦೬, ಪುಟ ೯೮) ಎಂದು ಹೇಳುವ ಲಂಕೇಶ್ ಮನುಷ್ಯನ ವ್ಯಕ್ತಿತ್ವವನ್ನು ನೇರವಾಗಿ ದಿಟ್ಟವಾಗಿ ತೆರೆದಿಡುವ ಪ್ರಯತ್ನವನ್ನು ಮಾಡುತ್ತಾರೆ. ವ್ಯಕ್ತಿಯ ವ್ಯಕ್ತಿತ್ವದ ನಿಜವಾದ ಪ್ರಜ್ಞೆಯನ್ನು ಬಹಿರಂಗವಾಗಿ ಹೇಳಿ ಆ ಮೂಲಕ ಆ ವ್ಯಕ್ತಿಯನ್ನು ಅರಿಯುವುದೇ ಲಂಕೇಶ್‌ರ ಕಥನ ಸಾಹಿತ್ಯದ ಮುಖ್ಯ ಆಶಯವಾಗಿದೆ.

ಲಂಕೇಶ್ ಕಥನ ಸಾಹಿತ್ಯದ ನಾಯಕನು ತನ್ನ ಕನಸು, ಕಾಮನೆಗಳ ಬೆನ್ನತ್ತಿ ಅಲ್ಲಿ ಸೋಲುಗಳನ್ನು ಕಾಣುತ್ತಾನೆ. ತನ್ನ ಭವಿಷ್ಯವನ್ನು ರೂಪಿಸಿಕೊಳ್ಳುವುದಕ್ಕೆ ಮುಂದಾಗುವ ಈ ನಾಯಕ ಅಸ್ತಿತ್ವಕ್ಕಾಗಿ ಅವಿರತ ಪ್ರಯತ್ನ ಮಾಡುತ್ತಿರುತ್ತಾನೆ. ಆದರೆ ಅವನ ಎಲ್ಲಾ ಪ್ರಯತ್ನಗಳು ವಿಫಲವಾಗುತ್ತದೆ. ಇಂತಹ ಸಂದರ್ಭದಲ್ಲಿ ಲಂಕೇಶ್ ಕಥನ ಸಾಹಿತ್ಯದ ಮಹಿಳೆ ನಾಯಕನ ಪ್ರಯತ್ನಕ್ಕೆ ಬೆಂಬಲವಾಗಿ ನಿಲ್ಲುವ ಪ್ರಯತ್ನ ಮಾಡುತ್ತಾಳೆ. ಭವಿಷ್ಯದ ಬೆಳಕಿಗಾಗಿ ತಡಕಾಡುತ್ತಿದ್ದ ನಾಯಕನಿಗೆ ಮಹಿಳೆ ತಾನೇ ಬೆಳಕಾಗಿ ಗೋಚರಿಸುತ್ತಾಳೆ. ಲಂಕೇಶ್ ಕಥನ ಸಾಹಿತ್ಯದಲ್ಲಿ ಮಹಿಳ ಸಂವೇದನೆಯು ವಿಶಿಷ್ಟ ರೂಪವನ್ನು ಹೊಂದಿದೆ. ಅಲ್ಲದೆ ಮಹಿಳಾ ಸಂವೇದನೆ ಲಂಕೇಶ್ ಕಥನ ಸಾಹಿತ್ಯದಲ್ಲಿ ವಿಕಸನ ಶೀಲ ಗುಣವನ್ನು ಹೊಂದಿದೆ. ಲಂಕೇಶ್‌ರ ಪ್ರಾರಂಭಿಕ ಕಥನ ಸಾಹಿತ್ಯವು ಮಹಿಳೆಯ ಬಾಹ್ಯ ಸೌಂದರ್ಯಕ್ಕೆ ಪ್ರಾಮುಖ್ಯತೆ ನೀಡಿವೆ. ಆದರೆ ಅವರ ಮುಂದಿನ ಕಥನ ಸಾಹಿತ್ಯದಲ್ಲಿ ಜೀವ ಚೈತನ್ಯ ಚಿಮ್ಮಿಸುವ ಸ್ವತಂತ್ರ ಮನೋಭಾವದ ಮಹಿಳೆಯನ್ನು ಕಾಣಬಹುದಾಗಿದೆ. ಸಮಕಾಲೀನ ನವ್ಯ ಲೇಖಕರು ಮಹಿಳೆಯನ್ನು ಪುರುಷನಿಗೆ ಪೂರಕವಾಗಿ ಬಳಸಿಕೊಳ್ಳುತ್ತಿದ್ದ ಸಂದರ್ಭದಲ್ಲಿ ಲಂಕೇಶ್ ಮಹಿಳೆಯನ್ನು ಸ್ವತಂತ್ರ ಅಸ್ತಿತ್ವವಾಗಿ ಕಂಡಿದ್ದಾರೆ. ಲಂಕೇಶ್‌ರವರ ಕಥನ ಸಾಹಿತ್ಯದಲ್ಲಿ ಮಹಿಳೆಯ

ಅಸ್ತಿತ್ವವನ್ನು, ವ್ಯಕ್ತಿತ್ವವನ್ನು ಅರಿಯುವ ಸಲುವಾಗಿ ಮಾಡುವ ಅಧ್ಯಯನವೇ ಈ ಅಧ್ಯಾಯದ ಪ್ರಮುಖ ಆಶಯವಾಗಿದೆ.

ಪುರುಷ ಪ್ರಧಾನ ಸಮಾಜವಾಗಿರುವ ಭಾರತೀಯ ಸಮಾಜವು ಮಹಿಳೆಯ ಮೇಲಿನ ದೌರ್ಜನ್ಯವನ್ನು ತಲೆ ತಲಾಂತರದಿಂದ ಮಾಡಿಕೊಂಡು ಬರುತ್ತಲೇ ಇದೆ. ಇಂದು ಸಮಾಜ ಆಧುನಿಕವಾಗಿದ್ದರೂ ಮಹಿಳೆ, ಪುರುಷನಷ್ಟೇ ಸರಿ ಸಮಾನಳಾಗಿದ್ದರೂ ಆಕೆಯ ಮೇಲಿನ ದೌರ್ಜನ್ಯವು ನಿಂತಿಲ್ಲ. ಭಾರತದ ಬಹುತೇಕ ಮಹಿಳೆಯರು ತಮ್ಮ ಮೇಲೆ ಪುರುಷರು ಮಾಡುವ ದೌರ್ಜನ್ಯವನ್ನು ಒಪ್ಪಿಕೊಂಡೆ ಈ ಹಿಂದೆ ಬದುಕಿದ್ದರು ಮತ್ತು ಈಗಲೂ ಬದುಕುತ್ತಿದ್ದಾರೆ. ಇದನ್ನು ಲಂಕೇಶರ 'ಅಣ್ಣನ ನೆನಪು' ಕತೆಯ ಮೀನಾಕ್ಷಿ ಸಾಬೀತು ಪಡಿಸುತ್ತಾಳೆ. ತನ್ನ ತಂದೆಗೆ ಸಾಗರದಲ್ಲಿ ಸರಸಿ ಎನ್ನುವ ಮಹಿಳೆಯ ಜೊತೆ ಅನೈತಿಕ ಸಂಬಂಧ ಇದೆ ಎಂದು ಗೊತ್ತಾದರೂ ಗೊತ್ತಾಗದಂತೆ ನಟಿಸುತ್ತಾಳೆ. ಆಕೆ ಮಾತ್ರವಲ್ಲದೆ ಆಕೆಯ ಗಂಗು ಚಿಕ್ಕಮ್ಮ ಕೂಡ ತನಗೆ ವಿಷಯ ಗೊತ್ತಿದ್ದರೂ ಗೊತ್ತಿಲ್ಲದಂತೆ ಇರುತ್ತಾಳೆ. ಮೀನಾಕ್ಷಿ ಮತ್ತು ಗಂಗು ಚಿಕ್ಕಮ್ಮ ಇಬ್ಬರು ಗಂಡಿನ ಅನೈತಿಕತೆ ಗೊತ್ತಾದರೂ ಗೊತ್ತಿಲ್ಲದಂತೆ ಬದುಕುತ್ತಾರೆ. ತಾವು ಪುರುಷನ ಅಧೀನದಲ್ಲಿರುವುದರಿಂದಲೋ ಅಥವಾ ತಾವು ಹೆಣ್ಣು ಎಂಬ ಕಾರಣಕ್ಕೋ ಗಂಡಿನ ಅನೈತಿಕತೆಯನ್ನು ಒಪ್ಪಿಕೊಂಡಿದ್ದಾರೆ. "ಅವ್ವ ತೀರಿಕೊಂಡ ಒಂದೆರಡೇ ಗಂಟೆಯಲ್ಲಿ ಅಪ್ಪ ಬಂದ. ಆತ ಮುಖ ಮುಚ್ಚಿಕೊಂಡು ಅಳತೊಡಗಿದ ಹೆಣದ ಹತ್ತಿರ ಬರಲಿಲ್ಲ. ನಲವತ್ತು ವರ್ಷ ಒಟ್ಟಿಗೇ ಬದುಕಿದ್ದ ವ್ಯಕ್ತಿಯನ್ನು ಮುಟ್ಟಲಿಲ್ಲ ಕೂಡ, ಪದೇ ಪದೇ ನಿಟ್ಟುಸಿರು ಬಿಡುತ್ತಿದ್ದ ಅಪ್ಪ ಊರಿನ ಜನ, ಅಳುಗಳು ಅವ್ವನ ಹೆಣವನ್ನು ದಫನ್ ಮಾಡುವವರೆಗೆ ಶೋಕಸಾಗರದಲ್ಲಿ ಮುಳುಗಿದವನಂತೆ ಕಾಣುತ್ತಿದ್ದ. ಆತನ ಸರಸಿಯ ಕತೆ ಮತ್ತು ಗುಪ್ತ ಕತೆಯನ್ನು ಅರಿತಿದ್ದ ನನಗೆ ಎಲ್ಲವೂ ನಾಟಕದಂತೆ ಕಾಣುತ್ತಿತ್ತು" (ಪಿ.ಲಂಕೇಶ್, ಉಲ್ಲಂಘನೆ ಮತ್ತು ಇತರ ಕತೆಗಳು, ೨೦೦೮, ಪುಟ ೪೭) ಎಂದು ಮೀನಾಕ್ಷಿ ತನ್ನ ಮನಸ್ಸಿನಲ್ಲಿಯೇ ಈ ಮಾತುಗಳನ್ನು ಹೇಳಿಕೊಳ್ಳುತ್ತಾಳೆ ಹೊರತು ಅಪ್ಪನ ಅನೈತಿಕತೆಯನ್ನು ಬಹಿರಂಗವಾಗಿ ಹೇಳುವುದೂ ಇಲ್ಲ, ಪ್ರತಿಭಟಿಸುವುದು ಇಲ್ಲ.

ಈ ಹಿಂದೆ ಮಹಿಳೆ ನಾಲ್ಕು ಗೋಡೆಗಳ ಮಧ್ಯೆ ಇದ್ದರಿಂದ ಪುರುಷನ ದೌರ್ಜನ್ಯ ಕೂಡ ನಾಲ್ಕು ಗೋಡೆಗಳ ಮಧ್ಯೆ ನಡೆಯುತ್ತಿತ್ತು. ಆದರೆ ಆಧುನಿಕ ಸಮಾಜದಲ್ಲಿ ಮಹಿಳೆ ಶಿಕ್ಷಣವನ್ನು ಪಡೆದು ಪುರುಷನಿಗೆ ಸರಿಸಮಾನವಾಗಿ ಎಲ್ಲ ರಂಗಗಳಲ್ಲಿ ಸ್ಥಾನ ಪಡೆಯುತ್ತಿದ್ದಾಳೆ. ವಿದ್ಯಾವಂತಳಾದ ಮತ್ತು ಆರ್ಥಿಕ ಸಬಲಳಾದ ಮಹಿಳೆಯ ಮೇಲೆ

ಪುರುಷನ ದೌರ್ಜನ್ಯ ನಿಲ್ಲದೆ ಅವ್ಯಾಹತವಾಗಿ ನಡೆಯುತ್ತಲೇ ಇದೆ. ಕುಟುಂಬ ಮತ್ತು ಉದ್ಯೋಗ ಎರಡು ಕಡೆ ಪುರುಷನ ದೌರ್ಜನ್ಯವನ್ನು ಎದುರಿಸಬೇಕಾದ ಪರಿಸ್ಥಿತಿ ಇಂದು ಮಹಿಳೆಗಿದೆ. ಇದನ್ನು ಲಂಕೇಶರ 'ವಾಸ್ತವ' ಕತೆಯು ಸಮರ್ಥವಾಗಿ ಹಿಡಿಯುತ್ತದೆ. "ನನ್ನಂಥ ಹುಡುಗಿ ಒಂದು ಕಛೇರಿಯಲ್ಲಿ ಗುಮಾಸ್ತಳಾಗಿದ್ದರೆ ಸಹೋದ್ಯೋಗಿಗಳು ಗೆಳೆತನಕ್ಕೆ ಪ್ರಯತ್ನಿಸೋದು, ಬಾಸ್ ತನ್ನ ಖಾಸಗಿ ಕೋಣೆಗೆ ಕರೆದು ಹೇಳಬಾರದ್ದು ಹೇಳೋದು, ವಾಂಛಲ್ಯಗಳನ್ನೆಲ್ಲ ಒಡ್ಡೋದು ಇದೆಲ್ಲ ಇದ್ದದ್ದೆ" (ಪಿ.ಲಂಕೇಶ್, ಉಲ್ಲಂಘನೆ ಮತ್ತು ಇತರ ಕತೆಗಳು, ೨೦೦೮, ಪುಟ ೧೯) ಎಂದು ತಿಳಿಯುವ 'ವಾಸ್ತವ' ಕತೆಯ ವನಜ ಈ ಮೂಲಕ ಉದ್ಯೋಗದಲ್ಲಿ ಪುರುಷನ ದೌರ್ಜನ್ಯವನ್ನು ಒಪ್ಪಿಕೊಂಡು ಅದೆಲ್ಲಾ ಸಾಮಾನ್ಯ ಸಂಗತಿ ಎಂಬಂತೆ ಸ್ವೀಕರಿಸಿದ್ದಾಳೆ. ಆಕೆಯ ಕಛೇರಿಯ ಡೆಪ್ಯೂಟಿ ಕಮೀಷನರ್ ಆದ ಪ್ರಸಾದ್ ನೋಡುವುದಕ್ಕೆ ಸಭ್ಯನಾಗಿ ಕಂಡರೂ ವನಜಳಿಗೆ ಕಚೇರಿಯಲ್ಲಿ ಯಾರಿಗೂ ಗೊತ್ತಾಗದಂತೆ ಮಾನಸಿಕವಾಗಿ ಹಿಂಸೆ ನೀಡಲು ಪ್ರಾರಂಭಿಸುತ್ತಾನೆ. ಪ್ರಸಾದ್ ತನ್ನ ಹೆಂಡತಿಯ ಕಡೆಯಿಂದ "ನೀನು ಇವತ್ತಿಂದ ನನ್ನ ತಂಗಿ ಇದು ನಿನ್ನ ಮನೆ. ನಮ್ಮವರು ನಿನ್ನನ್ನು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸ್ತಾರೆ ನೀನು ಇಲ್ಲ ಅನ್ನಬಾರದು" (ಪಿ.ಲಂಕೇಶ್, ಉಲ್ಲಂಘನೆ ಮತ್ತು ಇತರ ಕತೆಗಳು, ೨೦೦೮, ಪುಟ ೨೧) ಎಂದು ವನಜಳಿಗೆ ಹೇಳಿಸುವ ಮೂಲಕ ತನ್ನ ಜಾಣತನವನ್ನು ಮೆರೆಯುತ್ತಾನೆ ಪ್ರಸಾದ್ ತನ್ನ ಈ ಜಾಣತನದಿಂದ ತನ್ನ ಹೆಂಡತಿ ಮತ್ತು ವನಜ ಇಬ್ಬರನ್ನು ಶೋಷಣೆಗೆ ಒಳಪಡಿಸುತ್ತಾನೆ. ಆದರೆ ಇಬ್ಬರೂ ಕೂಡ ಇದನ್ನು ವಿರೋಧಿಸದೆ ಇರುವುದು ಅವರ ಅಸಹಾಯಕತೆಯನ್ನು ತೋರಿಸುತ್ತದೆ. ಉದ್ಯೋಗದಲ್ಲಿ ಈ ರೀತಿ ದೌರ್ಜನ್ಯವನ್ನು ಎದುರಿಸಿದ ವನಜ ತನ್ನ ಕೌಂಟುಂಬಿಕ ಜೀವನದಲ್ಲೂ ತನ್ನ ಗಂಡನಿಂದಲೇ ಶೋಷಣೆಗೆ ಗುರಿಯಾಗುತ್ತಾಳೆ. ವನಜ ತನ್ನ ಮನೆಯ ಕೆಲಸದ ಹುಡುಗಿ ಸಣ್ಣಿಯನ್ನು ತನ್ನ ಮಗಳೆಂದೇ ಭಾವಿಸಿ ನಡೆದುಕೊಳ್ಳುತ್ತಿದ್ದಳು. ಆದರೆ ಆಕೆಯ ಗಂಡ "ಆದ್ರೆ ಆಕೆ ನನ್ನ ಹತ್ರ ಎರಡು ವರ್ಷದಿಂದ ಮಲಗ್ತಿದ್ದಾಳೆ" (ಪಿ.ಲಂಕೇಶ್, ಉಲ್ಲಂಘನೆ ಮತ್ತು ಇತರ ಕತೆಗಳು, ೨೦೦೮, ಪುಟ ೨೩) ಎಂದು ಯಾವುದೇ ಮುಚ್ಚುಮರೆಯಿಲ್ಲದೆ ವನಜಳ ಮುಂದೆ ಹೇಳುತ್ತಾನೆ. ವನಜ ತನ್ನ ಗಂಡ ಇಷ್ಟು ಕೆಳಮಟ್ಟಕ್ಕೆ ಇಳಿಯಬಹುದೆಂದು ತಿಳಿದಿರಲಿಲ್ಲ. ಆತನೊಂದಿಗೆ ವಾದಿಸಿ ಉಪಯೋಗವಿಲ್ಲ ಎಂದು ತಿಳಿದು ಮೌನ ತಳೆಯುತ್ತಾಳೆ. "ಸಣ್ಣಿ ಮಗು ಮತ್ತು ನಾನು ನಮ್ಮ ಪ್ರಪಂಚ ಕೂಡ ಛಿದ್ರವಾಗಿತ್ತು. ಅವಳನ್ನು ಅಲ್ಲಿಂದ ಓಡಿಸೋದು, ಎಲ್ಲ ಬಿಟ್ಟಟ್ಟು ಮಗುವಿನೊಂದಿಗೆ ಹೊರಟು ಹೋಗೋದು, ಆತ್ಮಹತ್ಯೆ ಮಾಡಿಕೊಳ್ಳೋದು ಸಣ್ಣಿಯನ್ನು ಸುಟ್ಟು ಹಾಕೋದು.... ಯಾವುದನ್ನೂ ಮಾಡಲಿಲ್ಲ.

'ಈಗಲೂ ಎಲ್ಲರೂ ಒಟ್ಟಿಗೇ ಇದ್ದೇವೆ' ಅಂದಳು. ಕಣ್ಣೀರಿಲ್ಲ, ನಿಟ್ಟುಸಿರಿಲ್ಲ; ಬದುಕು ಅವಳ ಮೇಲೆ ಉರುಳಿಹೋಗಿದೆ ಮಾತ್ರ". (ಪಿ.ಲಂಕೇಶ್, ಉಲ್ಲಂಘನೆ ಮತ್ತು ಇತರ ಕತೆಗಳು, ೨೦೦೮, ಪುಟ ೨೩) ಉದ್ಯೋಗ ಮತ್ತು ಕುಟುಂಬ ಎರಡೂ ಕಡೆ ಪುರುಷನ ದೌರ್ಜನ್ಯವನ್ನು ಒಪ್ಪಿ ಅಸಹಾಯಕತೆಯಿಂದ ವನಜ ಬಾಳುತ್ತಾಳೆ.

ವೇದಪೂರ್ವ ಮತ್ತು ವೇದಕಾಲದಲ್ಲಿ ಮಹಿಳೆಗೆ ಕೂಡ ಪುರುಷನಂತೆ ವಿದ್ಯೆ ಪಡೆಯಲು ಅವಕಾಶವಿತ್ತು. ಜೊತೆಗೆ ಪುರುಷನ ಜೊತೆಗೂಡಿ ಯಜ್ಞಯಾಗಾದಿಗಳನ್ನು ನಡೆಸಬಹುದಿತ್ತು. ಈ ನಿಟ್ಟಿನಲ್ಲಿ ಗಾರ್ಗಿ, ಮೈತ್ರೇಯಿ, ಅಪಾಲಾ, ಲೋಪಾಮುದ್ರಾರಂಥವರ ಹೆಸರುಗಳು ಇತಿಹಾಸದಲ್ಲಿ ಕಾಣಸಿಗುತ್ತದೆ. ಆದರೆ ಕಾಲಕ್ರಮೇಣ ಮಹಿಳೆ, ಪುರುಷನ ಅಧೀನಕ್ಕೆ ಒಳಪಟ್ಟಳು. ವರದಕ್ಷಿಣೆ, ಸತಿ, ದೇವದಾಸಿ, ಬಾಲ್ಯವಿವಾಹ, ವೇಶ್ಯಾಪದ್ಧತಿ, ಬಹುಪತ್ನಿತ್ವ ಮುಂತಾದ ಪದ್ಧತಿಗಳು ಮಹಿಳೆಯರ ಬದುಕನ್ನು ನಾಶಪಡಿಸಿದವು. ಗಂಡು ಮಕ್ಕಳಿಲ್ಲದೆ ಹೋದರೆ ಸ್ವರ್ಗ ಸಿಗಲಾರದು. ಆದ್ದರಿಂದ ತಂದೆ ಸತ್ತ ನಂತರ ಗಂಡು ಮಗನೇ ಪಿಂಡ ಕೊಡಬೇಕು ಎಂಬ ನಂಬಿಕೆ ಬೆಳೆದಾಗ ಹೆಣ್ಣು ಮೂಲೆ ಗುಂಪಾದಳು. ವೇದಗಳಿಂದೀಚೆಗೆ ಸ್ತ್ರೀಯರ ಬಗ್ಗೆ ತಿರಸ್ಕಾರ ಭಾವ ಬೆಳೆದುಬಂತು. ಧಾರ್ಮಿಕವಾಗಿ, ಸಾಮಾಜಿಕವಾಗಿ, ಮಹಿಳೆಯರು ಪುರುಷನ ಬಂಧನಕ್ಕೊಳಗಾದಳು. ಅಷ್ಟೇ ಅಲ್ಲದೆ ಮನು ರಚಿಸಿದ ಸ್ಮೃತಿಗಳ ಕಾರಣದಿಂದ ಮಹಿಳೆಯ ಸ್ಥಿತಿ ಮತ್ತಷ್ಟು ಶೋಚನೀಯವಾಯಿತು. "ಪಿತಾರಕ್ಷತಿ ಕೌಮಾರ್ಯೇ, ಭರ್ತಾರಕ್ಷತಿ ಯೌವನೇ, ಸ್ಥವಿರೇ ರಕ್ಷಂತಿ ಪುತ್ರಾಃ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" (ಬಿ.ಸಿ.ಜವಳಿ, ಹರಿಹರ ಕವಿಯ ಸ್ತ್ರೀ ಪಾತ್ರ ದರ್ಶನ, ೧೯೮೨, ಪುಟ ೪೯) ಎಂದು ಮನು ಹೇಳಿ ಹೆಣ್ಣು ಪುರುಷಾಧೀನದಲ್ಲಿ ಇರಬೇಕು ಎನ್ನುತ್ತಾ ಆಕೆಯ ಸ್ವಾತಂತ್ರ್ಯ ಹರಣ ಮಾಡಿದನು ಶಾಸ್ತ್ರ, ಧರ್ಮಗಳ ಹೆಸರಿನಿಂದ ಪುರುಷನು, ಮಹಿಳೆಯನ್ನು ಶೋಷಣೆಗೊಳಪಡಿಸಿದನು. ಶಿಕ್ಷಣವಿಲ್ಲದೆ ಮಹಿಳೆ ಮನೆಯ ನಾಲ್ಕು ಗೋಡೆಗಳ ನಡುವೆ ಬದುಕಬೇಕಾದ ಪರಿಸ್ಥಿತಿಯನ್ನು ಪುರುಷ ಪ್ರಧಾನ ಸಮಾಜವು ತಂದೊಡ್ಡಿತು.

"ಮೂಲತಃ ಹಿಂದೂ ಸಮಾಜವು ಮಗಳು ಕುಟುಂಬಕ್ಕೆ ಸಂಬಂಧಿಸಿರಲೇ ಇಲ್ಲವೆಂಬ ಕಲ್ಪನೆ ತಾಳಿದೆ; ಹಿಂದಿನ ವೈಚಾರಿಕರ ಮತದಂತೆ ಕುಟುಂಬದಲ್ಲಿ ಹೆಣ್ಣುಕೂಸು ಜನಿಸುವುದೆಂದರೆ ಆಭರಣವೊಂದನ್ನು ನಿಕ್ಷೇಪವಿಟ್ಟುಕೊಂಡಂತೆ; ಅದರ ನ್ಯಾಯವಾದ ಯಜಮಾನನು ಬಂದು ಕೇಳಿದಾಗ ತಿರುಗಿ ಕೊಡಬೇಕಾದ ವಸ್ತುವದು; ದಾನ, ವಿಕ್ರಯ ಹಾಗೂ ಅತಿಸರ್ಗಗಳು ಹೆಣ್ಣಿಗುಂಟು; ಆದರೆ ಗಂಡಿಗಿಲ್ಲ. (ದಾನ–

ಕಾಣಿಕೆ–ವಿಕ್ರಮ–ಮಾರಾಟ, ಅತಿಸರ್ಗ–ತೊರೆಯುವುದು) ಬೇರೊಂದು ಮನೆತನಕ್ಕೆ ಸೇರಬೇಕಾದವಳೆಂದು ಅವಳಿಗೆ ಪಾಲು ದೊರೆಯುವುದಿಲ್ಲ" (ಬಿ.ಸಿ.ಜವಳಿ, ಹರಿಹರ ಕವಿಯ ಸ್ತ್ರೀ ಪಾತ್ರ ದರ್ಶನ, ೧೯೮೨, ಪುಟ ೪೯) ಎಂದು ಡಾ.ಕೆ.ಎಂ.ಫಣಿಕ್ಕರ್ 'ಹಿಂದೂ ಸೊಸಾಯಿಟಿ ಅಟ್ ಕ್ರಾಸ್ ರೋಡ್ಸ್' ಎಂಬ ಕೃತಿಯಲ್ಲಿ ಮೇಲಿನಂತೆ ಮಹಿಳೆಯ ಬಗ್ಗೆ ಬರೆದಿದ್ದಾರೆ. ಮಹಿಳೆ ತನ್ನ ಜೀವನ ಪರ್ಯಂತ ಒಬ್ಬರಿಂದ ಒಬ್ಬರಿಗೆ ಹಸ್ತಾಂತರವಾಗುತ್ತಲೇ ಇರುತ್ತಾಳೆ. ಆಕೆಯ ಬದುಕಿನ ಚಿತ್ರಣವನ್ನು ಫಣಿಕ್ಕರ್ ಮೇಲಿನ ಮಾತುಗಳ ಮೂಲಕ ಹೇಳಿದ್ದಾರೆ.

ಬ್ರಿಟಿಷರ ಆಗಮನದಿಂದ ಭಾರತದಲ್ಲಿ ಅವರು ತಂದ ಆಡಳಿತ ಕ್ರಮದಿಂದ ಭಾರತೀಯ ಸಮಾಜದಲ್ಲಿ ಮಹಿಳೆಯ ಪರವಾಗಿ ಬದಲಾವಣೆ ಗಾಳಿ ಬೀಸಿತು. ಗಾಂಧೀಜಿ, ರಾಜಾರಾಮ ಮೋಹನ್‌ರಾಯ್, ಪೆರಿಯಾರ್ ಮೊದಲಾದ ಸುಧಾರಣವಾದಿಗಳಿಂದ ಮಹಿಳೆಯ ಸಮಸ್ಯೆಗಳಿಗಾಗಿ ಚಳುವಳಿ ಪ್ರಾರಂಭ ವಾಯಿತು. ಇವುಗಳಿಂದ ಮಹಿಳೆಯ ಬಗೆಗಿನ ದೃಷ್ಟಿಕೋನ ಸಂಪೂರ್ಣವಾಗಿ ಬದಲಾಗದೆ ಹೋದರೂ ತಕ್ಕಮಟ್ಟಿನ ಬದಲಾವಣೆಯನ್ನು ನಾವು ಕಾಣಬಹುದಾಗಿದೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿಯೂ ಇಂತಹ ಬದಲಾವಣೆಗಳನ್ನು ನಾವು ನೋಡಬಹುದಾಗಿದೆ. ನವೋದಯದಲ್ಲಿ ಹೆಣ್ಣಿನ ಮಾತೃತ್ವವು, ಪ್ರಗತಿಶೀಲದಲ್ಲಿ ಮಹಿಳೆಯರ ಬಗೆಗಿನ ಅಸಮಾನತೆ ಬಗ್ಗೆ ಸಹಾನುಭೂತಿ ವ್ಯಕ್ತವಾಯಿತು. ನವ್ಯದಲ್ಲಿ ಮಹಿಳೆ ಸ್ವತಂತ್ರಳಾಗಿ, ಆಧುನಿಕಳಾಗಿ ಕಾಣಿಸಿಕೊಂಡಳು. "ಕಾರ್ಯೇಷು ಮಂತ್ರೀ ಕರುಣೇಷು ದಾಸೀ, ಭೋಜ್ಯೇಷು ಮಾತಾ, ಶಯನೇಷು ರಂಭಾ, ಧರ್ಮಾನುಕೂಲ ಕ್ಷಮಯಾಧರಿತ್ರೀ, ಷಾಡ್ಗುಣ್ಯ ಭಾರ್ಯ ಕುಲಮುದ್ಧರಂತಿ" (ಬಿ.ಸಿ.ಜವಳಿ, ಹರಿಹರ ಕವಿಯ ಸ್ತ್ರೀ ಪಾತ್ರ ದರ್ಶನ, ೧೯೮೨, ಪುಟ ೪೯) ಎಂದು ಪುರುಷ ಹಾಕಿದ ಮುಖವಾಡಗಳನ್ನು ಕಳಚಿ ಮಹಿಳೆ ಇಂದು ಆತ್ಮಸ್ಥೈರ್ಯದಿಂದ ಮುನ್ನಡೆಯುತ್ತಿದ್ದಾಳೆ. ಇಂತಹ ಬದಲಾದ ಸಮಾಜದಲ್ಲಿನ ಬದಲಾದ ಮನಸ್ಥಿತಿಯ ಮಹಿಳೆಯನ್ನು ಲಂಕೇಶ್ ಸಾಹಿತ್ಯದಲ್ಲಿ ಗುರುತಿಸಬಹುದಾಗಿದೆ.

ಗಂಡಸಿನ ಶೋಷಣೆ ವಿರುದ್ಧ ಲಂಕೇಶರ 'ರುದ್ರಾಣಿಯ ಸುಪ್ತ ಕತೆ'ಯ ರುದ್ರಾಣಿ ಬಹಳ ನಿಷ್ಠಾರವಾಗಿ ಹೋರಾಟ ಮಾಡುತ್ತಾಳೆ. ಗಂಡಸರ ವಂಚನೆಯನ್ನು ಮೂಸಿ ನೋಡಿ ಪತ್ತೆಹಚ್ಚ ಬಲ್ಲ ಶಕ್ತಿ ಅವಳಿಗಿತ್ತು. ಗಂಡಸರು ಮಾಡುವ ಅನ್ಯಾಯದ ವಿರುದ್ಧ ಒಂಟಿಯಾಗಿ ನಿಂತು ಹೋರಾಟ ಮಾಡುವ ಆತ್ಮಸ್ಥೈರ್ಯ ರುದ್ರಾಣಿಗಿತ್ತು. ರುದ್ರಾಣಿ ತನ್ನ ಇಂತಹ ಹೋರಾಟಗಳಿಂದಲೇ ಗಂಡಸರ ಎದೆಯಲ್ಲಿ ನಡುಕ ಹುಟ್ಟಿಸ ಬಲ್ಲ

ಗಟ್ಟಿ ಹೆಂಗಸು. ಸಾಮಾಜಿಕ ಬದುಕಿನಲ್ಲಿ ಶೋಷಣೆಯ ವಿರುದ್ಧ ಪ್ರತಿಭಟಿಸುವ ಮಹಿಳೆಯಾಗಿ ರುದ್ರಾಣಿ ಗುರುತಿಸಿಕೊಳ್ಳುತ್ತಾಳೆ. ಬೇರೆ ಹೆಣ್ಣು ಮಕ್ಕಳ ಶೋಷಣೆಯ ವಿರುದ್ಧ ಹೋರಾಟ ಮಾಡುವ ರುದ್ರಾಣಿಯ ವ್ಯಕ್ತಿತ್ವ ಇಲ್ಲಿ ವಿಶಿಷ್ಟವಾಗಿದೆ. ಪುರುಷ ಪ್ರಧಾನ ಸಮಾಜದಲ್ಲಿ ರುದ್ರಾಣಿಯ ಅಸ್ತಿತ್ವ ಅನನ್ಯವಾಗಿದೆ. ಏಕೆಂದರೆ ಪುರುಷನ ಶೋಷಣೆಗೆ ಆಕೆ ತಣ್ಣನೆಯ ಪ್ರತಿಭಟನೆ ಮಾಡುವುದಿಲ್ಲ. ಬದಲಿಗೆ ಹಿಂಸೆಯನ್ನು ಪುರುಷನಿಗೆ ನೀಡಿ ಆ ಮೂಲಕ ಆತ ತನ್ನ ತಪ್ಪನ್ನು ತಿದ್ದಿ ಕೊಳ್ಳುವಂತೆ ಮಾಡುತ್ತಾಳೆ.

ಲಂಕೇಶರ 'ಗುತ್ತಿ ಗೀತಾ ಆದದ್ದು' ಕತೆಯಲ್ಲಿನ ಗುತ್ತಿ ಹಳ್ಳಿಗಾಡಿನ ಮುಗ್ಧ ಹುಡುಗಿ. ಇಂತಹ ಗುತ್ತಿಯನ್ನು ಪೇಟೆ ಸಂಸ್ಕೃತಿಯ ಪುಟ್ಟಯ್ಯ, ಮೂರ್ತಿ, ಭದ್ರಯ್ಯ, ಮುನಿಯ, ಚಿಕ್ಕಣ್ಣರಂತಹವರು ಶೋಷಿಸುತ್ತಾರೆ. ಹಳ್ಳಿಯ ಮುಗ್ಧ ಹುಡುಗಿಯನ್ನು ವೇಶ್ಯೆಯನ್ನಾಗಿಸುತ್ತಾರೆ. ಆಗ ಗುತ್ತಿ ಅಸಹಾಯಕಳು. ಆದರೆ ಇಂತಹ ದುರಂತಕ್ಕೆಳೆದ ವ್ಯವಸ್ಥೆಯ ಜೊತೆ ರಾಜಿಯಾಗುವ ಹೊಂದಿಕೊಳ್ಳುವ ಗುತ್ತಿ ತನ್ನ ಹಳೆಯ ಬದುಕನ್ನು ಮರೆಯಲು ಪ್ರಯತ್ನಿಸುತ್ತಾಳೆ. ಮೊದಲ ಮೊದಲು ಕುರ್ಚಿಯ ಮೇಲೆ ಕುಳಿತು ಕೊಳ್ಳುವುದಕ್ಕೂ ಬಾರದ ಗುತ್ತಿ ವ್ಯವಸ್ಥೆಯ ಜೊತೆಗೆ ಪಳಗಿ ತನ್ನನ್ನು ವೇಶ್ಯೆಯನ್ನಾಗಿಸಿದ ವ್ಯವಸ್ಥೆಗೆ ಪ್ರತೀಕಾರವನ್ನು ತೀರಿಸುವಳಂತೆ ಗಟ್ಟಿತನವನ್ನು ಬೆಳೆಸಿಕೊಳ್ಳುತ್ತಾಳೆ. "ಕೇಳದಿದ್ರೆ ಏನು ಮನ್ಯಾಗಿಂದ ಓಡಿಸ್ತಿಯ? ಅದ್ದೆಂಗೆ ಓಡಿಸ್ತಿ ನೋಡಿಕಿಲ್ಲವಾ ನಾ ನಾ ಮಾತಾಡದಿದ್ರೆ ನಿನ್ನ ಮರ್‍ವಾದಿ ಮಹಾ ಉಳದು ಬಡ್ತದೇನು?", "ನೂರು ಕಳಸ್ತನಿ ಅಂದು ಹತ್ತು ರೂಪಾಯಿ ಕಳಿಸ್ದೆ ನೀನು, ನಾಚಿಕೆಯಾಗ ಬ್ಯಾಡ್ವ?" (ಪಿ.ಲಂಕೇಶ್ ಸಮಗ್ರ ಕಥೆಗಳು, ೧೯೯೨, ಪುಟ ೨೭೭) ಇಂತಹ ಗುತ್ತಿಯ ಮಾತುಗಳು ವ್ಯವಸ್ಥೆಯ ವಿರುದ್ಧ ಪ್ರತೀಕಾರವನ್ನು ತೀರಿಸಿಕೊಳ್ಳವುದನ್ನು ಸೂಚಿಸುತ್ತದೆ. ತನ್ನ ಹಳ್ಳಿಯ ಬದುಕಿಗೆ ಗುತ್ತಿ ಹೋಗಲಾರದಷ್ಟು ಮುಂದೆ ಬಂದದ್ದರಿಂದ ಅದನ್ನು ಮರೆತು ಪೇಟೆ ಬದುಕಿಗೆ ಒಗ್ಗಿಕೊಳ್ಳುತ್ತಾಳೆ. ಆದ್ದರಿಂದಲೇ ಕುಡಿಯುವುದನ್ನು ಕಲಿಯುತ್ತಾಳೆ ಮತ್ತು ಮನಗೆ ಬಂದವರ ಜೊತೆಗೆ ತನ್ನನ್ನು ಗೀತಾ ಎಂದು ಪರಿಚಯಿಸಿಕೊಳ್ಳುತ್ತಾಳೆ. ಈ ರೀತಿ ತನ್ನನ್ನು ಆಕೆ ಕರೆದುಕೊಳ್ಳುವುದರಲ್ಲಿ ತನಗೆ ಆಗಿರುವ ದುರಂತವನ್ನು ಮರೆಯುವ ಪ್ರಯತ್ನವಿದೆ.

ಲಂಕೇಶರ 'ಕೆರೆಯ ನೀರನ್ನು ಕೆರೆಗೆ ಚೆಲ್ಲಿ' ಕತೆಯ ಗೌರಿ ಹಳ್ಳಿಯ ಬದುಕನ್ನು ಮೈಗೂಡಿಸಿಕೊಂಡ ಮುಗ್ಧ ಹುಡುಗಿ. ಅಜ್ಜಿ ಶಾಲೆಗೆ ಹೋಗು ಅಂದಾಗಲೆಲ್ಲ ಮನೆಯ ಆಳು ಶಿವರುದ್ರನ ಜೊತೆ ಗದ್ದೆಗೆ ಹೋಗಿ ಶುಂಠಿ ನೆಡುವುದನ್ನು ಅಭ್ಯಾಸ ಮಾಡಿಕೊಳ್ಳುತ್ತಾಳೆ. ಗೌರಿ ಒಟ್ಟಾರೆ ಮಣ್ಣಿನ ಜೊತೆ ಜೀವಂತ ಸಂಬಂಧವನ್ನು

ಬೆಳೆಸಿಕೊಂಡವಳಾಗಿದ್ದಾಳೆ. ನಗರದಿಂದ ಓದು ಮುಗಿಸಿ ಬಂದಿರುವ ಮಾವ ಪರಮೇಶನ ಜೊತೆ ಆಕೆಯ, ಮದುವೆಯನ್ನು ಹಿರಿಯರು ನಿಶ್ಚಯ ಮಾಡಿದ್ದಾರೆ. ಅದಕ್ಕೆ ಗೌರಿಯೂ ಸಮ್ಮತಿಸಿದ್ದಾಳೆ. ಆದರೆ ಪರಮೇಶನ ಯಾವುದೇ ಕ್ರಿಯೆ ಗೌರಿಯಲ್ಲಿ ಪ್ರೀತಿಯನ್ನು ಮೂಡಿಸುವಲ್ಲಿ ವಿಫಲವಾಗುತ್ತದೆ. ತಾನು ಮಾವನಷ್ಟು ಓದಿಲ್ಲದಿರುವುದೇ ಆಕೆಗೆ ಕೊರತೆಯಾಗಿ ಕಾಣುತ್ತದೆ. ಪರಮೇಶನು ಸಹ ನಗರದ ಹುಡುಗಿಗೂ ಗೌರಿಗೂ ಇರುವ ಅಂತರವನ್ನು ಕಂಡು ಕೊಳ್ಳುತ್ತಾನೆ. ಆಕೆಯ ಎದುರೇ "ಯಾಕೆ ಗೌರೂ ಇಷ್ಟು ಸಂಕೋಚ? ನಿನ್ನಂಥೋಳೇ ನಮ್ಮ ಕ್ಲಾಸಿನಲ್ಲಿ ಒಬ್ಬಳಿದ್ದಳು ಶಶಿಕಲಾ ಅಂತ – ಎರಡು ವರ್ಷದಲ್ಲಿ ಎಷ್ಟು ಫ್ರೀ ಆಗಿಬಿಟ್ಳೂ ಅಂತೀಯಾ?" (ಪಿ.ಲಂಕೇಶ್, ಸಮಗ್ರ ಕಥೆಗಳು, ೧೯೯೨, ಪುಟ ೭೪) ಎಂದು ಹೇಳುತ್ತಾನೆ. ಈ ಮೂಲಕ ಅವನ ಒಲವು ನಗರದ ಹುಡುಗಿಯರತ್ತ ಇರುವುದನ್ನು ಗೌರಿ ಸ್ಪಷ್ಟವಾಗಿ ಗುರುತಿಸುತ್ತಾಳೆ.

ಮಣ್ಣಿನ ಜೊತೆ ಒಡನಾಟ ಇಟ್ಟುಕೊಂಡಿರುವ ಗೌರಿಗೆ ತನ್ನ ಬೆವರಿನ ಬಗ್ಗೆ ಮಾವ ಬರುವವರೆಗೂ ಆತಂಕವಿರುವುದಿಲ್ಲ. ಆದರೆ ಮಾವ ತನ್ನ ಬೆವರನ್ನು ಹೋಗಲಾಡಿಸಲು ಸುವಾಸನೆ ದ್ರವ್ಯ ಬಳಸಿರುವುದನ್ನು ಗಮನಿಸಿ ಗೌರಿಗೆ ತನ್ನ ಬೆವರಿನ ಬಗೆ ಆತಂಕ ಆರಂಭವಾಗುತ್ತದೆ. ಪರಮೇಶ ತನ್ನ ಬೆವರನ್ನು ತಿರಸ್ಕರಿಸುವುದರಿಂದ ಬೆವರಿಗೆ ಒಡನಾಡಿಯಾಗಿರುವ ಗೌರಿಗೂ ತನಗೂ ಇರುವ ಅಗಾಧವಾದ ಅಂತರವು ಸ್ಪಷ್ಟವಾಗುತ್ತದೆ. ಅಲ್ಲದೆ ಯಾವುದೇ ಆಧುನಿಕ ಸೋಂಕಿಲ್ಲದ ಗೌರಿಗೆ ವ್ಯಾನಿಟಿ ಬ್ಯಾಗನ್ನು ಕಾಣಿಕೆಯಾಗಿ ನೀಡುತ್ತಾನೆ. ಇದರಿಂದ ಯಾವುದೇ ರೀತಿಯ ಸಂತೋಷ ಆಕೆಗೆ ಆಗುವುದಿಲ್ಲ. ಬದಲಿಗೆ ಮಾವನ ಮಾತು, ಉಡುಗೆ–ತೊಡುಗೆ ಎಲ್ಲವೂ ಆಕೆಯಲ್ಲಿ ಪರಕೀಯದ ಭಾವನೆ ಮೂಡಿಸುತ್ತದೆ. "ಕೊಟ್ಟಿಗೆಯಲ್ಲಿ ಗೌರಿ ಹಾಲು ಕರೆಯುತ್ತಿದ್ದಾಗ ಶಿವರುದ್ರ ತುಡುಗಿಯ ತಲೆಯ ಹತ್ತಿರವೇ ನಿಂತು ಅದು ಒದೆಯದ ಹಾಗೆ ತುರಿಸುತ್ತಿದ್ದ. ತುಡುಗಿ ಘಟಿಂಗ ಎಮ್ಮೆ. ಒಂದು ನೊಣ ಕಡಿದರು ಕಾಲು ಝಾಡಿಸಿ ಕಣ್ಣಿ ಹರಿದುಕೊಂಡು ಓಡುವ ಪೈಕಿ. ಶಿವರುದ್ರ ತನ್ನ ತಲೆಯ ಹತ್ತಿರ ಇದ್ದರೆ ಮಾತ್ರ ಅದಕ್ಕೆ ಹೆದರಿಕೆ". (ಪಿ.ಲಂಕೇಶ್, ಸಮಗ್ರ ಕಥೆಗಳು, ೧೯೯೨, ಪುಟ ೭೨) ಈ ರೀತಿಯಾಗಿ ಶಿವರುದ್ರ, ಗೌರಿಯ ಅಗತ್ಯಗಳನ್ನು ಮನಗಂಡು ಅದರಂತೆ ನಡೆಯುತ್ತಿದ್ದ. ಗೌರಿ, ಶಿವರುದ್ರನ ಈ ರೀತಿಯ ನಡವಳಿಕೆಗೂ ಮಾವನ ವಿದ್ಯೆಯ ಸೋಗಲಾಡಿತನಕ್ಕೂ ವ್ಯತ್ಯಾಸ ಕಂಡು ಕೊಂಡು ಆತನನ್ನು ಮದುವೆಯಾಗುವುದಕ್ಕೆ ಸಾರಾಸಗಟಾಗಿ ತಿರಸ್ಕರಿಸುತ್ತಾಳೆ. ಒಬ್ಬ ಹಳ್ಳಿ ಹುಡುಗಿ ತನ್ನ ನಿಶ್ಚಯವಾಗಿರುವ ಮದುವೆ ಗಂಡನ್ನು ನಿರಾಕರಿಸಬೇಕೆಂದರೆ ಅದು ಸಾಮಾನ್ಯ ಸಂಗತಿ

ಅಲ್ಲ. ತನ್ನ ಮನಸ್ಸಿಗೆ ಹತ್ತಿರವಾದವನನ್ನು ಮದುವೆಗೆ ಆರಿಸಿಕೊಳ್ಳುವ ಆಕೆಯ ಕ್ರಿಯೆ ಆಕೆಯ ಗಟ್ಟಿತನವನ್ನು ತೋರಿಸುತ್ತದೆ. ಹೆಣ್ಣೊಬ್ಬಳು ತನ್ನ ಮನಸ್ಸಿಗೆ ಒಪ್ಪಿದವನನ್ನು ವರಿಸಬಹುದೆನ್ನುವ ಸ್ವತಂತ್ರ ಆಲೋಚನೆ ಆಧುನಿಕ ಸಮಾಜದ ಫಲ. ಅಂತಹ ಸ್ವತಂತ್ರ ಆಲೋಚನೆ ಗೌರಿಯದ್ದಾಗಿದೆ.

ಗೌರಿಯ ಮುಂದುವರಿದ ವ್ಯಕ್ತಿತ್ವವೆಂಬಂತೆ ಲಂಕೇಶರ 'ಕಲ್ಲುಕರಗುವ ಸಮಯ' ಕತೆಯ ಶ್ಯಾಮಲ ಕಾಣಿಸಿಕೊಳ್ಳುತ್ತಾಳೆ. ಲಿಂಗಾಯತ ಜಾತಿಗೆ ಸೇರಿದ ಶ್ಯಾಮಲ, ಹಿಂದುಳಿದ ವರ್ಗಕ್ಕೆ ಸೇರಿದ ತಿಪ್ಪಣ್ಣ ಎಂಬ ಹುಡುಗನನ್ನು ಮೆಚ್ಚುತ್ತಾಳೆ. ಅಮೃತಾಂಬುಧಿಯಂತಹ ಹಳ್ಳಿಯಲ್ಲಿ ಇಂತಹ ಪ್ರೀತಿಯೆಲ್ಲಾ ಸಾಧ್ಯವೇ ಇರಲಿಲ್ಲ. ಈ ಹಿಂದೆ ಇಂತಹ ಸನ್ನಿವೇಶಗಳು ನಡೆದಾಗಲೆಲ್ಲ ಅಮೃತಾಂಬುಧಿಯಲ್ಲಿ ಕೊಲೆಗಳೇ ಆಗಿವೆ. ಶ್ಯಾಮಲೆಗೂ ತನ್ನದೊಂದು ವೀರಾವೇಶದ ಮಾರಾಮಾರಿಯ ಊರು ಎಂದು ಗೊತ್ತಿದ್ದರೂ, ತಿಪ್ಪಣ್ಣನನ್ನು ಪ್ರೀತಿಸುವುದನ್ನು ಬಿಡುವುದಿಲ್ಲ. ತಾನು ಪ್ರೀತಿಸುವ ಹುಡುಗನನ್ನು ತನ್ನ ಮನೆಗೆ ಕರೆದು ತನ್ನ ತಾಯಿ ಗಿರಿಜವ್ವಳಿಗೆ "ನಾನು ನಿನ್ನೆ ಇವರ ಮನೆಗೆ ಹೋಗಿದ್ದೆ ಅಂತ ಹೇಳಿಲ್ವೇನಮ್ಮ, ಇವರೇ ತಿಪ್ಪಣ್ಣ ಅಂತ ನಾನು ಇವರನ್ನೇ ಮದುವೆಯಾಗೋದು" (ಪಿ.ಲಂಕೇಶ್, ಸಮಗ್ರ ಕಥೆಗಳು, ೧೯೯೨, ಪುಟ ೩೮೨) ಎಂದು ಧೈರ್ಯವಾಗಿ ಹೇಳುತ್ತಾಳೆ. ಜಾತಿ ಬೀಜಗಳು ಹಳ್ಳಿಗಳಲ್ಲಿ ಸಾಕಷ್ಟು ಬಲವಾಗಿ ಬೇರೂರಿರುತ್ತವೆ. ಅಂತರ್ಜಾತಿ ವಿವಾಹ ನಿಷಿದ್ಧ ಎನ್ನುವ ಹಳ್ಳಿಯಲ್ಲಿ ಶ್ಯಾಮಲಳ ಇಂತಹ ನಡೆ ಬೆರಗು ಹುಟ್ಟಿಸುತ್ತವೆ. ಹುಡುಗನಾಗಿ ತಿಪ್ಪಣನಲ್ಲಿ ಇಲ್ಲದ ಧೈರ್ಯ ಶ್ಯಾಮಲಳಲ್ಲಿ ಇದೆ. ಕ್ರಾಂತಿ ವೇದಿಕೆಯ ಹುಡುಗರು ತಿಪ್ಪಣ್ಣನ ಪರವಾಗಿ ಹೋರಾಟ ಮಾಡಲು ಮುಂದಾದರೂ ತಿಪ್ಪಣ್ಣ ತಿರಸ್ಕರಿಸುತ್ತಾನೆ. ಆದರೆ ಯಾವುದೇ ಕ್ರಾಂತಿ ವೇದಿಕೆಯವರ ಸಹಾಯವಿಲ್ಲದೆ ಶ್ಯಾಮಲ ತಾನು ಪ್ರೀತಿಸಿದ ಹುಡುಗನನ್ನು ಯಾವುದೇ ಅಡೆ-ತಡೆ ಬಂದರೂ ಮದುವೆಯಾಗಲು ನಿರ್ಧರಿಸುತ್ತಾಳೆ. "....ನಿಜ ಅಮ್ಮ, ಇವರನ್ನಲ್ಲದೆ ನಾನು ಬೇರೆ ಯಾರನ್ನೂ ಜೊತೆಗಾರನಾಗಿ ಒಪ್ಪಲಾರೆ" (ಪಿ.ಲಂಕೇಶ್, ಸಮಗ್ರ ಕಥೆಗಳು, ೧೯೯೨, ಪುಟ ೩೮೩) ಎನ್ನುವ ಶ್ಯಾಮಲಳ ಮಾತು ಆಕೆಗೆ ದೊರಕಿದ ಆಧುನಿಕ ಶಿಕ್ಷಣದ ಫಲ ಎಂದು ಗುರುತಿಸಬಹುದಾಗಿದೆ. ವಿಭಿನ್ನ ಜಾತಿಯ ಗಂಡು-ಹೆಣ್ಣಿನ ಪ್ರೇಮ ಘರ್ಷಣೆಗೆ ಕಾರಣವಾಗಬಹುದೆಂದು ಊಹಿಸಿದ್ದರೂ ಶ್ಯಾಮಲಗಳ ಗಟ್ಟಿ ಮನೋಭಾವದಿಂದ ಎಲ್ಲಾ ಆಗಬಹುದಾದ ಸಂಘರ್ಷಗಳು ಕಲ್ಲಿನಂತೆ ಕರಗಿಹೋಗುತ್ತದೆ.

'ಮುಸ್ಸಂಜೆಯ ಕಥಾ ಪ್ರಸಂಗ'ದ ಸಾವಂತ್ರಿ ಕೂಡ ತನ್ನ ಜಾತಿಯವನಲ್ಲದ ಮಂಜನನ್ನು ಇಷ್ಟಪಡುತ್ತಾಳೆ ಜಾತಿಗಳ ತತ್ವಗಳ ಬಗ್ಗೆ ಸಾವಂತ್ರಿ ತಲೆಕೆಡಿಸಿ ಕೊಳ್ಳುವುದಿಲ್ಲ. ಮಂಜನ ಜೊತೆ ತಾನು ಬದುಕುವುದು ಸಾಧ್ಯ ಎಂದು ನಿರ್ಧರಿಸಿದ ನಂತರ ತನ್ನನ್ನು ತಾನು ಆತನಿಗೆ ಒಪ್ಪಿಸಿಕೊಳ್ಳುತ್ತಾಳೆ. ಸಾವಂತ್ರಿಯ ಬದುಕು ವ್ಯವಸ್ಥೆಯನ್ನು ಲಕ್ಷ್ಯಕ್ಕೆ ತೆಗೆದುಕೊಳ್ಳದೆ ತನಗೆ ಸರಿ ಕಾಣುವ ಹಾದಿಯಲ್ಲಿ ಸಾಗುತ್ತದೆ. ಸಾವಂತ್ರಿಯ ತಾಯಿ ರಂಗವ್ವ ತನ್ನ ಮಗಳನ್ನು ಸ್ವತಂತ್ರ ಆವರಣದಲ್ಲಿ ಸ್ವಚ್ಛಂದವಾಗಿ ಬೆಳೆಸಿದ್ದರಿಂದ ಸಾವಿತ್ರಿ ಇಂದು ವ್ಯವಸ್ಥೆ ಬಗ್ಗೆ ತಲೆಕೆಡಿಸಿಕೊಳ್ಳದೆ ತನ್ನ ಬದುಕನ್ನು ಮುಖ್ಯವಾಗಿಸಿಕೊಳ್ಳುತ್ತಾಳೆ.

"ಆಣೆ ಬಡ್ಡಿ ರಂಗವ್ವ ಗಟ್ಟಿ ಹೆಂಗಸು; ಗಂಡ ಸತ್ತಾಗ ಕೇವಲ ಎರಡು ದಿನ ಅತ್ತು ಎಮ್ಮೆ ಆಕಳುಗಳನ್ನು ನೋಡಿಕೊಂಡು ಆಗ ಚಿಕ್ಕವಳಿದ್ದ ಸಾವಂತ್ರಿಯನ್ನು ಮಡಿಲಲ್ಲಿಟ್ಟುಕೊಂಡು ಸಾಕಿ ದೊಡ್ಡವಳು ಮಾಡಿದಳು ಊರ ಜನರೊಂದಿಗೆ ಬಡ್ಡಿಯ ವ್ಯವಹಾರ ಇಟ್ಟುಕೊಂಡ ರಂಗವ್ವೆ ಮೌನವಾಗಿ, ಗಟ್ಟಿಯಾಗಿ ಸುಖವಾಗಿ ಇದ್ದಳು" (ಪಿ.ಲಂಕೇಶ್, ಮುಸ್ಸಂಜೆ ಕಥಾ ಪ್ರಸಂಗ, ೨೦೦೭, ಪುಟ ೮) ಇಂತಹ ಗಟ್ಟಿ ಮನಸ್ಸಿನ ರಂಗವ್ವ ಗಂಡನಿಲ್ಲದ ತನ್ನ ಕುಟುಂಬವನ್ನು ಮುನ್ನಡೆಸುತ್ತಾಳೆ. ಮಂಜ ಮತ್ತು ಸಾವಂತ್ರಿಯ ವಿರುದ್ಧ ವ್ಯವಸ್ಥೆ ಕೆಲಸ ಮಾಡುತ್ತಿದೆ ಎಂದು ತಿಳಿದಾಗ ರಂಗವ್ವ ಅವರ ಪರವಾಗಿ ನಿಲ್ಲುತ್ತಾಳೆ. ಅಂತರ್ಜಾತಿ ಪ್ರೇಮದ ಸಂದರ್ಭದಲ್ಲಿ ಉಂಟಾಗುವ ಸಂಘರ್ಷವನ್ನು ರಂಗವ್ವ ಸಮರ್ಥವಾಗಿ ಎದುರಿಸುತ್ತಾಳೆ. "ರಂಗವ್ವನ ಛಲವನ್ನು ಮಣ್ಣು ಮುಕ್ಕಿಸಲು ಭರಮ ಇತ್ಯಾದಿ ಶಕ್ತಿಗಳು, ಧರ್ಮದ ಬಲ, ದುಡ್ಡಿನ ಬಲ ಎಲ್ಲವನ್ನೂ ದುಡಿಸಿಕೊಳ್ಳಲು ಏಕಕಾಲದಲ್ಲಿ ಧಾವಿಸುತ್ತವೆ. ರಾಜಕೀಯ ಧರ್ಮದೊಂದಿಗೆ, ಧರ್ಮ ಜಾತಿಯೊಂದಿಗೆ ಜಾತಿ ಅಹಂಕಾರದೊಂದಿಗೆ ರಾಜಿ ಅಥವಾ ಜಗಳ ಕಾಯುವ ಪ್ರಸಂಗವಾಗಿತ್ತು. ಶಿರಹಟ್ಟಿ ಮತ್ತು ಹಾಲು ಮಠ ಆರಸ್ಸೆಸ್ ಮತ್ತು ಮುಸ್ಲಿಮರು ತಮ್ಮ ಯೋಗ್ಯತೆ ತೋರುವ ಪ್ರಕರಣವಾಗಿತ್ತು". (ಪಿ.ಲಂಕೇಶ್, ಮುಸ್ಸಂಜೆ ಕಥಾ ಪ್ರಸಂಗ, ೨೦೦೭, ಪುಟ ೩೩೫) ಹೀಗೆ ಗಟ್ಟಿ ಹೆಂಗಸಾದ ರಂಗವ್ವನನ್ನ ಮಣಿಸಲು ಇಡೀ ವ್ಯವಸ್ಥೆಯೇ ಸಿದ್ಧವಾಗಿ ನಿಂತರೂ ರಂಗವ್ವ ಸೋಲುವುದಿಲ್ಲ. ಕಂಬಳಿಯ ವ್ಯವಸ್ಥೆ, ಜೂಜು, ಕಳ್ಳ ಭಟ್ಟಿ, ಪ್ರೇಮ, ಕಾಮಗಳ ಜೊತೆಗೆ ಆಧುನಿಕತೆ ಮತ್ತು ಸ್ವತಂತ್ರತೆಗಳ ನಡುವೆ ರಂಗವ್ವ ಮತ್ತು ಸಾವಂತ್ರಿಯಂತಹ ಗಟ್ಟಿ ಸ್ತ್ರೀಯರು ಎದ್ದು ಕಾಣುತ್ತಾರೆ. ನವ್ಯ ಸಾಹಿತ್ಯ ಸೃಷ್ಟಿಸಿದ ಕೆಲವು ಸ್ವತಂತ್ರ ವ್ಯಕ್ತಿತ್ವದ ಮಹಿಳಾ ಪಾತ್ರಗಳಲ್ಲಿ ರಂಗವ್ವ ಮತ್ತು ಸಾವಂತ್ರಿ ಸೇರುತ್ತಾರೆ. ಹಳ್ಳಿ ರಾಜಕಾರಣದಲ್ಲಿ ತನ್ನನ್ನು ತಾನು ಕಳೆದುಕೊಳ್ಳಬಲ್ಲ ಅಪಾಯವಿದ್ದ ರಂಗವ್ವ ಆ ರೀತಿಯ ಸಾಧ್ಯತೆಗೆ ತನ್ನನ್ನು

ತಾನು ತೆರೆದು ಕೊಳ್ಳದೆ ಬದುಕಿನ ಎಂಥದೇ ಸಂದರ್ಭದಲ್ಲೂ ಬದುಕಿನ ಪರವಾಗಿ, ಜೀವನ್ಮುಖಿಯಾಗಿ ನಿಲ್ಲುತ್ತಾಳೆ.

'ಉಮಾಪತಿಯ ಸಾಲ್ಕರ್‌ಷಿಪ್ ಯಾತ್ರೆ'ಯ ಈರವ್ವ ಕೂಡ ಗಂಡನಿಲ್ಲದ ತನ್ನ ಕುಟುಂಬವನ್ನ ತಾನೇ ಗಂಡಾಗಿ ಮುಂದುವರೆಸಿಕೊಂಡು ಹೋಗುತ್ತಾಳೆ. ಸಂಸಾರವನ್ನು ನಿಭಾಯಿಸಲು ತಾನೇ ಗಂಡಿನ ಪಾತ್ರ ತಳೆದಿರುವ ಆಕೆ ವ್ಯವಸ್ಥೆಗೆ ಹೆದರುವುದಿಲ್ಲ. ಬದಲಿಗೆ ತಾನೇ ಜಗಳಗಂಟಿತನವನ್ನು ಬೆಳೆಸಿ ಕೊಂಡಿರುವುದರಿಂದ ಬೇರೆಯವರು ಇವಳ ತಂಟೆಗೆ ಬರುವುದಿಲ್ಲ. ರಂಗವ್ವ, ಈರವ್ವ ಗಂಡು ದಿಕ್ಕಿಲ್ಲದ ಕುಟುಂಬವನ್ನು ಮುನ್ನೆಡುಸುವ ಜವಬ್ದಾರಿಯನ್ನು ಹೊತ್ತುಕೊಂಡಿದ್ದಾರೆ. ಹಳ್ಳಿಗಾಡಿನ ಹೆಣ್ಣು ಮಕ್ಕಳಾದ್ದರಿಂದ ಸಹಜವಾಗಿಯೇ ಅವಳಲ್ಲಿ ಒರಟುತನ ಮೈಗೂಡಿದೆ. ಈ ಒರಟುತನ, ಜಗಳಗಂಟಿತನ ತಮ್ಮನ್ನು ತಾವು ರಕ್ಷಿಸಿಕೊಳ್ಳುವುದಕ್ಕಾಗಿ ಬಳಕೆಯಾಗುತ್ತವೆ. ಅಂದರೆ ಇವರೆಲ್ಲಾ ತಮ್ಮ ಸ್ವಂತಿಕೆಗಾಗಿ ಮತ್ತು ಅಸ್ತಿತ್ವಕ್ಕಾಗಿ ಬದುಕಿನ ಹಂಬಲ ಹೊಂದಿರುವವರಾಗಿದ್ದಾರೆ.

ಗಂಡನಿದ್ದರೂ ವಿಧವೆಯಂತೆ, ಒಂಟಿಯಾಗಿ ಬಾಳುತ್ತಿರುವ 'ಕೃತಜ್ಞತೆ'ಯ ನಿರ್ಮಲ ದಿಟ್ಟತನದಿಂದ ತನ್ನ ಬದುಕನ್ನು ಕಟ್ಟಿಕೊಂಡಿದ್ದಾಳೆ. ನಿರ್ಮಲಳ ಗಂಡ ಈಕೆಯನ್ನು ಬಿಟ್ಟು ಹೋರಟು ಹೋದಾಗ ಧೈರ್ಯಗೆಡದೆ ಸ್ವಂತ ಉದ್ಯೋಗವನ್ನು ಪ್ರಾರಂಭಿಸುತ್ತಾಳೆ. ಮೊದಲು ಜನರಲ್ ಸ್ಟೋರ್ಸ್ ಇಟ್ಟರೂ ಅದು ಊರ್ಜಿತವಾಗುವುದಿಲ್ಲ. ಆದ್ದರಿಂದ ಈಕೆಯು ಧೃತಿಗೆಡದೆ ಪುಸ್ತಕ ಅಂಗಡಿಯನ್ನು ತೆರೆಯುತ್ತಾಳೆ. ನಂತರ ಅದನ್ನು ಬಹು ದೊಡ್ಡ ಅಂಗಡಿಯಾಗಿ ಬೆಳೆಸುತ್ತಾಳೆ. ನಿರ್ಮಲಳ ಈ ದಿಟ್ಟತನ ಬೆರಗು ಹುಟ್ಟಿಸುತ್ತದೆ. ತಾನೊಬ್ಬಳೆ ಬದುಕನ್ನು ಕಟ್ಟಿಕೊಳ್ಳದೆ ತನ್ನ ಅಂಗಡಿಯಲ್ಲಿ ನಾಲ್ಕು ಜನರಿಗೆ ಕೆಲಸ ನೀಡಿ ಅದರ ಬದುಕಿಗೊಂದು ದಾರಿ ಮಾಡಿಕೊಟ್ಟಿದ್ದಾಳೆ. ನಿರ್ಮಲಳ ಸ್ವಯಂ ಉದ್ಯೋಗ ಆಧುನಿಕ ಸಮಾಜದ ಫಲವಾಗಿದೆ.

"ನಿನ್ನ ಯೌವನವನ್ನೇ ನೀನು ದೊಡ್ಡ ಕಾಯಿಲೆ ಅನ್ನೋ ಹಾಗೆ ತಿಳಿದುಕೊಂಡು ಓಡಾಡ್ತಿದ್ದೀ. ನಿನ್ನ ನೋವಿನ ಸ್ಥಿತಿ ಕಂಡು ನಿನ್ನ ತಂದೆ ತಾಯಿಗೂ ಬೇಸರವಾಗುತ್ತೆ. ಅವರಿಗೆ ಬೇಸರವಾಯ್ತು ಅಂತ ತಿಳಿದೊಡನೆ ಅವರು ಹೇಳಿದ್ದಕ್ಕೆಲ್ಲ ಒಪ್ಪಿಕೊಂಡು ಜೀವನವನ್ನು ಕೆಡಿಸಿಕೊಂಡು ಹಾಳಾಗ್ತೀ. ಹೆಣ್ಣಿನ ಎಲ್ಲ ಕಷ್ಟಗಳಿಗೆ ಈ ಕಲಸುಮೇಲೋಗರ ಕಾರಣ ಆಕೆ ಸ್ಪಷ್ಟವಾಗಿ ಯೋಚಿಸೋದನ್ನ, ತನ್ನ ಯೋಚನೆಗೆ ತಕ್ಕಂತೆ ನಡೆದುಕೊಳ್ಳೋದನ್ನ ಮೊದಲು ಕಲೀಬೇಕು" (ಪಿ.ಲಂಕೇಶ್, ಸಮಗ್ರ ಕಥೆಗಳು,

೧೯೯೨, ಪುಟ ೩೨೦) ಎಂದು ಹೇಳುವ ಲಂಕೇಶರ 'ಕಣ್ಮರೆ' ಕತೆಯ ಅಚ್ಚಮ್ಮ ಒಬ್ಬ ಬಂಡಾಯಗಾರ್ತಿಯಾಗಿದ್ದಾಳೆ. ಹೆಣ್ಣನ್ನು ಸದಾ ಗುಲಾಮ ಸ್ಥಿತಿಯಲ್ಲಿಟ್ಟಿರುವ ಪುರುಷ ಜಗತ್ತನ್ನು ದಿಟ್ಟವಾಗಿ ಪ್ರತಿಭಟಿಸುತ್ತಾಳೆ. ಲಜ್ಜೆಯಿಂದ ಕೂಡಿರುವ ಗಂಡನನ್ನು ಕಣ್ಣೆತ್ತಿ ನೋಡಲಾರದ ಮಾನ ಕಾಪಾಡಿಕೊಳ್ಳುವುದಕ್ಕಾಗಿ ಎಂಥ ಅನುಮಾನವನ್ನು ಸಹಿಸಿಕೊಳ್ಳುವ ಅಸಹಾಯಕ ಸ್ತ್ರೀಯರಿಗೆ ತಾನೇ ದನಿಯಾಗಿದ್ದಾಳೆ. ಮಹಿಳೆಯರ ಮೇಲೆ ಆಗುತ್ತಿರುವ ಶೋಷಣೆಯ ವಿರುದ್ಧ ಪ್ರತಿಭಟನೆ ಮಾಡುವ ಸಮಾಜದ ಸ್ತ್ರೀಪರ ಹೋರಾಟಗಾರ್ತಿಯ ಪ್ರತಿಬಿಂಬದಂತೆ ಅಚ್ಚಮ್ಮ ಬಿಂಬಿತವಾಗಿದ್ದಾಳೆ.

ಸಮಾಜದಲ್ಲಿ ವೇಶ್ಯೆಯರಿಗೆ ಗೌರವಯುತವಾದ ಬದುಕಿಲ್ಲ. ಪುರುಷ ಪ್ರಧಾನ ಸಮಾಜದ ವಾಂಛೆಗೆ, ಅದರ ಆಕ್ರಮಣ ಶೀಲತೆಗೆ ವೇಶ್ಯೆಯರು ನಲುಗಿ ಹೋಗಿದ್ದಾರೆ. ವೇಶ್ಯೆಯರಿಗೆ ಅವರದೇ ಆದ ಬದುಕಿಲ್ಲ. ಸ್ವಾತಂತ್ರ ವ್ಯಕ್ತಿತ್ವವಿಲ್ಲ. ತಮ್ಮ ಮೇಲಾಗುವ ಆಕ್ರಮಣವನ್ನು ಪ್ರತಿಭಟಿಸಲಾಗದೆ ಅಸಹಾಯಕ ಸ್ಥಿತಿಯಲ್ಲಿದ್ದಾರೆ. ಆದರೆ ಲಂಕೇಶ್ 'ಸೆಪ್ಟೆಂಬರಿನಲ್ಲಿ ಪ್ರಥಮ ರಾತ್ರಿ' ಎನ್ನುವ ಕತೆಯಲ್ಲಿನ ಶಾಂತ ವೇಶ್ಯೆಯಾಗಿದ್ದರೂ ತನ್ನ ಮೇಲಾಗುತ್ತಿರುವ ದೌರ್ಜನ್ಯವನ್ನು ಆ ಕ್ಷಣಕ್ಕಾದರೂ ಪ್ರತಿಭಟಿಸುತ್ತಾಳೆ. "ಈ ಜನ ಮದುವೆ ಅಂದ್ರೆ ದಳ್ಳಾಳಿ ವ್ಯಾಪಾರ ಅಂತ ಮಾಡಿದಾರೆ ಚಿಕ್ಕೋರ ಮನಸ್ಸು ಹ್ಯಾಗಿದೆ ಅಂತ ಯೋಚನೆ ಕೂಡ ಮಾಡೋಲ್ಲ. ಎಷ್ಟು ರಾಂಗ್ ಮಾಡ್ತಾರೆ ನೋಡಿ–ನನಗೆ ಅಶ್ಚರ್ಯವಾಗುತ್ತೆ. ಈ ವ್ಯವಹಾರ, ದಳ್ಳಾಳಿ, ವರದಕ್ಷಿಣೆ, ಮಧ್ಯಸ್ಥಿಕೆ ಹೋಗೋವರೆಗೆ ಈ ಸಮಾಜಕ್ಕೆ ಮುಕ್ತಿ ಇಲ್ಲ...." (ಪಿ.ಲಂಕೇಶ್, ಸಮಗ್ರ ಕಥೆಗಳು, ೧೯೯೨, ಪುಟ ೧೭೦) ಎನ್ನುವ ಶಾಂತಳ ಅರಿವು ನಾಯಕನಿಗಿಂತ ಪ್ರಬುದ್ಧವಾಗಿದೆ. ಗಂಡಸಿನ ಆಕ್ರಮಣ ಶೀಲತೆಗೆ ಒಗ್ಗಿ ಹೋಗಿದ್ದ ಆಕೆಯ ದೇಹ ಮತ್ತು ಮನಸ್ಸು ನಾಯಕನ ಮುಗ್ಧ ಸ್ವಭಾವಕ್ಕೆ ಮಾರುಹೋಗುತ್ತದೆ. ಅದಕ್ಕಾಗಿ ತನ್ನನ್ನ ತಾನೇ ಅವನಿಗೆ ಕೊಟ್ಟು ಕೊಳ್ಳುತ್ತಾಳೆ. ಅವಳ ಈ ಪ್ರಕ್ರಿಯೆ ತನ್ನ ವೇಶ್ಯೆ ಜೀವನದಿಂದ ಹೊರ ಹೋಗಬೇಕೆನ್ನುವ ಇಂಗಿತವನ್ನು ತೋರಿಸುತ್ತದೆ. ಇಲ್ಲಿ ಆ ಜೀವನದಂತೆ ದಳ್ಳಾಳಿತನವಿಲ್ಲ. ವ್ಯವಹಾರವಿಲ್ಲ. ಬದಲಿಗೆ ಕೊಟ್ಟು, ತೆಗೆದುಕೊಳ್ಳುವ ಪ್ರೀತಿ ಇದೆ. ಇಂಥ ತೃಪ್ತಿ ನೀಡಿದ ನಾಯಕನನ್ನು ಪೋಲೀಸರ ದಬ್ಬಾಳಿಕೆಯಿಂದ ತಪ್ಪಿಸಲು ಕೊನೆಗೆ ತಾನೇ ಅವನ ಆಕ್ರಮಣಶೀಲತೆಗೆ ಒಳಗಾಗುತ್ತಾಳೆ. ಕೃತಜ್ಞತೆಗಾಗಿ ಶಾಂತ ಇಂತಹ ಪ್ರಕ್ರಿಯೆಯಲ್ಲಿ ಮುಂದುವರೆದು ಉದಾತ್ತತೆಯನ್ನು ಮೆರೆಯುತ್ತಾಳೆ. ನಾಯಕನನ್ನು ಶಾಂತ ಮತ್ತೆ ಸೇರಬೇಕೆಂದು ಬಂದರೂ ಆತನ ಹೇಡಿತನ ಅದಕ್ಕೆ ಅವಕಾಶ ಮಾಡಿಕೊಡುವುದಿಲ್ಲ. ಆಕೆಯ ಉದಾತ್ತತೆಯ ಮುಂದೆ ಈತನ ಹೇಡಿತನ, ಒಬ್ಬ

ವೇಶ್ಯೆಯಲ್ಲಿಯೂ ಇಂತಹ ಉದಾತ್ತತೆಯಿರುವುದನ್ನು ಲಂಕೇಶ್ ಇಲ್ಲಿ ಗುರುತಿಸುವ ಪ್ರಯತ್ನ ಮಾಡಿದ್ದಾರೆ.

ಶಾಂತ ವೇಶ್ಯೆಯಾದರೂ ಪುರುಷನ ಆಕ್ರಮಣ ಶೀಲತೆಗೆ ರೋಸಿ ಹೋಗಿದ್ದಾಳೆ. ಹೊಸ ಬದುಕನ್ನು ಕಟ್ಟಿ ಕೊಳ್ಳಬೇಕೆಂಬ ತುಡಿತ ಆಕೆಯಲ್ಲಿದೆ. ಆದರೆ ಲಂಕೇಶರ 'ಅಕ್ಕ' ಕಾದಂಬರಿಯ ದೇವೀರಿ ವೇಶ್ಯೆಯ ಜೀವನ ನಡೆಸುತ್ತಿದ್ದರೂ ಆ ಜೀವನದ ಬಗ್ಗೆ ಆಕೆಗೆ ಜುಗುಪ್ಸೆ ಇಲ್ಲ. ಬದಲಿಗೆ ಹೊಸ ಜೀವನ ಕಟ್ಟಿಕೊಳ್ಳುವ ಹಂಬಲವಿಲ್ಲ. ಬದಲಿಗೆ ಆಕೆ ತನ್ನ ಆ ರೀತಿಯ ಜೀವನವನ್ನು ತನ್ನ ಅಸಹಾಯಕ ಪರಿಸ್ಥಿತಿಯಿಂದಾಗಿ ಒಪ್ಪಿಕೊಂಡಿದ್ದಾಳೆ. ದೇವೀರಿ ಮನೆ ಬಾಡಿಗೆ ಕಡಿಮೆ ಮಾಡಿಸುವುದಕ್ಕೆ, ತಮ್ಮನನ್ನು ಓದಿಸುವುದಕ್ಕೆ ಒಟ್ಟಾರೆ ಇಡೀ ಮನೆಯನ್ನು ಆರ್ಥಿಕವಾಗಿ ನಡೆಸುವುದಕ್ಕಾಗಿ ಈ ರೀತಿ ಜೀವನ ನಡೆಸುತ್ತಿದ್ದಾಳೆ. ದೇವೀರಿಯ ಈ ಅಸಹಾಯಕತೆಯನ್ನು ವ್ಯವಸ್ಥೆಯು ದುರುಪಯೋಗಪಡಿಸಿಕೊಳ್ಳುತ್ತದೆ. "ಖಡವಾ ಅಂತೆ ಖಡವಾ, ಮೈಮುರೇ ದುಡುದು ಹೆಣವಾಗಾಕೆ ನಾನು ಆ ನರಸಿಂಹ ಮೇಸ್ತ್ರಿ ದಗಾ ಹಾಕಿದ್ರೆ ಕೇಳೋನು ಸೈತ ಇಲ್ಲ. ಇವನ ಮನೆಗೆ ಬೆಂಕಿ ಬೀಳ, ಹಲ್ಲುಕಿಸಕೊಂಡು ಬಂದುಬಿಡ್ತಾನೆ ಈ ಕಾಲದಾಗೆ ಕಟ್ಟಿಕೊಂಡ ಗಂಡನೆ ಇರಾಕಿಲ್ಲಂತೆ ಇನ್ನ ಈ ಬೀದಿನಾಯಿಗಳು ನನ್ನ ಕೇಳ್ತಾವಾ? ಅವ್ವ, ಹೆಣಮಗಳೊಬ್ಬಳು ಮೈ ಮುರೇದೇಕಿ ಬದುಕಾಕೂ ಆಗಾಕಿಲ್ಲವಲ್ಲ ಏನು ಬಂತವ್ವ ಕಾಲ" (ಪಿ.ಲಂಕೇಶ್, ಅಕ್ಕ, ೨೦೦೭, ಪುಟ ೫) ಎಂದು ದೇವೀರಿ ಬೈದರೂ ಅವರುಗಳು ಬಂದಾಗ ಸಹಕರಿಸುತ್ತಾಳೆ. ದೇವೀರಿ ಗಟ್ಟಿ ಹೆಂಗಸಾದರೂ ಕಾಡಪ್ಪ, ನಾಗರಾಜರನ್ನು ಒದ್ದೋಡಿಸುವುದಕ್ಕೆ ಸಾಧ್ಯವಿದ್ದರೂ ಅವಳ ಅಸಹಾಯಕತೆ ಹಾಗೆ ಮಾಡದಂತೆ ಆಕೆಯನ್ನು ತಡೆಯುತ್ತದೆ. "ಓದಬೇಕು ತಮ್ಮ ಚೆಂದಾಗಿ ಓದಿ ರಾಜ್‌ಕುಮಾರ್, ಶ್ರೀನಾಥ್ ತರ ಆಗಬೇಕು" (ಪಿ.ಲಂಕೇಶ್, ಅಕ್ಕ, ೨೦೦೭, ಪುಟ ೪೧) ಎಂದು ಹೇಳುವ ದೇವೀರಿ ತಮ್ಮನನ್ನು ದೊಡ್ಡ ಶಾಲೆಗೆ ಸೇರಿಸುತ್ತಾಳೆ. ತನ್ನ ತಮ್ಮ ದೊಡ್ಡ ವ್ಯಕ್ತಿಯಾಗಿ ಬಾಳಬೇಕೆಂದು ಆಸೆಪಡುವ ದೇವೀರಿ ಅದಕ್ಕಾಗಿ ಇಂತಹ ಜೀವನವನ್ನು ಆರಿಸಿಕೊಂಡಿದ್ದಾಳೆ. ದೇವೀರಿಯ ಬೈದಾಟಗಳಲ್ಲಿ ತಾನು ಬದುಕುತ್ತಿರುವ ಬಗೆಗೆ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಿದ್ದಾಳೆ ಅನ್ನಿಸಿದರೂ ಅವಳ ಅಸಹಾಯಕತೆ ಆ ಬದುಕನ್ನು ಒಪ್ಪಿಕೊಳ್ಳುವಂತೆ ಮಾಡಿದೆ. ತನ್ನ ಬದುಕು ತನ್ನ ತಮ್ಮನಿಗೆ ತಿಳಿಯದಂತೆ ದೇವೀರಿ ಸಾಕಷ್ಟು ಪ್ರಯತ್ನ ಪಟ್ಟರೂ ತಮ್ಮ ಕ್ಯಾತನಿಗೆ ಅವಳ ಬದುಕಿನ ಬಗ್ಗೆ ತಿಳಿಯುತ್ತದೆ. ದೇವೀರಿ, ಕ್ಯಾತನ ಎದುರಿಗೆ ತಾನು ಬದುಕುತ್ತಿರುವುದು ನೈತಿಕತೆ ಎಂದು ಬಿಂಬಿಸಲು ಸಾಕಷ್ಟು ಪ್ರಯತ್ನವನ್ನು ಪಡುತ್ತಾಳೆ. ಆದರೂ ಆಕೆ ಅದರಲ್ಲಿ ಸಫಲಳಾಗುವುದಿಲ್ಲ.

ಪ್ರತಿಭಟನೆ, ಹೋರಾಟಗಳನ್ನು ಮಾಡುವ ಮಹಿಳೆಯರು ತಾವು ಪ್ರಾಮಾಣಿಕರಾಗಿದ್ದಾಗ ಮಾತ್ರ ಅಂತಹ ಪ್ರತಿಭಟನೆ, ಹೋರಾಟಕ್ಕೆ ಪ್ರತಿಫಲ ಸಿಗುತ್ತದೆ. ಮಾನವೀಯತೆ ಇಲ್ಲದಾಗ ದುರಂತವಾಗುತ್ತದೆ. 'ಉರಿದ ಊರಿನವರು' ಎಂಬ ಕತೆಯಲ್ಲಿನ ಚೆಲುವಮ್ಮ ಓದು ಬರಹ ಬಲ್ಲಂತಹವಳು, ಆಕೆ ಬೇರೆ ಹಳ್ಳಿ ಹೆಂಗಸರಂತೆ ಎಲ್ಲವನ್ನೂ ಸಹಿಸಿಕೊಳ್ಳದೆ ಜೋರು ಮಾಡುವ ಪ್ರವೃತ್ತಿಯನ್ನು ಬೆಳೆಸಿಕೊಂಡಿದ್ದಳು. ಆದರೆ ಅವಳು ಸಂದರ್ಭಗಳನ್ನು ದುರುಪಯೋಗಪಡಿಸಿಕೊಂಡು ತನ್ನ ಇಡೀ ಬದುಕನ್ನು ನಾಶಪಡಿಸಿಕೊಳ್ಳುತ್ತಾಳೆ. ಇಲ್ಲಸಲ್ಲದ ಆರೋಪಗಳನ್ನು ಬೇರೆಯವರ ಮೇಲೆ ಹಾಕಿ, ಮಾನವೀಯತೆಯನ್ನೇ ಮರೆಯುತ್ತಾಳೆ. ಇವಳ ಸ್ವಭಾವದಿಂದ ಬೇಸತ್ತ ಊರಿನ ಜನ ಅವಳ ಮನೆಗೆ ಬೆಂಕಿ ಹಾಕುತ್ತಾರೆ. ಮಾನವೀಯತೆಯಿಲ್ಲದ ಪ್ರತಿಭಟನೆ ಮತ್ತು ಹೋರಾಟ ಮಾಡುವ ಮಹಿಳೆಯನ್ನು ಸಮಾಜ ಸ್ವೀಕರಿಸುವ ರೀತಿಗೆ ಚೆಲುವಮ್ಮ ಸಾಕ್ಷಿಯಾಗಿದ್ದಾಳೆ. ಲಂಕೇಶರ ಮಹಿಳೆಯ ವಿಭಿನ್ನ ಸಂವೇದನೆಯಾಗಿ ಚೆಲುವಮ್ಮ ಗುರುತಿಸಿಕೊಂಡಿದ್ದಾಳೆ. "ಎಲ್ಡ್ ಸಲ ತಪ್ಪು ಮಾಡಿದ್ರೆ ಹತ್ಸಲ ಪೊಲೀಸರಿಗೆ ಕೊಡ್ತಾಳೆ ಆ ಬೋಳಿ ಮುಂಡೆ. ಸುಮ್ಮನಿದ್ರೂ ಉಪದ್ರ ಕೊಡ್ತಾಳೆ..." (ಪಿ.ಲಂಕೇಶ್, ಸಮಗ್ರ ಕಥೆಗಳು, ೧೯೯೨, ಪುಟ ೩೫೭) ಚೆಲುವಮ್ಮನ ಇಂತಹ ಸ್ವಭಾವವೇ ಊರಿನವರು ಆಕೆಯ ವಿರುದ್ಧ ಉರಿದು ಬೀಳಲು ಕಾರಣವಾಗುತ್ತದೆ. ಹೀಗೆ ಪ್ರತಿಭಟನೆ ಮತ್ತು ಹೋರಾಟಗಳನ್ನು ದುರುಪಯೋಗ ಪಡಿಸಿಕೊಂಡರೆ ಏನಾಗುತ್ತದೆ ಎಂಬುದಕ್ಕೆ ಚೆಲುವಮ್ಮ ಸಾಕ್ಷಿಯಾಗಿದ್ದಾಳೆ.

ಹೆಣ್ಣಿನ ನಿಸ್ವಾರ್ಥ ಪ್ರೇಮ ಎಂತಹ ಕ್ರೌರ್ಯವನ್ನಾದರೂ ತಣ್ಣಗೆ ಮಾಡುತ್ತದೆ ಎಂಬುದನ್ನು ಲಂಕೇಶ್ ಅಭಿವ್ಯಕ್ತಿಸಿದ್ದಾರೆ. ಲಂಕೇಶರ 'ಮೃಗ ಮತ್ತು ಸುಂದರಿ' ಕತೆಯ ಸುಂದರಿ ನಿಸ್ವಾರ್ಥ ಪ್ರೇಮವನ್ನು ತೋರಿಸಿ, ಮೃಗದ ಮೃಗತ್ವವನ್ನು ಹೋಗಲಾಡಿಸುತ್ತಾಳೆ. ಜನಪದ ಕತೆಯನ್ನು ಇದು ಹೋಲುತ್ತದೆ. ಪ್ರೀತಿಯ ವಿವಿಧ ಘಟ್ಟಗಳನ್ನು ಇಲ್ಲಿ ಗುರುತಿಸಲಾಗಿದೆ. ಸುಂದರಿಯಾದ ಹುಡುಗಿ ಅನಿವಾರ್ಯ ಕಾರಣಗಳಿಂದ ಕುರೂಪಿಯಾದ ಮೃಗವನ್ನು ಮದುವೆಯಾಗುವ ಸಂದರ್ಭ ಬರುತ್ತದೆ. "ಮೃಗ ಒಳ್ಳೆಯ ಹೃದಯ ಪಡೆದಿದ್ದರೂ ಮೃಗದ ಆಕಾರ ಹೊಂದಿರುವುದು ಸಹಜ. ಆದರೆ ಜಗತ್ತಿನ ಅನೇಕ ಮನುಷ್ಯರು ಸುಂದರ ಆಕಾರ ಪಡೆದು ಮೃಗದ ಹೃದಯ ಹೊಂದಿರುತ್ತಾರೆ" (ಪಿ.ಲಂಕೇಶ್, ಸಮಗ್ರ ಕಥೆಗಳು, ೧೯೯೨, ಪುಟ ೪೨೪) ಎಂದು ಹೇಳುವ ಸುಂದರಿ ಮುಂದೊಂದು ದಿನ ಆ ಮೃಗದ ಮೃಗತ್ವವನ್ನು ಕರಗಿಸುತ್ತಾಳೆ. ಹೆಣ್ಣಿನ ಪ್ರೀತಿಯ ಶಕ್ತಿಯ ತೀವ್ರತೆಯನ್ನು ಇಲ್ಲಿ ಗುರುತಿಸಲಾಗಿದೆ.

ಸಾಂಪ್ರದಾಯಿಕ ಬದುಕನ್ನು ಸ್ವೀಕರಿಸಿದರೂ ಪರಪುರುಷನ ಸಂಬಂಧವನ್ನು ಬೆಳೆಸುವ ವಿಭಿನ್ನ ವ್ಯಕ್ತಿತ್ವದ ಮಹಿಳೆಯಾಗಿ 'ಬೆಳದಿಂಗಳ ದಾಹ'ದ ಪಾರು ಚಿಕ್ಕಮ್ಮ ಕಾಣಿಸಿಕೊಳ್ಳುತ್ತಾಳೆ. "ನೇಮ, ನಿಷ್ಠೆಯ ಪಾರು ಚಿಕ್ಕಮ್ಮ ತನ್ನ ಅಗಾಧ ಜೀವಶಕ್ತಿಯನ್ನು ತನ್ನ ಆಳದ ಯಾವುದೇ ಪಂಜರದಲ್ಲಿ ಬಚ್ಚಿಟ್ಟು ವಾರಗಟ್ಟಲೆ ಹಬ್ಬಕ್ಕೆ ತಯಾರಿ ನಡೆಸುವವಳು. ಬರಲಿರುವ ವ್ರತಕ್ಕೆಂದು ಇಡೀ ಮನೆಯನ್ನು ಶುಭ್ರವಾಗಿ ತೊಳೆದು, ಪೂಜೆಯ ಹಿಂದಿನ ದಿನ ಹೂವು, ಹಣ್ಣು, ಧೂಪ ಎಲ್ಲವನ್ನೂ ಸಂಗ್ರಹಿಸಿ ತರುವ ಚಿಕ್ಕಮ್ಮ, ಆಕೆಯನ್ನು ನೋಡಿ ನನಗೆ ಅಚ್ಚರಿಯಾಗುತ್ತಿತ್ತು. ಕಾಲ ಕಳೆಯುವುದು ಪಾರು ಚಿಕ್ಕಮ್ಮನಿಗೆ ಸಮಸ್ಯೆ ಅನ್ನಿಸಿಯೇ ಇರಲಿಲ್ಲ. ಹಬ್ಬದ ದಿನ ಮೌನವಾಗಿ ದೇವರಲ್ಲಿ ಮನಸ್ಸಿಟ್ಟಂತೆ ಇರುತ್ತಿದ್ದಳು. ಚಿಕ್ಕಮ್ಮ, ಒಂದೇ ಒಂದು ಮಾತು ತಪ್ಪಾಗಿ ಆಡಿದವಳಲ್ಲ; ಮಹಾಪ್ರಾಣಕ್ಕೆ ಅಲ್ಪಪ್ರಾಣ ಬಳಸಿದವಳಲ್ಲ, ಒಂದೇ ಮಾತು ಸಾಕಾದರೆ ಎರಡು ಮಾತು ಬಳಸಿದವಳಲ್ಲ. ಮಾತು ಬೇಡವೆನ್ನಿಸಿದಾಗ ಮುಗುಳ್ನಗುತ್ತಿದ್ದಳು". (ಪಿ.ಲಂಕೇಶ್, ಉಲ್ಲಂಘನೆ ಮತ್ತು ಇತರ ಕಥೆಗಳು, ೨೦೦೮, ಪುಟ ೩೬-೩೭) ಇಂತಹ ಸಾಂಪ್ರದಾಯಿಕ ಮನಸ್ಸಿನ ಪಾರು ಚಿಕ್ಕಮ್ಮನ ಬದುಕಿನಲ್ಲಿ ಬೇರೆ ಸಂಬಂಧ ಪ್ರವೇಶ ಪಡೆಯುತ್ತದೆ. "ನಮ್ಮ ಸಾಮಾನ್ಯ ಅನುಭವದ ಪ್ರಕಾರ ಅತ್ಯಂತ ಪರಿಶುದ್ಧರು ಅನ್ನಿಸಿಕೊಂಡ ವ್ಯಕ್ತಿಯ ಬದುಕಿನಲ್ಲಿ ಎಷ್ಟೋ ಕೀಳು-ಪೋಲಿ, ಕ್ಷುಲ್ಲಕ ಸಂಗತಿಗಳು ನಡೆದು ಹೋಗಿರುತ್ತವೆ. ಕತೆಗಾರನೂ ಹಾಗೆ, ಕತೆಯ ನಾಯಕನೂ ಹಾಗೆ ಅವರು ಮನುಷ್ಯನ ಹಾಗೇ ಇರಬೇಕು ಯಂತ್ರಗಳ ಹಾಗಲ್ಲ" (ಪಿ.ಲಂಕೇಶ್, ಹುಳಿಮಾವಿನ ಮರ, ೨೦೦೩, ಪುಟ ೨೬೪) ಎನ್ನುವ ಲಂಕೇಶ್ ಮಾತಿನಂತೆ ಪಾರು ಚಿಕ್ಕಮ್ಮ ಸಂಪ್ರದಾಯಸ್ಥರಂತೆ ಬದುಕಿದ್ದರೂ ಆಕೆಯ ಬದುಕಿನಲ್ಲಿ ಪರ ಪುರುಷನ ಛಾಯೆ ಕ್ಷುಲ್ಲಕ ಸಂಗತಿಯಾಗಿ ಬರುತ್ತದೆ. ಸದಾ ಮುಷ್ಕರದಲ್ಲಿ ತೊಡಗಿಸಿಕೊಂಡ ಗಂಡ ಶಾಮಣ್ಣನ ಕೆಲಸ ಎಷ್ಟು ದಿನ ಇರುತ್ತೋ ಗೊತ್ತಿಲ್ಲದಿದ್ದರಿಂದ ಮನೆ ನಡೆಸಲು ಪಾರು ಚಿಕ್ಕಮ್ಮ ೩೦೦ ರೂಪಾಯಿಯ ಕೆಲಸಕ್ಕೆ ಸೇರಿಕೊಳ್ಳುತ್ತಾಳೆ. ಪರಪುರುಷನ ಸಂಬಂಧವನ್ನು ಒಪ್ಪಿಕೊಳ್ಳುತ್ತಾಳೆ. ಬದುಕಿನ ಅನಿವಾರ್ಯತೆಯಿಂದ ಸಂಪ್ರದಾಯಸ್ಥ ಪಾರು ಚಿಕ್ಕಮ್ಮನ ಬದುಕು ಕ್ಷುಲ್ಲಕ ಸಂಗತಿಗಳಿಗೆ ಆಹ್ವಾನವೀಯುತ್ತದೆ.

ಗಂಡ ಮತ್ತು ಪ್ರಿಯಕರರಿದ್ದೂ ಪ್ರೀತಿ ಸಿಗದ 'ಸ್ಟೆಲ್ಲಾ ಎಂಬ ಹುಡುಗಿ' ಕತೆಯ ಸ್ಟೆಲ್ಲಾಳ ಬದುಕಿನಲ್ಲಿ ಅಸಹಾಯಕತೆಯೇ ತುಂಬಿಕೊಂಡಿದೆ. ಸ್ಟೆಲ್ಲಾಳ ಗಂಡ ಸ್ಮಿತ್ ಕುಡಿತದ ಚಟಕ್ಕೆ ಅಂಟಿಕೊಂಡವನಾಗಿದ್ದಾನೆ. ಸ್ಟೆಲ್ಲಾಳ ಬತ್ತದ ಗದ್ದೆಯನ್ನು ಮಾರುವುದಕ್ಕೆ ಗಂಡ ಪೀಡಿಸಲು ಆರಂಭಿಸುತ್ತಾನೆ. ಆ ಹಣ ಕೊಟ್ಟೊಡನೆ ಆತ ತನ್ನನ್ನು ಬಿಟ್ಟು ಹೊರಟು ಹೋಗುತ್ತಾನೆ ಎನ್ನುವ ಭಾವ ಸ್ಟೆಲ್ಲಾಳಲ್ಲಿತ್ತು. ಪ್ರಿಯಕರ

ಫ್ರಾನ್ಸಿಸ್ ಆದರೂ ತನ್ನ ಬದುಕಿಗೆ ಆಶಾಕಿರಣವಾಗಿ ಬರುತ್ತಾನೆ ಎಂದು ಸ್ಟೆಲ್ಲಾ ಬಗೆದರೆ ಆತ ಕೂಡ ಸ್ಮಿತ್‌ನ ಪರಿಚಯದ ಸಂದರ್ಭದಲ್ಲಿ ಈಕೆಯನ್ನು 'ಸಿಸ್ಟರ್' ಎಂದು ಕರೆದು ಅವಳ ನೋವನ್ನು ಹೆಚ್ಚು ಮಾಡುತ್ತಾನೆ. ಕೊನೆಗೆ ಗಂಡ ಮತ್ತು ಪ್ರಿಯಕರ ಇಬ್ಬರೂ ಈಕೆಯನ್ನು ಆರ್ಥಿಕವಾಗಿ ಕಬಳಿಸುವ ರಣಹದ್ದುಗಳಂತೆ ಸ್ಟೆಲ್ಲಾಳಿಗೆ ಕಾಣಿಸಿಕೊಳ್ಳುತ್ತಾರೆ. ಇವರಿಬ್ಬರ ಕ್ರಿಯೆಗಳು ಈಕೆಯ ಬದುಕನ್ನು ಅಸಹನೀಯವನ್ನಾಗಿಸುತ್ತದೆ. ಆದರೂ ಸ್ಟೆಲ್ಲಾ ಮಗ ನಿಕ್‌ನಿಂದಾಗಿ ವರ್ತಮಾನದ ಬದುಕನ್ನು ಚೈತನ್ಯ ಪೂರ್ಣವಾಗಿ ಬದುಕುವ ನಿರ್ಧಾರ ಮಾಡುತ್ತಾಳೆ. "ತನ್ನ ನೆಲಕ್ಕಾಗಿ ಕಾದು ಕೂತು ಯಾವ ಹೊಂದಾಣಿಕೆ, ಅವಮಾನಕ್ಕಾದರೂ ಸಿದ್ಧವಾಗಿರುವ ಗಂಡ, ಅಬೂಬಕರ್‌ಗಿಂತ ಸೂಕ್ಷ್ಮವಾದ ಅಪಾಯಕಾರಿಯಾದ ಪ್ರಿಯಕರ ಫ್ರಾನ್ಸಿಸ್". (ಪಿ. ಲಂಕೇಶ್, ಸಮಗ್ರ ಕಥೆಗಳು, ೧೯೯೨, ಪುಟ ೪೦೩) ಇವರಿಬ್ಬರು ಸ್ಟೆಲ್ಲಾಳ ಬದುಕಿನ ದುರಂತಕ್ಕೆ ಕಾರಣರಾಗುತ್ತಾರೆ. ಸ್ಟೆಲ್ಲಾ ತನ್ನ ಬದುಕಿನ ದುರಂತಕ್ಕೆ ಕಾರಣಳಲ್ಲದಿದ್ದರೂ ಅದನ್ನು ಅನುಭವಿಸಲೇಬೇಕಾದ ಅನಿವಾರ್ಯತೆ ಆಕೆಗಿದೆ. ಗಂಡ ಮತ್ತು ಪ್ರಿಯಕರರ ಪುಟಗಳನ್ನು ತನ್ನ ಬದುಕಿನಿಂದ ದೂರ ಸರಿಸಿ ಮಗ ನಿಕ್‌ನಿಗಾಗಿ ಚೈತನ್ಯಪೂರ್ಣವಾಗಿ ಬದುಕುತ್ತಾಳೆ. ತನ್ನ ವೃತ್ತಿಯಾದ ನರ್ಸ್ ವೃತ್ತಿಯನ್ನು ಮತ್ತಷ್ಟು ನಿಷ್ಠೆಯಿಂದ ಮಾಡತೊಡಗುತ್ತಾಳೆ. ಹೀಗೆ ಸ್ಟೆಲ್ಲಾ ಅಸಹಾಯಕತೆಯಿಂದ ನರಳುತ್ತಿದ್ದರೂ, ಆಕೆಯ ಮುಂದಿನ ನಡೆ ಜೀವನ್ಮುಖಿಯಾಗಿದೆ. ಚೇತನ ಪೂರ್ಣತ್ವಕ್ಕೆ, ಜೀವನ್ಮುಖಿತ್ವಕ್ಕೆ ಸ್ಟೆಲ್ಲಾ ಒಳ್ಳೆಯ ಉದಾಹರಣೆಯಾಗಿದ್ದಾಳೆ.

ಲೈಂಗಿಕ ಬಯಕೆಗಳು ಪ್ರಕೃತಿ ಸಹಜವಾದದ್ದು. ಲೈಂಗಿಕತೆಯು ಮನುಷ್ಯನ ಪ್ರಾಥಮಿಕ ಅವಶ್ಯಕತೆಗಳಲ್ಲಿ ಒಂದಾಗಿದೆ. ಆದರೆ ಈ ಅವಶ್ಯಕತೆಯನ್ನು ಆರೋಗ್ಯಕರವಾದ ಸಂಬಂಧಗಳಲ್ಲಿ ಪೂರೈಸಿಕೊಳ್ಳಬೇಕು. ಆದರೆ ಕೆಲವು ಸಂದರ್ಭಗಳಲ್ಲಿ ಈ ಲೈಂಗಿಕತೆಯು ಅನೈತಿಕವಾಗಿರುತ್ತದೆ. ಯಾವುದೋ ಕಾರಣಗಳಿಂದ ಹತ್ತಿಕ್ಕಿದ ಲೈಂಗಿಕತೆಯು ಸಾಂಪ್ರದಾಯಿಕ ಕಟ್ಟುಪಾಡುಗಳನ್ನು ಮೀರಿ ಬಳಕೆಯಾಗುತ್ತವೆ. ಮಹಿಳೆಯ ಮೇಲೆ ಸಮಾಜವು ಅನೇಕ ನಿರ್ಬಂಧಗಳನ್ನು ಹೇರಿದಂತೆ ಲೈಂಗಿಕತೆಯ ಮೇಲೂ ಪುರುಷನಿಗಿಲ್ಲದ ಕಟ್ಟುಪಾಡುಗಳನ್ನು ಹೇರಿದೆ. ಈ ಸಂದರ್ಭದಲ್ಲಿ ಮಹಿಳೆ ಕದ್ದುಮುಚ್ಚಿ ತನ್ನ ಲೈಂಗಿಕ ದಾಹವನ್ನು ತೀರಿಸಿಕೊಳ್ಳುತ್ತಾಳೆ. ಇಂತಹ ಲೈಂಗಿಕ ಸಂಬಂಧಗಳನ್ನು ಲಂಕೇಶ್ ತಮ್ಮ ಕಥನ ಸಾಹಿತ್ಯದಲ್ಲಿ ಅನಾವರಣ ಮಾಡಿದ್ದಾರೆ.

ಪುರುಷ ಪ್ರಧಾನದ ಈ ನಮ್ಮ ಸಮಾಜದಲ್ಲಿ ವಿಧುರನಿಗೆ ಮಾತ್ರ ಮರು ಮದುವೆಯಾಗುವ ಅವಕಾಶವನ್ನು ಕಲ್ಪಿಸಿಕೊಟ್ಟಿದೆ. ಆ ಮೂಲಕ ಆ ವಿಧುರನು ಮತ್ತೆ ನೈತಿಕತೆಯ ಚೌಕಟ್ಟಿನಲ್ಲಿ ಲೈಂಗಿಕತೆಯನ್ನು ಬಳಸಿಕೊಳ್ಳುವ ಅವಕಾಶ ಮಾಡಿಕೊಟ್ಟಿದೆ. ಆದರೆ ಇದೇ ಸಮಾಜ ಮಹಿಳೆಯರಿಗೆ ಇಂತಹ ಅವಕಾಶ ಮಾಡಿಕೊಟ್ಟಿಲ್ಲ. ಇಂತಹ ಸಂದರ್ಭದಲ್ಲಿ ಮಹಿಳೆ ಪ್ರಕೃತಿ ಸಹಜವಾದ ಲೈಂಗಿಕತೆಯನ್ನು ಬಲವಂತವಾಗಿ ಹತ್ತಿಕ್ಕಬೇಕಾಗುತ್ತದೆ. ಅಥವಾ ಕದ್ದುಮುಚ್ಚಿಯೋ, ಬೇರೆ ಮಾರ್ಗದಲ್ಲಿಯೋ ತನ್ನ ಲೈಂಗಿಕ ಆಸೆಗಳನ್ನು ತಣಿಸಿಕೊಳ್ಳಬೇಕಾಗುತ್ತದೆ. ಲಂಕೇಶರ 'ದಾಳಿ' ಕತೆಯ ಮಲ್ಲಿ ತನ್ನ ದೈಹಿಕ ಕಾಮನೆಗಳನ್ನು ಹತ್ತಿಕಲಾರದೆ ಬೇರೆ ದಾರಿಯ ಮೂಲಕ ಅದನ್ನು ತೀರಿಸಿಕೊಳ್ಳುವುದಕ್ಕೆ ಮುಂದಾಗುತ್ತಾಳೆ. ಚಿಕ್ಕ ವಯಸ್ಸಿಗೆ ವಿಧವೆಯಾದ ಮಲ್ಲಿಗೆ ಸಮಾಜದ ಧೋರಣೆಯಿಂದಾಗಿ ಮರು ಮದುವೆ ಸಾಧ್ಯವಾಗುವುದಿಲ್ಲ. ಸಮಾಜದ ಕಟ್ಟುಪಾಡಿನ ಜೊತೆ ಹೆಜ್ಜೆ ಹಾಕುವ ಮಲ್ಲಿ ಸಮಾಜದ ಕಣ್ಣು ತಪ್ಪಿಸಿ ತನ್ನ ಬಯಕೆಯನ್ನು ತೀರಿಸಿಕೊಳ್ಳುತ್ತಾಳೆ. 'ಸಲೀಂ' ಎಂಬುವವನ ಜೊತೆಗೂಡಿ ತನ್ನ ಲೈಂಗಿಕ ಬಯಕೆಯನ್ನು ತೀರಿಸಿಕೊಳ್ಳುವ ಮಲ್ಲಿ ಮರುಕ್ಷಣ ತಾನು ಅತ್ಯಾಚಾರಕ್ಕೆ ಒಳಗಾದ ರೀತಿಯಲ್ಲಿ ವಾತಾವರಣ ಸೃಷ್ಟಿಸುತ್ತಾಳೆ. ಇದು ಕಟ್ಟುಪಾಡು ವಿಧಿಸಿದ ಸಮಾಜದ ಕಣ್ಣಿಗೆ ಮಣ್ಣೆರಚುವ ಬುದ್ಧಿವಂತಿಕೆಯ ಕೆಲಸವಾಗುತ್ತದೆ. ಆದರೆ ಇಂತಹ ಬುದ್ಧಿವಂತಿಕೆ ರಜಾಕರರ ಸಲೀಂನನ್ನು ಬಲಿತೆಗೆದುಕೊಳ್ಳುತ್ತದೆ. ಇದು ಪುರುಷ ಪ್ರಧಾನ ಸಮಾಜದ ಸೋಲಾಗಿ ನಿಲ್ಲುತ್ತದೆ. ಆದರೆ ಆ ಸಮಾಜಕ್ಕೆ ತನಗೆ ಸೋಲಾಗಿರುವುದರ ಅರಿವೇ ಇಲ್ಲದಿರುವುದು ವಿಪರ್ಯಾಸವಾಗಿದೆ.

ಲಂಕೇಶರ 'ಸುಭದ್ರ' ಕತೆಯ ಸುಭದ್ರ ಮಧ್ಯದಲ್ಲಿಯೇ ಕಾಲೇಜು ಬಿಟ್ಟು ಪ್ರಖ್ಯಾತ ಕಾರ್ಡಿಯಾಲಜಿಸ್ಟ್‌ನೊಂದಿಗೆ ಮದುವೆಯಾಗಿ ಹೊರ ದೇಶದಲ್ಲಿ ನೆಲೆಸುತ್ತಾಳೆ. ಆದರೆ ಮದುವೆಯಾದ ಮೂರೇ ವರ್ಷಕ್ಕೆ ವಿಧವೆಯಾದ ಸುಭದ್ರ ತನ್ನೂರಿಗೆ ತನ್ನ ಎರಡು ಮಕ್ಕಳನ್ನು ಕರೆದುಕೊಂಡು ಬಂದು ಸ್ವತಂತ್ರ ಜೀವನವನ್ನು ಮಾಡತೊಡಗುತ್ತಾಳೆ. "ತನ್ನ ಮೂರು ವರ್ಷದ ಪ್ರೇಮಕ್ಕೆ ನಿಷ್ಠವಾಗಿ ಉಳಿಯುವ ನಿರ್ಧಾರ ತನ್ನ ನೋವು ತನ್ನನ್ನು ಕೊಲ್ಲದಂತೆ, ಆದರೆ ತನ್ನನ್ನು ಹೊಸ ಆಶೆಗಳಿಗೆ ಹಚ್ಚದಂತೆ ನೋಡಿಕೊಳ್ಳುವ ನಿರ್ಧಾರ" (ಪಿ. ಲಂಕೇಶ್, ಸಮಗ್ರ ಕಥೆಗಳು, ೧೯೯೨, ಪುಟ ೪೧೩) ವನ್ನು ಸುಭದ್ರ ಮಾಡುತ್ತಾಳೆ. ಆದರೆ ತನ್ನ ಗಂಡನ ಪ್ರೀತಿಗೆ ನಿಷ್ಠಳಾಗಿ ಉಳಿಯುವ ನಿರ್ಧಾರ ಮಾಡಿದ್ದ ಸುಭದ್ರಳಿಗೆ ತನ್ನ ಮನಸ್ಸಿನಲ್ಲಿ ಏಳುತ್ತಿದ್ದ ಲೈಂಗಿಕತೆಯ ಅಲೆಗಳನ್ನು ಹತ್ತಿಕ್ಕಲಾಗುತ್ತಿರಲಿಲ್ಲ. ಆದ್ದರಿಂದಲೇ ತನ್ನ ಸಹಪಾಠಿಯಾಗಿದ್ದ, ಈಗ ವರದಿಗಾರನಾಗಿ ಸಾಕಷ್ಟು ಹೆಸರು ಮಾಡಿರುವ ಸುರೇಶ್‌ನಿಗೆ ಪಕ್ಕದ ಮನೆಯವರಿಂದ ತನಗೆ ಮಾನಸಿಕ

ತೊಂದರೆಯಾಗುತ್ತಿರುವುದಾಗಿ ಸುಳ್ಳು ಹೇಳುತ್ತಾಳೆ. ಈಗ ಸುಭದ್ರ ತನ್ನ ಗಂಡನ ನೆನಪುಗಳಿಂದ ಸುಖವಾಗಿಲ್ಲ. ಬದುಕನ್ನು ಕಠೋರ ವ್ರತದಂತೆ ಆಚರಿಸುತ್ತಿದ್ದ ಸುಭದ್ರಳ ಮನಸ್ಸು ಆಕೆಯ ವ್ರತದಲ್ಲಿ ಪಾಲ್ಗೊಳ್ಳಲು ನಿರಾಕರಿಸಿದೆ. ಆದ್ದರಿಂದಲೇ ಸುಳ್ಳು ಆರೋಪವನ್ನು ಪಕ್ಕದ ಮನೆಯವರ ಮೇಲೆ ಹೊರಿಸಲು ಪ್ರಯತ್ನಿಸುತ್ತಾಳೆ. ಆ ಮೂಲಕ ತನ್ನ ಸಹಪಾಠಿ ಸುರೇಶ್‌ನ ಹತ್ತಿರಕ್ಕೆ ಹೋಗಲು ಮುಂದಾಗುತ್ತಾಳೆ. "Is It Worith It? ಇದೆಲ್ಲ ಹಟದಿಂದ ಏನಾದರೂ ಸುಖ ಇದೆಯೇ?" (ಪಿ. ಲಂಕೇಶ್, ಸಮಗ್ರ ಕಥೆಗಳು, ೧೯೯೨, ಪುಟ ೪೧೯) ಎನ್ನುವ ಸುಭದ್ರ ತನ್ನ ಲೈಂಗಿಕ ಸನ್ಯಾಸತ್ವವನ್ನು ಬಿಟ್ಟು ಬಿಡುವ ಮನಸ್ಸು ಮಾಡುತ್ತಾಳೆ. ಲೈಂಗಿಕ ಬಯಕೆಗಳನ್ನು ಹತ್ತಿಕ್ಕಲಾರದ ಸುಭದ್ರ ತನ್ನ ಬಯಕೆಗಳನ್ನು ಈಡೇರಿಸಿಕೊಳ್ಳಲು ಸುಳ್ಳಿನ ಮೊರೆ ಹೋಗುತ್ತಾಳೆ. ಸಮಾಜದ ಕಟ್ಟುಪಾಡುಗಳಿಂದ ಸುಭದ್ರ ಲೈಂಗಿಕ ಬಯಕೆಗಳ ಸಂಘರ್ಷಕ್ಕೊಳಗಾಗಬೇಕಾಗುತ್ತದೆ.

ಗಂಡ ಬೇರೆಯಾಗಿ ಹೋದ ನಂತರ 'ಕೃತಜ್ಞತೆ' ಕತೆಯ ನಿರ್ಮಲ ಸ್ವಂತ ಉದ್ಯೋಗ ಪ್ರಾರಂಭಿಸುತ್ತಾಳೆ. ಪುಸ್ತಕದ ಅಂಗಡಿ ತೆರೆದ ನಿರ್ಮಲಳಿಗೆ ಕುವೆಂಪು, ಬೇಂದ್ರೆ, ಕುಮಾರವ್ಯಾಸ, ವಚನಕಾರರು, ಷೇಕ್ಸ್‌ಪಿಯರ್ ಮುಂತಾದವರಿಗಿಂತ ವಾತ್ಸಾಯನ, ಹೆರಾಲ್ಡ್ ರಾಬಿನ್ಸ್, ಟೆಡ್‌ಮಾರ್ಕ್ ಪುಸ್ತಕಗಳು ಹೆಚ್ಚಾಗಿ ಮಾರಾಟವಾಗುವುದನ್ನು ಕಂಡು ಕುತೂಹಲಗೊಳ್ಳುತ್ತಾಳೆ. ಇದೇ ಕುತೂಹಲದಿಂದ ಆ ಪುಸ್ತಕಗಳನ್ನು ಓದಲು ಆರಂಭಿಸುತ್ತಾಳೆ. "ಹಾಗೆಯೇ ಅನೇಕ ಫಾಸ್ಟ್ ಪುಸ್ತಕಗಳನ್ನು... ಮೊದ ಮೊದಲು ಅವುಗಳಲ್ಲಿ ಏನಿದೆ ಅನ್ನಿಸಿದರೂ ತನಗೆ ಗೊತ್ತಿಲ್ಲದ ವೇಗವಾದ ಪ್ರವಾಹದಂತೆ ಉಕ್ಕುವ ಜೀವಸೆಲೆ ಅವುಗಳಲ್ಲಿರುವುದಾಗಿ, ತಾನು ತಿಳಿಯದೆ ಇದ್ದ ಜಗತ್ತೊಂದು, ವರ್ಣಮಯ, ಭ್ರಮೆಗಳಿಂದ ಕೂಡಿದ ಅನುಭವಗಳೆಲ್ಲ ಅಲ್ಲಿರುವುದಾಗಿ ಅನ್ನಿಸತೊಡಗಿತ್ತು". (ಪಿ. ಲಂಕೇಶ್, ಸಮಗ್ರ ಕಥೆಗಳು, ೧೯೯೨, ಪುಟ ೨೯೭) ನಿರ್ಮಲ ಕೆಲವೊಮ್ಮೆ ಈ ಪುಸ್ತಕಗಳನ್ನು ಎಲ್ಲರೆದುರಿಗೇ ಓದಲಾಗದೆ ಮುಚ್ಚಿಕೊಂಡು ಓದುತ್ತಿದ್ದಳು. ಅಂಗಡಿಯಲ್ಲಿ ಕೂತಿದ್ದಾಗ, ಒಮ್ಮೊಮ್ಮೆ ಬಿಡುವಾದಾಗ ಆಕೆ ಓದಲು ಪ್ರಾರಂಭಿಸುತ್ತಾಳೆ. ಓದದೆ ಸುಮ್ಮನೆ ಕುಳಿತಾಗ ತನ್ನ ಬದುಕು ಏನನ್ನೋ ಕಳೆದುಕೊಂಡಂತೆ ಎಂದು ಆಕೆಗೆ ಅನ್ನಿಸಲು ಪ್ರಾರಂಭಿಸುತ್ತದೆ.. ಗಂಡನ ಕಾಮದ ಅಬ್ಬರದಲ್ಲಿ ನಿರುತ್ಸಾಹಳಾಗಿದ್ದ ನಿರ್ಮಲೆಗೆ ಈಗ ಒಂಟಿಯಾಗಿದ್ದ ಸಮಯದಲ್ಲಿ ಈ ಪುಸ್ತಕಗಳು ಉತ್ಸಾಹವನ್ನು ತುಂಬಿದವು. ಅವಳ ಸುಪ್ತ ಮನಸ್ಸಿನಲ್ಲಿ ಹುದುಗಿದ್ದ ಲೈಂಗಿಕ ಮನೋಭಾವನೆಯನ್ನು ಈ ಪುಸ್ತಕಗಳು ಎಚ್ಚರಿಸುತ್ತವೆ. ಇದೇ ಭಾವನೆಯು ಕೆಲಸಕ್ಕೆ ನಿರ್ಮಲಾಳ ಅಂಗಡಿಗೆ ಬಂದ ಪ್ರಕಾಶನ ಬಗ್ಗೆ ಆಸಕ್ತಿ ಮೂಡಲು ಆರಂಭಿಸುತ್ತದೆ. ಒಂಟಿಯಾಗಿದ್ದ ನಿರ್ಮಲಾಳ ಮನಸ್ಸಿನಲ್ಲಿ ನವಿರಾದ ಲೈಂಗಿಕ

ಬಯಕೆಗಳು ಪ್ರವೇಶ ಪಡೆಯುತ್ತದೆ. ಆ ಬಯಕೆಗಳನ್ನು ತಣಿಸಲು ಫಾಸ್ಟ್ ಪುಸ್ತಕಗಳನ್ನು ಓದುವ ಹವ್ಯಾಸ ಬೆಳೆಸಿಕೊಂಡ ನಿರ್ಮಲಾಳಿಗೆ ಪ್ರಕಾಶನಲ್ಲಿ ಪ್ರೀತಿಯ ಭಾವನೆ ಬೆಳೆಯುತ್ತದೆ. ಆದರೆ ಅದನ್ನು ಹತ್ತಿಕ್ಕುವ ನಿರ್ಮಲ ಅಸಹಾಯಕ ಸ್ಥಿತಿಗೆ ತಲುಪುತ್ತಾಳೆ. ಹೀಗೆ ಮಲ್ಲಿ, ಸುಭದ್ರ, ನಿರ್ಮಲ ಇವರ ಬದುಕಿನ ಮೇಲೆ ಪುರುಷ ಪ್ರಧಾನ ಸಮಾಜದ ಕಟ್ಟುಪಾಡು ತನ್ನ ಅಚ್ಚೊತ್ತಿದೆ.

ಲಂಕೇಶರ ಕಥನ ಸಾಹಿತ್ಯದಲ್ಲಿ ವಿವಿಧ ಸ್ತರ ಮಹಿಳೆಯರು ಕಾಣಸಿಗುತ್ತಾರೆ. ವಿದ್ಯಾವಂತ ಮಹಿಳೆಯರು, ಉದ್ಯೋಗಸ್ಥ ಮಹಿಳೆಯರು, ಅನಕ್ಷರಸ್ಥ ಮಹಿಳೆಯರು, ವೇಶ್ಯೆಯ ಜೀವನ ನಡೆಸುವ ಮಹಿಳೆಯರು ಹೀಗೆ ಹತ್ತು ಹಲವು ಸ್ತರಗಳ ಮಹಿಳೆಯರನ್ನು ನಾವು ಕಾಣಬಹುದಾಗಿದೆ. ಯಾವುದೇ ಸ್ತರದ ಹೆಣ್ಣು ಮಕ್ಕಳಾದರೂ ಅದಮ್ಯವಾದ ಬದುಕಿನ ಹಂಬಲವನ್ನು ಅವರಲ್ಲಿ ಕಾಣಬಹುದಾಗಿದೆ. ಪುರುಷನಿಗೆ ಪೂರಕವಾಗಿ ಮಹಿಳೆಯನ್ನು ಸಾಹಿತ್ಯದಲ್ಲಿ ಬಳಸಿಕೊಳ್ಳುತ್ತಿದ್ದ ಸಂದರ್ಭದಲ್ಲಿ ಲಂಕೇಶ್ ಮಹಿಳೆಯನ್ನು ಸ್ವತಂತ್ರ ವ್ಯಕ್ತಿತ್ವವುಳ್ಳವರಾಗಿ ಕಂಡಿದ್ದಾರೆ.

"ಲಂಕೇಶರಲ್ಲಿ ಹೆಣ್ಣನ್ನು ಕುರಿತ ಹೊಸ ಸಂವೇದನೆಯೊಂದು ಇತ್ತು ಎನ್ನುವುದೇ ಮುಖ್ಯವಾಗಿದೆ. ಎಲ್ಲಾ ಬಗೆಯ ಉಪಾಧಿಗಳಿಂದ ಮುಕ್ತವಾದ ಅವಳು ಅವಳೇ ಆಗಿರುವ ಸ್ವತಂತ್ರ ವ್ಯಕ್ತಿತ್ವದ ಹಿನ್ನೆಲೆಯಲ್ಲಿಯೇ ಅವರು ಹೆಣ್ಣನ್ನು ಗುರುತಿಸಿದರು. ಅವರ ಒಟ್ಟು ಸಾಹಿತ್ಯದ ಮಟ್ಟಿಗೂ ಇದು ನಿಜ ಹೆಣ್ಣನ್ನು ಅವಳ ನಿಜದಲ್ಲಿ ನೋಡುವ, ಹುಡುಕುವ, ಅವಳ ವ್ಯಕ್ತಿತ್ವವನ್ನು ಘನವಾಗಿ ಕಟ್ಟಿಕೊಡುವ ನಿರಂತರ ಪ್ರಯತ್ನವೊಂದು ಅವರ ಸಾಹಿತ್ಯದಲ್ಲಿ ಕಾಣುತ್ತದೆ. ಅವಳ ಒಳ ಬದುಕನ್ನು ಶೋಧಿಸುವ ಅದಕ್ಕೆ ಅಧಿಕೃತತೆಯನ್ನು ಕೊಡುವ ಅವರ ಹಂಬಲಕ್ಕೆ ಹಲವಾರು ಪಾತ್ರಗಳ ಸಾಕ್ಷ್ಯವಿದೆ." (ಎಂ.ಎಸ್.ಆಶಾದೇವಿ, ಸ್ತ್ರೀಮತನುತ್ತರಿಸಲಾಗದೆ?, ೨೦೦೬ ಪುಟ ೪೬-೪೭) ಈ ಮಾತಿಗೆ ಅನುರೂಪವಾಗಿ ಲಂಕೇಶ್ ಬದುಕಿಗೆ ಸವಾಲು ಎಸೆದವರಂತೆ ಬದುಕುವ, ದಿಟ್ಟ ಮಹಿಳೆಯರನ್ನು ತಮ್ಮ ಕಥನ ಸಾಹಿತ್ಯ ಅಭಿವ್ಯಕ್ತಿಸಿದ್ದಾರೆ. ಲಿಪ್‌ಸ್ಟಿಕ್, ಕಾಡಿಗೆಯಂತಹ ಮೇಕಪ್‌ಗಳಿಂದ ದೂರವಿರುವ ಸರಳ, ಗಟ್ಟಿ ಮಹಿಳೆಯರು ಲಂಕೇಶರ ಕಥನ ಸಾಹಿತ್ಯದಲ್ಲಿ ಹೇರಳವಾಗಿ ದೊರೆಯುತ್ತಾರೆ. ಅಸ್ತಿತ್ವವನ್ನು ತಮ್ಮ ಬದುಕಿನಲ್ಲಿ ಕಂಡುಕೊಳ್ಳುವುದಕ್ಕೆ ಹೆಣಗಾಡುವ ಕಥಾನಾಯಕರ ನಡುವೆ ಸ್ವತಂತ್ರ ವ್ಯಕ್ತಿತ್ವದ ಮಹಿಳೆಯರು ಲಂಕೇಶರ ಕಥನ ಸಾಹಿತ್ಯದಲ್ಲಿ ಪ್ರಜ್ವಲಿಸುತ್ತಾರೆ.

# ಅಧ್ಯಾಯ – ೮
# ಇತರ ನವ್ಯ ಲೇಖಕರ ಕಥನ ಸಾಹಿತ್ಯದಲ್ಲಿ ಮಹಿಳೆ
## (ಪೂರ್ಣಚಂದ್ರ ತೇಜಸ್ವಿ, ಕುಸುಮಾಕರ ದೇವರಗೆಣ್ಣೂರು, ಗಿರಿ, ಟಿ.ಜಿ.ರಾಘವ, ರಾಜಲಕ್ಷ್ಮಿ ಎನ್.ರಾವ್, ವೀಣಾ ಶಾಂತೇಶ್ವರ)

ನವ್ಯದ ಉಬ್ಬರದ ಕಾಲಘಟ್ಟದಲ್ಲಿ ಬರೆಯಲು ಆರಂಭಿಸಿದ ಪೂರ್ಣಚಂದ್ರ ತೇಜಸ್ವಿಯವರ ಕಥನ ಸಾಹಿತ್ಯದಲ್ಲಿ ಶ್ರೀ ಸಾಮಾನ್ಯನಿಗೆ ಬಹುಮುಖ್ಯ ಸ್ಥಾನವಿದೆ. ನಮ್ಮ ಸುತ್ತ-ಮುತ್ತ ಇರುವ ಜನರೇ ತೇಜಸ್ವಿಯವರ ಕಥನ ಸಾಹಿತ್ಯದಲ್ಲಿ ಸ್ಥಾನ ಪಡೆದಿದ್ದಾರೆ. ಪತ್ತೇದಾರಿಕೆ ಇವರ ಕಥನ ಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ. ಆ ಮೂಲಕ ಓದುಗರನ್ನು ಸೆಳೆಯುವ ಪ್ರಯತ್ನವನ್ನು ಇವರು ಮಾಡುತ್ತಾರೆ. ನಿರೂಪಕರಾಗಿ ಕಥನ ಸಾಹಿತ್ಯದ ಪಾತ್ರವಾಗಿ ಬಿಡುವ ತೇಜಸ್ವಿಯವರು ಸರಳ ಧಾಟಿಯಲ್ಲಿ ಓದಿಸಿಕೊಂಡು ಹೋಗುತ್ತಾರೆ. ರೋಷಕ್ಕೆ ಕಾರಣವಾಗುವ ಯಾವುದೇ ಸನ್ನಿವೇಶಗಳು ವ್ಯಕ್ತಿಯೊಬ್ಬನಿಂದ ಮಾತ್ರ ಸಾಧ್ಯವಾಗದೆ ಅದು ಆ ಇಡೀ ಪರಿಸರಕ್ಕೆ ಸಂಬಂಧ ಪಟ್ಟಿದ್ದಾಗಿರುತ್ತದೆ ಎಂಬುದರಲ್ಲಿ ತೇಜಸ್ವಿಯವರ 'ಸ್ವರೂಪ'ದ ತಾರ್ಕಿಕತೆ ಅಡಗಿದೆ. ಸ್ನೇಹಿತನಾಗಿರುವ ಬ್ರಾಹ್ಮಣ ಜಾತಿಯ ಹೇಮಂತನಿಗೆ ತನ್ನ ಕತೆ ಹೇಳಿಕೊಳ್ಳುವ ಶ್ರೀನಿವಾಸ ಶೂದ್ರ ಜಾತಿಗೆ ಸೇರಿದವನಾಗಿದ್ದಾನೆ. ಹಳ್ಳಿಗೆ ಬಂದಾಗ ಆತ ಬದುಕುವುದು ಮುಖ್ಯವಾದ ಸಂದರ್ಭದಲ್ಲಿ ಆತ ಶೋಷಿಸುವ ರೀತಿಯನ್ನು ಶ್ರೀನಿವಾಸ ರೂಢಿಸಿಕೊಳ್ಳುತ್ತಾನೆ. ಭೂತದ ಬಗೆಗೆ ಅಧ್ಯಯನ ಮಾಡುತ್ತಿರುವ ಶ್ರೀನಿವಾಸನಿಗೆ ವ್ಯವಸ್ಥೆಯಲ್ಲಿರುವ ಮೂಢನಂಬಿಕೆಗಳನ್ನು ವಿರೋಧಿಸಲು ಸಾಧ್ಯವಾಗುವುದಿಲ್ಲ. ಏಕೆಂದರೆ ಜನ ವಿಜ್ಞಾನಕ್ಕಿಂತ ಮೂಢನಂಬಿಕೆಯನ್ನು ಹೆಚ್ಚು ನಂಬುತ್ತಿರುವುದರಿಂದ ಇದನ್ನು ತಿರಸ್ಕರಿಸುವುದು ಹೇಗೆ ಎಂಬುದು ಶ್ರೀನಿವಾಸನ ಸಮಸ್ಯೆಯಾಗಿದೆ. ವಿದ್ಯಾವಂತನಾದ ಶ್ರೀನಿವಾಸ ಮೂಢನಂಬಿಕೆಗಳನ್ನು ತಿರಸ್ಕರಿಸಲು ಆಗದ ಪರಿಸ್ಥಿತಿಯಲ್ಲಿರುವಂತೆ ಹೊಲೆಯರ ಮಹಿಳೆಯರ ಜೊತೆ ಮೇಲ್ವರ್ಗದ ಪುರುಷರು ನಡೆದುಕೊಳ್ಳುವ ರೀತಿಯನ್ನು ಒಪ್ಪಿಕೊಳ್ಳುತ್ತಾನೆ. ಹೊಲೆಯ ಮಹಿಳೆಯರನ್ನು ಮೇಲ್ವರ್ಗದ ಗಂಡಸರು ಲೈಂಗಿಕವಾಗಿ ಬಳಸಿಕೊಳ್ಳುತ್ತಾರೆ. ಇದೇ ರೀತಿ ವಿದ್ಯಾವಂತನಾದ ಶ್ರೀನಿವಾಸ ಹೊಲೆಯರ ಹೆಂಗಸರ ಬಗ್ಗೆ ಅಭಿಪ್ರಾಯವನ್ನು ಹೊಂದಿದ್ದಾನೆ. ಕೇವಲ ಎಲೆ, ಅಡಿಕೆ ಆಸೆಗೆ ಅವರು ಮಲಗುವುದಿಲ್ಲ. ಅಷ್ಟು ಜಾಸ್ತಿ ಕೊಟ್ಟರೆ ಬರುತ್ತಾರೆ ಎನ್ನುವ ಆಶಯ ವ್ಯಕ್ತ ಪಡಿಸುತ್ತಾನೆ. 'ಸ್ವರೂಪ'ದಲ್ಲಿ ಇತರ ನವ್ಯ ಕೃತಿಗಳಲ್ಲಿ ಇರುವಂತೆ ಹೆಣ್ಣಿನ ಸಂದರ್ಭ ಬಂದಾಗಲೆಲ್ಲಾ ಲೈಂಗಿಕ ಪ್ರಜ್ಞೆ ಲೇಖಕರಲ್ಲಿ ಜಾಗೃತವಾಗಿ ಬಿಡುತ್ತದೆ. ಹೇಮಂತ ಒಬ್ಬ ಸೂಳೆ ನಿಲ್ಲಿಸಿಕೊಂಡು ಸಂಭೋಗ

ನಡೆಸಿದ್ದು, ಶ್ರೀನಿವಾಸನ ಉಪಾಧ್ಯಾಯಿನಿ ಪ್ರೇಯಸಿ ದೂರವಾದಾಗ ಅವಳ ಕನ್ಯತ್ವವನ್ನು ಕೆಡಿಸದೆ ಉಳಿಸಿದ್ದು ತಪ್ಪಾಯಿತು ಎಂದು ಅಂದುಕೊಳ್ಳುವುದು ಇವೆಲ್ಲಾ ಮಹಿಳೆ ಬಗೆಗೆ ಪುರುಷ ತಾಳಿರುವ ಸಾಮಾನ್ಯ ಭಾವನೆಗಳಾಗಿವೆ. ಮಹಿಳೆ ಪುರುಷನ ಅಧೀನವಾಗಿರಬೇಕೆಂಬ ವ್ಯವಸ್ಥೆಯ ಚಿಂತನೆ 'ಸ್ವರೂಪ'ದಲ್ಲಿಯೂ ವ್ಯಕ್ತವಾಗಿದೆ.

"ನೀವೇನೂ ಹೆಚ್ಚು ಚಿಂತಿಸಬೇಡಿ. ಶಾರಿಗೆ ದಾರಿ ಗೊತ್ತು. ಅವಳು ತೋರಿಸುತ್ತಾಳೆ. ಇನ್ನೊಂದು ವಿಷಯ ಜಗನ್ನಾಥ, ರಂಗಪ್ಪ ನಿಮಗೆ ಈವರೆಗೂ ಹೇಳಿರಲಿಲ್ಲ. ಇವಳಿಗೆ ನಾಲಿಗೆ ಇಲ್ಲ. ಆದ್ದರಿಂದ ಅವಳು ಮೌನವಾಗಿರೋದು ಅವಳ ನಾಲಿಗೆಯಿಂದ ಒಂದು ಕಥೆ; ಅವಳು ಇಲ್ಲಿನ ಒಬ್ಬ ಪ್ರೈಮರಿ ಸ್ಕೂಲ್ ಮಾಸ್ತರ ಹೆಂಡತಿಯಾಗಿದ್ದಳು. ಆದರೆ ಅವಳಿಗೆ ಅದೇನೋ ಆಗಿ ಇಲ್ಲಿ ಗಂಧದ ಮರ ಕಳ್ಳಸಾಗಣೆ ತಂಡದವರ ಮೈತ್ರಿ ಬೆಳೆಯಿತು. ಇವಳೂ ಅವರೊಡನೆ ಕೆಲಸ ಮಾಡತೊಡಗಿದಳು. ಇವಳ ಗಂಡ ಇವಳನ್ನು ಬಿಟ್ಟು ಬೇರೆ ಊರಿಗೆ ವರ್ಗ ಮಾಡಿಸಿಕೊಂಡು ಹೋದನಂತೆ. ಈಕೆಗೆ ನನ್ನ ಪರಿಚಯವಾದ ನಂತರ ಒಂದು ದಿನ ಈಕೆಯನ್ನು ಯಾರೋ ದಾರಿಯಲ್ಲಿ ಹಿಡಿದು ನಾಲಿಗೆಯನ್ನು ಕೊಯ್ದು ಹಾಕಿದ್ದರು. ಅದರ ಉದ್ದೇಶ ಸ್ಪಷ್ಟ. ಈಕೆ ತನಗೆ ಹೊತ್ತಿರುವ ರಹಸ್ಯಗಳನ್ನೆಲ್ಲಾ ಇನ್ನೆಲ್ಲಿ ಬಯಲು ಮಾಡಿಬಿಡುತ್ತಾಳೋ ಎಂದು ಇರಬೇಕು! ಈಕೆಗೆ ಏನೇನು ಗೊತ್ತಿದ್ದಿತೋ ಏನೋ! ಬಹುಶಃ ಇಲ್ಲಿ ವ್ಯಾಪಕವಾಗಿ ಕಡಲು ತೀರದಿಂದ ನಡೆಯುವ ಚಿನ್ನದ ಸಾಗಾಣಿಕೆಗೂ ಸಂಬಂಧವಿದ್ದಿರಬೇಕು. ನಾನು ರಕ್ತಸಿಕ್ತವಾಗಿ ಬಿದ್ದಿದ್ದ ಈಕೆಯನ್ನು ಬದುಕಿಸುವುದರ ಬಗ್ಗೆಯೇ ಹೆಚ್ಚು ಯೋಚಿಸಿದೆ. ಇವಳಿಂದ ಹೊರ ಬೀಳಬಹುದಾದ ರಹಸ್ಯ, ಕುತೂಹಲಗಳು ಯಾರಿಗಾದರೂ ಬೇಕಾಗಿದೆ ಹೇಳಿ?" (ಪೂರ್ಣ ಚಂದ್ರ ತೇಜಸ್ವಿ, ನಿಗೂಢ ಮನುಷ್ಯರು, ೨೦೧೩, ಪುಟ ೧೩೮) 'ನಿಗೂಢ ಮನುಷ್ಯರು' ಕೃತಿಯಲ್ಲಿನ ಶಾರಿ ಬಗ್ಗೆ ಜಗನ್ನಾಥ ಗೋಪಾಲಯ್ಯನಿಗೆ ಈ ಮಾತುಗಳನ್ನು ತಿಳಿಸುತ್ತಾನೆ. ಕಳ್ಳಸಾಗಾಣಿಕೆಯವರ ಮೈತ್ರಿ ಸಂಪಾದಿಸಿದ ಶಾರಿಗೆ ಒದಗಿದ ಸ್ಥಿತಿಯನ್ನು ಇದು ಅನಾವರಣ ಮಾಡುತ್ತದೆ. ಕಳ್ಳ ಸಾಗಾಣಿಕೆಯವರ ನಿರ್ದಯ ಗುಣ ಮತ್ತು ಕೆಟ್ಟ ದಾರಿ ತುಳಿದವರಿಗೆ ಕೆಟ್ಟ ಸ್ಥಿತಿ ಒದಗಿ ಬರುವುದನ್ನು ಎರಡನ್ನು ಏಕಕಾಲಕ್ಕೆ ಇದು ವ್ಯಕ್ತಪಡಿಸುತ್ತದೆ.

ತೇಜಸ್ವಿಯವರ 'ಸ್ವರೂಪ' ಮತ್ತು 'ನಿಗೂಢ ಮನುಷ್ಯರು' ಕೃತಿಗಳು ಪುರುಷ ಲೋಕದ್ದು. ಅಲ್ಲಿ ಮಹಿಳೆಗೆ ಸ್ಥಾನ ಇದ್ದು ಇಲ್ಲದಂತೆ. ಆದರೆ ಅವರ 'ಕಿರಗೂರಿನ ಗಯ್ಯಾಳಿಗಳು' ಕೃತಿ ಗಟ್ಟಿ ಅಸ್ತಿತ್ವವಿರುವ ಮಹಿಳೆಯರನ್ನು ಕಟ್ಟಿಕೊಡುತ್ತದೆ. 'Man's World and Women's Place' ಎಂದು ಇಂಗ್ಲಿಷಿನ ಪುಸ್ತಕದ ಶೀರ್ಷಿಕೆ ಇದೆ. ಅಂದರೆ

ಪ್ರಪಂಚ ಇರುವುದು ಪುರುಷನದ್ದು. ಅದ್ರಲ್ಲಿ ಸ್ವಲ್ಪ ಜಾಗ ಇರೋದು ಮಹಿಳೆಗೆ ಇದೇ ರೀತಿ 'ನಿಗೂಢ ಮನುಷ್ಯರು' ಮತ್ತು 'ಸ್ವರೂಪ' ಕಾದಂಬರಿಗಳು ಪುರುಷ ಲೋಕದ್ದಾಗಿದ್ದರೆ 'ಕಿರಗೂರಿನ ಗಯ್ಯಾಳಿಗಳು' ಕೃತಿ ಸಂಪೂರ್ಣವಾಗಿ ಮಹಿಳೆಯರದ್ದಾಗಿದೆ. ಇಲ್ಲಿನ ದಾನಮ್ಮ, ನಾಗಮ್ಮರನ್ನು ಒಳಗೊಂಡಂತೆ ಇಡೀ ಕಿರಗೂರಿನ ಮಹಿಳೆಯರು ಗಂಡಸರ ವಿರುದ್ಧ ಪ್ರತಿಭಟಿಸುವುದು ವಿಶಿಷ್ಟವಾದ ಸಂಗತಿಯಾಗಿದೆ. ಈ ಕೃತಿ ಇಡೀ ಸ್ತ್ರೀ ಸಮೂಹದ ದನಿಯನ್ನು ಪ್ರಕಟಿಸುತ್ತದೆ. "ಮುಂದೆ ನಿರೂಪಕ ಹೇಳುತ್ತಾನೆ: "ಕಿರಗೂರಿನ ಗಯ್ಯಾಳಿಗಳು ಶೇಂದಿ ಅಂಗಡಿ ನಾಶ ಮಾಡಿದ ಸುದ್ದಿ ಅದು ಹೇಗೋ ರೈತ ಚಳುವಳಿಗೆ ಸ್ಫೂರ್ತಿ ಕೊಟ್ಟಿತು" (ಪೂರ್ಣಚಂದ್ರ ತೇಜಸ್ವಿ, ಕಿರಗೂರಿನ ಗಯ್ಯಾಳಿಗಳು, ೨೦೦೬, ಪುಟ ೬) ಅನ್ಯಾಯದ, ಶೋಷಣೆಯ ವಿರುದ್ಧ ಮಹಿಳೆಯರ ಪ್ರತಿಭಟನೆಯೇ ವಿಶಿಷ್ಟ ಸಂಗತಿ. ಆ ಪ್ರತಿಭಟನೆ ಮತ್ತೊಂದು ಚಳುವಳಿಗೆ ಸ್ಫೂರ್ತಿಯಾಗುವ ವಿಚಾರ ಮಂಡಿಸುವ ರೀತಿ ಮತ್ತಷ್ಟು ಅನನ್ಯವಾಗಿದೆ. ಆದರೆ ಇಂತಹ ಅನನ್ಯತೆಯ ತೇಜಸ್ವಿಯವರು ನವ್ಯವನ್ನು ತೊರೆದ ನಂತರ ಅವರಲ್ಲಿ ಮೂಡಿದ್ದು ಒಂದು ಸಾಹಿತ್ಯ ಚಳುವಳಿಯ ಮನೋಧರ್ಮದ ಫಲವಾಗಿದೆ.

ಪುರುಷನ ದೌರ್ಜನ್ಯವನ್ನು ಮಹಿಳೆ ವಿರೋಧಿಸುವ ತೇಜಸ್ವಿಯವರ 'ಕಿರಗೂರಿನ ಗಯ್ಯಾಳಿಗಳು' ನೀಳ್ಗತೆ ತೇಜಸ್ವಿಯವರ ಕಥನ ಸಾಹಿತ್ಯದಲ್ಲೇ ವಿಶಿಷ್ಟವಾದದ್ದಾಗಿದೆ. ನೇರ ಪ್ರತಿಭಟನೆಯನ್ನು ನಾವು ಇಲ್ಲಿ ಕಾಣ ಬಹುದಾಗಿದೆ. ತಮ್ಮ ಗಂಡಂದಿರ ಲೈಂಗಿಕ ಅಸಮರ್ಥತೆಯನ್ನು ನೇರವಾಗಿ ಹೇಳಿಕೊಳ್ಳುವ ಕಿರಗೂರಿನ ಮಹಿಳೆಯರು ಆ ಊರಿನ ಚಲನಶೀಲತೆಗೆ ಸಾಕ್ಷಿಯಾಗಿದ್ದಾರೆ. ಸೀಗೇಗೌಡರ ಸೊಸೆ, ಸುಬ್ಬಯ್ಯನ ಹೆಂಡತಿ ದಾನಮ್ಮ, ನಾಗಮ್ಮ ಈ ಮೊದಲಾದ ಕಿರಗೂರಿನ ಹೆಂಗಸರು ಪುರುಷರ ಶೋಷಣೆಯನ್ನು ಬಹಿರಂಗವಾಗಿಯೇ ಪ್ರತಿಭಟಿಸುತ್ತಾರೆ. ಸೊಂಟ ಉಳುಕಿಸಿಕೊಂಡು ನಿಟ್ಟುಸಿರು ಬಿಡುತ್ತಿರುವ, ಹೆಂಡ ಕುಡಿದು ಮೈಯೆಲ್ಲಾ ಲಡ್ಡಾದ, ಜಾತಿ ಜಗಳ ತೆಕ್ಕೊಂಡು ತಮ್ಮ ಯೌವ್ವನ ಕಳೆಯುತ್ತಿರುವ ತಮ್ಮ ಗಂಡಂದಿರ ಬಗೆ ಕಿರಗೂರಿನ ಮಹಿಳೆಯರಿಗೆ ಅಗಾಧವಾದ ಸಿಟ್ಟಿದೆ. ಅವರ ಜೊತೆ ತಮ್ಮ ಪೂರ್ತಿ ಜೀವನವನ್ನು ಕಳೆದು ವ್ಯರ್ಥ ಮಾಡಿಕೊಳ್ಳುವ ಬದಲು ಯಾವನಾದರೂ ಸಿಕ್ಕರೆ ಅವನ ಜೊತೆ ಓಡಿ ಹೋಗಬೇಕೆಂದು ಅವರಿಗೆ ಅನ್ನಿಸುತ್ತದೆ. ಈ ಕಾರಣಕ್ಕಾಗಿ ನಾಗಮ್ಮ ನಂಬೂದರಿ ಪಂಡಿತನ ಜೊತೆ ಓಡಿ ಹೋದದ್ದು ಅಪರಾಧವೇ ಅಲ್ಲ, ಒಂದು ಸಾಹಸವೆಂಬಂತೆ ಅವರಿಗೆ ಕಾಣಿಸುತ್ತದೆ. ಕಿರಗೂರಿನ ಹೆಂಗಸರಲ್ಲಿ ಮೂಡಿದ್ದ ಈ ಅರಿವು ತಮ್ಮ ಅಸಮರ್ಥ ಗಂಡನನ್ನು ತೊರೆಯುವ ಪ್ರತಿಭಟನೆಯಾಗಿ ಕಾಣಿಸುತ್ತದೆ. ಅದರ ಜೊತೆ ಯಾವನಾಯ್ತೋ ಅವನ ಜೊತೆ ಓಡಿ ಹೋಗುವ ಅವರ ಮನಸ್ಥಿತಿ ಅವರ ಆಯ್ಕೆಯ

ಸ್ವಾತಂತ್ರ್ಯವನ್ನು ತೋರಿಸುತ್ತದೆ. ಪ್ರತಿಭಟನೆ ಮತ್ತು ಆಯ್ಕೆ ಸ್ವಾತಂತ್ರ್ಯ ಎನ್ನುವುದು ಮಹಿಳೆಯ ಪಾಲಿಗೆ ಇಲ್ಲವಾಗಿದ್ದ ವ್ಯವಸ್ಥೆಯಲ್ಲಿ ಅದನ್ನು ದಕ್ಕಿಸಿಕೊಳ್ಳುವ ಮಹಿಳೆಯರ ಛಾತಿಯನ್ನು ನಾವು ಇಲ್ಲಿ ಗಮನಿಸಬಹುದಾಗಿದೆ.

ಕುಸುಮಾಕರ ದೇವರಗೆಣ್ಣೂರುರವರ 'ನಾಲ್ಕನೆಯ ಆಯಾಮ' ಕಾದಂಬರಿಯು ಮನಃಶಾಸ್ತ್ರೀಯ ಹಿನ್ನೆಲೆಯಲ್ಲಿ ಮೂಡಿ ಬಂದಿದೆ. ಇದರ ಜೊತೆಗೆ ಈ ಕಾದಂಬರಿಯು ಅಸ್ತಿತ್ವವಾದ. ಅಸಂಗತವಾದ ಮೊದಲಾದ ಪಾಶ್ಚಾತ್ಯ ಪರಿಕಲ್ಪನೆಗಳನ್ನು ಬಳಸಿಕೊಂಡಿದೆ. "ಶ್ರೇಯ ಪ್ರೇಯಗಳ ಸಂಘರ್ಷದಲ್ಲಿ ಸಿಲುಕಿದ ವಿದ್ಯಾರ್ಥಿಯ ಕತೆ. ತನ್ನ ಬದುಕಿಗೆ ನಾಲ್ಕನೆಯ ಆಯಾಮ ಬರಬೇಕೆಂದು ಹೆಣಗಿದ ಆದರೆ ನಾಲ್ಕನೆಯ ಆಯಾಮವೆಂದರೇನು ಎಂಬುದರ ಅರಿವು ಮಾತ್ರ ಅವನಿಗಿರಲಿಲ್ಲ. ಇದೇ ಜೀವನದಲ್ಲಿಯ ಉತ್ಕಟ ದುರಂತ" (ಕುಸುಮಾಕರ ದೇವರಗೆಣ್ಣೂರು, ನಾಲ್ಕನೆಯ ಆಯಾಮ, ೨೦೧೩, ಒಳಪುಟ) ಇದನ್ನು ಈ ಇದು ಕಾದಂಬರಿಯು ಅನಾವರಣಗೊಳಿಸುತ್ತದೆ.

ಪ್ರಜ್ಞಾ ಪ್ರವಾಹ ತಂತ್ರವನ್ನು ಮೊಟ್ಟ ಮೊದಲ ಬಾರಿಗೆ ವಿಲಿಯಮ್ ಜೇಮ್ಸ್ ಎಂಬ ಮನೋವಿಜ್ಞಾನಿ ಬಳಸಿದರು. ಅವರ ಪ್ರಕಾರ ಪ್ರಜ್ಞೆ ಎಂಬುದು ವ್ಯಕ್ತಿಯ ಅಂತರಂಗಕ್ಕೆ ಸಂಬಂಧಿಸಿದ್ದಾಗಿದೆ. ಈ ಪ್ರಜ್ಞೆಯು ವ್ಯಕ್ತಿಗೆ ಆ ಕ್ಷಣದಲ್ಲಿ ಆಗುತ್ತಿರುವ ಮತ್ತು ಅಲ್ಲಿವರೆಗೆ ಆದ ಎಲ್ಲಾ ಅನುಭವಗಳ ಮಿಶ್ರಣವಾಗಿರುತ್ತದೆ. ಇದರಿಂದ ವ್ಯಕ್ತಿಯ ಮನೋ ವ್ಯಾಪಾರವನ್ನು ನಾವು ಅರಿಯಬಹುದಾಗಿದೆ. ಈ ತಂತ್ರವನ್ನು 'ಮನೋಮುದ್ರಾವಾದ' ಎಂದು ಸಹ ಕರೆಯಲಾಗಿದೆ. ಇಂತಹ ಪ್ರಜ್ಞಾ ಪ್ರವಾಹ ತಂತ್ರವನ್ನು ಲೇಖಕರು ಈ ಕಾದಂಬರಿಯಲ್ಲಿ ಬಳಸಿದ್ದಾರೆ. ಪ್ರಜ್ಞಾ ಪ್ರವಾಹ ತಂತ್ರ ನವ್ಯ ಕಾಲಘಟ್ಟದ ಪ್ರಮುಖ ಲಕ್ಷಣಗಳಲ್ಲಿ ಒಂದಾಗಿದೆ. ಪ್ರಜ್ಞಾ ಪ್ರವಾಹ ತಂತ್ರದಲ್ಲಿ ಬರವ ಸ್ಮೃತಿ ಚಿತ್ರಗಳು, ಕನಸುಗಳು ವ್ಯಕ್ತಿಯ ಮನೋವಿಶ್ಲೇಷಣೆಗೆ ಸಹಾಯ ಮಾಡುತ್ತದೆ. 'ನಾಲ್ಕನೆಯ ಆಯಾಮ' ಕಾದಂಬರಿಯ ನಾಯಕನ ಮನಸ್ಸಿನ ಮೂಲೆಯಲ್ಲಿದ್ದ ಪ್ರತಿಯೊಂದು ಭಾವನೆಗಳನ್ನು ಲೇಖಕರು ಪ್ರಜ್ಞಾ ಪ್ರವಾಹ ತಂತ್ರದ ಮೂಲಕ ಬಯಲು ಮಾಡಿದ್ದಾರೆ.

ಸ್ವತಂತ್ರ ವ್ಯವಹಾರವೆಂದರೆ ಭಯಪಡುವ ನಾಯಕನ ತಂದೆ ತನ್ನ ಮಗ ರೈಲ್ವೆ ನೌಕರಿಗೆ ಸೇರಿ ನೆಮ್ಮದಿಯ ಜೀವನ ನಡೆಸಬೇಕೆಂಬ ಆಸೆ ಇಟ್ಟುಕೊಂಡಿದ್ದಾರೆ. ರೈಲ್ವೆ ನೌಕರಿ ಸೇರಿದರೆ ಔಷಧಿ ಸಹಾಯ, ವರ್ಷಕ್ಕೆ ಮೂರು ಪಾಸು, ಮಕ್ಕಳ ಶಿಕ್ಷಣಕ್ಕೆ ಬೇಕಾದ ಅನುಕೂಲತೆ, ಪೆನ್ಷನ್ನು, ಫಂಡು ಎಲ್ಲವೂ ನಿರಾಯಾಸವಾಗಿ ದೊರೆಯುತ್ತದೆ. ವಕೀಲಿ ವೃತ್ತಿ, ಡಾಕ್ಟರ್ ವೃತ್ತಿ ಈ ಮೊದಲಾದ ವೃತ್ತಿಗಳಲ್ಲಿ ಈ ಸೌಲಭ್ಯ ಇಲ್ಲ.

ಆದ್ದರಿಂದ ಮಗ ರೈಲ್ವೆ ನೌಕರಿಗೆ ಸೇರಬೇಕೆಂಬುದು ತಂದೆಯ ಆಸೆ. ಆದರೆ ಮಗನಿಗೆ ತಾನು ಮೆಡಿಕಲ್ ಓದಬೇಕೆನ್ನುವ ಆಸೆ. ಆದರೆ ತಂದೆಯ ಎದುರು ನಿಂತು ಮಾತಾಡಲು, ತನ್ನ ಭವಿಷ್ಯದ ದಾರಿ ಬಗ್ಗೆ ಹೇಳಲು ಸಾಧ್ಯವಾಗದ ಅವ್ಯಕ್ತ ಭೀತಿ ಅವನನ್ನು ಕಾಡುತ್ತದೆ.

"...... ಕಣ್ಣೆದುರು ವಿಸ್ತಾರವಾದ ಬಯಲು. ಪುಟ್ಟ ಪುಟ್ಟ ಮಾವಿನ ಸಸಿಗಳು ಎದ್ದಿದ್ದವು. ಏನು ಚೆಲುವು! ಏನು ಕೋಮಲತೆ! ಸಂತೋಷದಿಂದ ಅವನ ಹೃದಯ ಬೆಳಗಿತು. ಒಂದೇ ಒಂದು ನಿಮಿಷ. ಯಾರೋ ನಿರ್ದಯವಾಗಿ ರೋಡ್‌ರೋಲರನ್ನು ಹಾಯಿಸಿದರು. ಮಾವಿನ ಸಸಿಗಳಲ್ಲಿ ರಕ್ತವಿತ್ತು. ಆ ನೆಲವೆಲ್ಲ ಅವುಗಳ ರಕ್ತದಿಂದ ತೊಯ್ದು ಹೋಯಿತು. ಅವನ ಹೃದಯ ಅಯ್ಯೋ ಎಂದು ಕೂಗಿತು. ಕಣ್ಣು ಮುಚ್ಚಿದವು. ಭೀಕರವಾದ ಕತ್ತಲೆ ಮುರುಕು ಮನೆ ಬಿದ್ದ ಗೋಡೆ ಕತ್ತಲೆಯಲ್ಲಿ ತಾನು ಕರಗಿ ಹೋದಂತೆ ಎನ್ನಿಸಿತು ಅವನಿಗೆ" (ಕುಸುಮಾಕರ ದೇವರಗೆಣ್ಣೂರು, ನಾಲ್ಕನೆಯ ಆಯಾಮ, ೨೦೧೩, ಪುಟ ೧೪) ಇಂತಹ ಭಯದ ಹೆಡೆಯ ನೆರಳಲ್ಲಿಯೇ ನಾಯಕ ಬದುಕನ್ನು ಸವೆಸುತ್ತಾನೆ. ಬದುಕಿನ ಭೀಕರತೆ ಬಗ್ಗೆ ತಂದೆಯ ಮಾತುಗಳು ಆತನ ಆಸೆಗಳನ್ನು ಮಾವಿನ ಸಸಿಗಳಂತೆ ಇಲ್ಲವಾಗಿಸುತ್ತದೆ. ನಿರ್ದಯವಾದ ರೋಡ್‌ರೋಲರು ನಾಯಕನ ತಂದೆಯ ದಬ್ಬಾಳಿಕೆಯನ್ನು ಸೂಚಿಸುತ್ತಲೇ, ಮಾವಿನ ಸಸಿಗಳನ್ನು ಇಲ್ಲವಾಗಿಸಿದ ರೋಡ್‌ರೋಲರು, ನಾಯಕನ ಆತ್ಮವಿಶ್ವಾಸವು ಇಲ್ಲವಾಗಿಸುವ ಅಪ್ಪನ ಮಾತುಗಳಿಗೆ ಸಂಕೇತವಾಗಿದೆ.

ತಂದೆಯ ಇಂತಹ ಧೋರಣೆಯಿಂದಲೇ ನಾಯಕನು ತಂದೆಯ ಬಗ್ಗೆ ಸಹಜವಾಗಿಯೇ ದ್ವೇಷವನ್ನು ಬೆಳೆಸಿಕೊಂಡಿದ್ದಾನೆ. ತನ್ನ ಪ್ರತಿಯೊಂದು ಕೆಲಸಕ್ಕೆ ತಂದೆಯು ವಿರೋಧಿಸುತ್ತಾರೆ ಎಂದು ಚಿಕ್ಕಂದಿನಿಂದಲೂ ತನ್ನ ಮನಸ್ಸಿಗೆ ತಂದು ಕೊಂಡ ನಾಯಕ ಸಹಜವಾಗಿಯೇ ತಂದೆಯ ಬಗ್ಗೆ ಅನಾದಾರವನ್ನು ಬೆಳೆಸಿಕೊಳ್ಳುತ್ತಾನೆ. ತನ್ನ ತಾಯಿ ತನ್ನ ಆಸೆಗಳ ಪರವಾಗಿ ಇದ್ದಾಳೆ ಎಂಬ ಕಾರಣಕ್ಕಾಗಿ ಆಕೆಯ ಬಗ್ಗೆ ಪ್ರೀತಿಯೂ ಇದೆ. ತನ್ನ ಗಂಡನ ಎದುರು ಆಕೆ ಏನೂ ಮಾಡಲಾಗದವಳ ಸ್ಥಿತಿಯಲ್ಲಿದ್ದಾಳೆ ಎಂದು ತಿಳಿದು ಸಹಾನುಭೂತಿಯನ್ನು ಇಟ್ಟುಕೊಂಡಿದ್ದಾನೆ. ತನ್ನ ಪರವಾಗಿ ಏನನ್ನಾದರೂ ಮಾತನಾಡಬಲ್ಲವಳೆಂದರೆ ತಾಯಿ ಮಾತ್ರ, ಆದರೆ ಆಕೆಯ ಮಾತನ್ನು ತಂದೆ ಕೇಳುವುದಿಲ್ಲ ಎಂದು ನಾಯಕ ತನ್ನ ತಾಯಿಯ ಸ್ಥಿತಿಯನ್ನು ಅರ್ಥ ಮಾಡಿಕೊಂಡಿದ್ದಾನೆ. ಭಾರತೀಯ ಸಮಾಜದ ಕುಟುಂಬ ವ್ಯವಸ್ಥೆಯಲ್ಲಿನ ಪುರುಷ ಪ್ರಾಧಾನ್ಯತೆಯನ್ನು ಇದು ಹೇಳುತ್ತದೆ. ಕುಟುಂಬದ

ಮುಖ್ಯಸ್ಥನಾದ ತಂದೆಯು ಮನೆಯ ಹೆಂಗಸರ ಮಾತಿಗೆ ಬೆಲೆ ನೀಡಬಹುದಾದರೂ ನೀಡುವುದಿಲ್ಲ. ತನ್ನ ಮಾತೇ ಅಂತಿಮ ಎನ್ನುವಂತೆ ನಡೆದುಕೊಳ್ಳುತ್ತಾನೆ. ಅಂತಹ ಕುಟುಂಬವನ್ನು ಈ ಕಾದಂಬರಿ ತೋರಿಸಿದೆ.

ನಾಯಕನ ತಾಯಿ ಭಾರತದ ಬಹುತೇಕ ಹೆಣ್ಣು ಮಕ್ಕಳಂತೆ ಸಂಪ್ರದಾಯಸ್ಥ ಮನೋಧರ್ಮವನ್ನು ಹೊಂದಿದ್ದಾಳೆ. ಪ್ರಾಯ್ಡ್‌ರ ಪ್ರಕಾರ ಅಗೋಚರವಾಗಿದ್ದುಕೊಂಡು ವರ್ತನೆಯನ್ನು ನಿಯಂತ್ರಿಸುವ ನಿಜವಾದ ಶಕ್ತಿ ಸುಪ್ತ ಚೇತನವಾಗಿದೆ. ಈ ಸುಪ್ತ ಚೇತನದಲ್ಲಿ ಆವೇಗಗಳು, ನಮಗೆ ನಾಚಿಕೆ ಹುಟ್ಟಿಸುವ ಆಶೆ, ಕಾಮನೆಗಳು, ಅತೃಪ್ತ ಬಯಕೆಗಳು. ನಾವು ಮರೆತ ವಿಷಯಗಳು ನಮಗೆ ಅಹಿತವೆನಿಸುವ ಘಟನೆಗಳ ವಿವರಗಳು ಶೈಶವದ ಸ್ಮೃತಿಗಳಲ್ಲಿ ಅಡಗಿರುತ್ತದೆ. ಇವೆಲ್ಲಾ ಸುಲಭವಾಗಿ ಮನಸ್ಸಿನ ಮೇಲ್ಪದರಕ್ಕೆ ಬರುವುದಿಲ್ಲ. ಏಕೆಂದರೆ ಈ ವಿಷಯಗಳು ನಮ್ಮ ಚೇತನಕ್ಕೆ ಕಾಲಿಟ್ಟರೆ, ಅವು ನಮಗೆ ನಾಚಿಕೆ, ಭಯ, ಅಪರಾಧಿ ಭಾವನೆ ಅಥವಾ ಹೇಸಿಗೆಯನ್ನು ಉಂಟುಮಾಡಬಹುದು. ಅದುಮಿಟ್ಟಿರುವ ಈ ಭಾವನೆಗಳು ಮನಸ್ಸಿನ ಕಡಿವಾಣದಿಂದ ತಪ್ಪಿಸಿಕೊಂಡು ಹೊರ ಹೊಮ್ಮಲು ಅವಕಾಶ ಹುಡುಕುತ್ತಿರುತ್ತವೆ. ಇವು ಕನಸುಗಳ ಮೂಲಕ, ಬಾಯ್ತಪ್ಪಿ ನಾವಾಡುವ ಮಾತುಗಳಿಂದ, ಬರೆಯುವಾಗ ಉಂಟಾಗುವ ತಪ್ಪುಗಳ ಮೂಲಕ ಮತ್ತು ಮನೋಬೇನೆಗಳ ಮೂಲಕ ಮಾರ್ಪಡಿಸಿದ ರೂಪದಲ್ಲಿ ಸುಪ್ತ ಚೇತನದ ಒಳಾಂಶ ಸ್ವಲ್ಪ-ಸ್ವಲ್ಪವಾಗಿ ಹೊರಬೀಳುತ್ತದೆ. 'ಮನೋಲೋಕದ ಡಾರ್ವಿನ್' ಎಂದು ಕರೆಯಲಾಗುವ ಪ್ರಾಯ್ಡ್‌ರ ಸುಪ್ತ ಚೇತನದ ಈ ವಿವರಣೆಗಳ ಮೂಲಕ ಕಾದಂಬರಿಯ ನಾಯಕನ ವ್ಯಕ್ತಿತ್ವವನ್ನು ಒಳ ಹೊಕ್ಕು ನೋಡಬಹುದಾಗಿದೆ. ಮನಸ್ಸಿನ ಬಹು ಭಾಗವನ್ನು ಆಕ್ರಮಿಸಿರುವ ಈ ಸುಪ್ತ ಚೇತನದಲ್ಲಿ ನಾಯಕನ ತಂದೆಯ ದಬ್ಬಾಳಿಕೆಯ ಕ್ರೌರ್ಯ ಮನೆ ಮಾಡಿದೆ. ಇದು ಆತನ ಆತ್ಮವಿಶ್ವಾಸವನ್ನು ಕುಗ್ಗಿಸಿದೆ. ಈ ಆವೇಗ ತಂದೆಯ ಎದುರು ನಿಂತು ಮಾತಾಡಲು ಆಗದ ನಾಯಕನಿಗೆ ಕನಸುಗಳ ರೂಪದಲ್ಲಿ ಪ್ರಕಟವಾಗುತ್ತದೆ. ಈ ಕನಸುಗಳ ಬಗ್ಗೆ ನಾಯಕ ತನ್ನ ತಾಯಿಗೆ ತಿಳಿಸಿದಾಗ ಆಕೆ ನಾಯಕನ ದುರ್ಬಲ ಮನಸ್ಥಿತಿಯನ್ನು ಅರಿಯಲಾರದೆ ದೇವರ ನಾಮ ಸ್ಮರಣೆ ಮಾಡಿ ಮಲಗಿದರೆ ಕನಸು ಬೀಳುವುದಿಲ್ಲ ಎಂಬ ಸಲಹೆಯನ್ನು ನೀಡುತ್ತಾಳೆ. ಈ ಮೂಲಕ ನಾಯಕನ ತಾಯಿಯ ಸಂಪ್ರದಾಯಸ್ಥ ಮನೋಧರ್ಮ ವ್ಯಕ್ತವಾಗುತ್ತದೆ.

ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆಯಲ್ಲಿ ಬೆಳೆದು ಬಂದು, ಈಗ ಅದೇ ರೀತಿಯ ಕುಟುಂಬ ವ್ಯವಸ್ಥೆಯಲ್ಲಿ ಬದುಕುತ್ತಿರುವ ನಾಯಕನ ತಾಯಿಗೆ ಸಂಪ್ರದಾಯಕ್ಕೆ ಕಟ್ಟು

ಬಿದ್ದ ತನ್ನ ಅಸಹಾಯಕತೆಯಿಂದ ಬದುಕು ಅಸಹನೀಯವಾಗಿದೆ. ಮಗನ ಓದಿಗಾಗಿ ಕುಟುಂಬದಿಂದ ಹೊರ ಬಂದು ದುಡಿದು ಸಂಪಾದಿಸಬೇಕೆಂದು ಆಕೆಗೆ ಆಸೆ ಇದ್ದರೂ, ತ್ರಾಣವಿದ್ದರೂ, ಕಷ್ಟಕ್ಕೆ ಹೆದರದೆ ಇದ್ದರೂ ಸಂಪ್ರದಾಯಸ್ಥೆಯಾದ ಈಕೆ, ಮನೆತನದ ಗೌರವಕ್ಕೆ ತನ್ನಿಂದ ಕುಂದಾಗಬಹುದೇನೋ ಎಂದು ಹೆದರುತ್ತಾಳೆ ಮತ್ತು ಸಮಾಜದ ಮಾತುಗಳಿಗೆ ತಾನು ಗುರಿಯಾಗಬಹುದೆಂದು ಭಯಪಡುತ್ತಾಳೆ. ತಾನು ದುಡಿದು ಮಗನ ಓದಿಗೆ ಸಹಾಯ ಮಾಡಲಾಗದಿದ್ದರೂ ನಾಯಕನ ತಾಯಿ ತನ್ನ ಗಂಡನ ಹತ್ತಿರ ಆತನನ್ನು ಓದಿಗೆ ಕಳುಹಿಸಲೇಬೇಕೆಂದು ಪಟ್ಟು ಹಿಡಿಯುತ್ತಾಳೆ. "ಅವನನ್ನು ಕಾಲೇಜಿಗೆ ಹಾಕದಿದ್ದರೆ ನಾನು ಯಾವುದಕ್ಕೂ ಹಿಂದೆ ಸರಿಯುವುದಿಲ್ಲ. ಇಲ್ಲಿಯವರೆಗೆ ನಾನು ಯಾವುದಕ್ಕೂ ಪ್ರತಿಯಾಡಲಿಲ್ಲ. ಎಲ್ಲವನ್ನೂ ಸಹಿಸಿದ್ದೇನೆ. ಮನೆಯೊಡೆದರೂ ಚಿಂತೆಯಿಲ್ಲ ನಾನು ಮಗನ ಬದಿಗೆ ನಿಲ್ಲುತ್ತೇನೆ. ರಟ್ಟೆಗಳಲ್ಲಿ ಬಲವಿರುವವರೆಗೆ ದುಡಿದು ಅವನನ್ನು ಕಲಿಸುತ್ತೇನೆ" (ಕುಸುಮಾಕರ ದೇವರಗೆಣ್ಣೂರು, ನಾಲ್ಕನೆಯ ಆಯಾಮ, ೨೦೧೩, ಪುಟ ೨೯) ಎಂದು ನಾಯಕನ ತಾಯಿ ಮಗನ ಓದಿಗೆ ಪ್ರೋತ್ಸಾಹ ನೀಡದ ಗಂಡನ ಎದುರು ಮೊದಲ ಬಾರಿಗೆ ಪ್ರತಿಭಟನೆ ವ್ಯಕ್ತಪಡಿಸುತ್ತಾಳೆ. ಸಂಪ್ರದಾಯಸ್ಥ ಹೆಣ್ಣು ಮಗಳೊಬ್ಬಳು ತನ್ನ ಗಂಡನ ಎದುರು ಮಗನನ್ನು ಓದಿಸಲೇಬೇಕೆಂಬ ಪಟ್ಟು ಹಿಡಿಯುವುದು ವಿಶೇಷ. ತನ್ನ ಹೆಂಡತಿಯ ಇಂತಹ ನಿರ್ಧಾರಕ ಮಾತುಗಳನ್ನು ಈ ಹಿಂದೆ ಕೇಳದೆ ಇದ್ದ ಗಂಡ ತನ್ನ ಹೆಂಡತಿಯ ಈ ಸ್ಥಿರತೆಯ ಮಾತುಗಳಿಂದ ಆಶ್ಚರ್ಯ ಪಡುತ್ತಾನೆ. ಹೆಂಡತಿಯ ಇಂತಹ ಮಾತುಗಳೇ ನಾಯಕನನ್ನು ಓದಿಗೆ ಕಳುಹಿಸದೆ ಇರುವ ಗಂಡನ ನಿರ್ಧಾರವನ್ನು ಬದಲಾಯಿಸುತ್ತದೆ.

ಸಾಂಪ್ರದಾಯಿಕ ಕೌಟುಂಬಿಕ ವ್ಯವಸ್ಥೆಯಲ್ಲಿದ್ದ ನಾಯಕನ ತಾಯಿ ಮಗನ ಓದಿನ ಪರವಾಗಿ ನಿಲ್ಲುವುದು, ಗಂಡನ ವಿರುದ್ಧ ಆಕೆಯು ತೋರಿಸುವ ಪ್ರತಿಭಟನೆಯಾಗಿದೆ. ತನಗಾಗಿ ಯಾವುದನ್ನು ಇದುವರೆಗೂ ಬೇಡಿರದ ಆಕೆ ಇಂದು ಮಗನನ್ನು ಓದಿಸಲು ಗಂಡನನ್ನು ಕೇಳುತ್ತಾಳೆ. ಹಿರಿಯ ಮಗ ಕಲಿತು ಒಳ್ಳೆ ಸಾಧನೆ ಮಾಡಿದರೆ ಉಳಿದಿಬ್ಬರು ಮಕ್ಕಳ ಉದ್ಧಾರವಾದೀತೆಂಬ ನಿರೀಕ್ಷೆಯನ್ನು ಆಕೆ ಇಟ್ಟುಕೊಳ್ಳುತ್ತಾಳೆ. ಆದ್ದರಿಂದಲೇ ಆಕೆ ತನ್ನ ಗಂಡನನ್ನು ಎಲ್ಲಾ ರೀತಿಯ ಅನುಕೂಲತೆಗಳನ್ನು ಮಾಡಿಕೊಟ್ಟು, ಮಗನ ಭವಿಷ್ಯ ಕಟ್ಟಿಕೊಡುವುದು ಆತನ ಕರ್ತವ್ಯ ಎಂದು ಎಚ್ಚರಿಸುತ್ತಾಳೆ. ಅದಾಗ್ಯು ಗಂಡ ಒಪ್ಪದಿದ್ದರೆ ತಾನೇ ಆ ವ್ಯವಸ್ಥೆ ಮಾಡುವುದಾಗಿ ಹೇಳುತ್ತಾಳೆ. ಕೊನೆಗೂ ಮಗನ ಓದಿನ ಖರ್ಚನ್ನು ಗಂಡ ವಹಿಸಿಕೊಳ್ಳದಿದ್ದಾಗ ನಾಯಕನ ತಾಯಿಯೇ ತನ್ನ ಬಾಲ್ಯದ ಶ್ರೀಮಂತ ಗೆಳತಿಯೊಬ್ಬಳ ಮನೆಯ Outhouse ನಲ್ಲಿ ಮಗನಿಗೊಂದು

ಕೊಠಡಿಯನ್ನು ದೊರಕಿಸಿ ಕೊಡುತ್ತಾಳೆ. ಮಗನ ಓದಿನ ಬಗ್ಗೆ ಅಪಾರ ನಿರೀಕ್ಷೆಯನ್ನು ಇಟ್ಟುಕೊಂಡು ತನ್ನ ಮಿತಿಯಲ್ಲಿ ಮಾಡಬಹುದಾದ ಎಲ್ಲಾ ವ್ಯವಸ್ಥೆಯನ್ನು ನಾಯಕನ ತಾಯಿ ಮಾಡುತ್ತಾಳೆ.

ಮಾನವ ಏನಿದ್ದಾನೆ ಮತ್ತು ಏನು ಮಾಡುತ್ತಾನೆ ಎನ್ನುವುದು ಅವನ ವೈಯಕ್ತಿಕ ಹೊಣೆಗಾರಿಕೆ ಮನುಷ್ಯನ ಅಸ್ತಿತ್ವದ ಹೊರಗಡೆಯ ಯಾವ ವಸ್ತು ಸತ್ಯವೂ ಇಲ್ಲ, ಅಥವಾ ಅವನ ಅಸ್ತಿತ್ವಕ್ಕೆ ಆಲೌಕಿಕವಾದುವುದೂ ಕಾರಣವಲ್ಲ. ಅವನ ಬದುಕು ಸಂಪೂರ್ಣವಾಗಿ ಅವನದೇ, ತಾನೇನೋ ಆಗಿರುವ ಮತ್ತು ಆಗುವ (Being, Becoming) ಸ್ವಾತಂತ್ರ್ಯ, ಜವಾಬ್ದಾರಿ ಅವನದೇ ಎಂದು ಆಲ್ಬರ್ಟ್ ಕಾಮು ಹೇಳುತ್ತಾನೆ. ಅವನ ಈ ಮಾತಿನಂತೆ ನಾಯಕನ ಮನಸ್ಥಿತಿ ಇದೆ. ಕಾದಂಬರಿಯ ಉದ್ದಕ್ಕೂ ತನ್ನ ಅಸ್ತಿತ್ವವನ್ನು ಸ್ಥಾಪಿಸಲು ಹೆಣಗಾಡುವ ನಾಯಕನು ಅದಕ್ಕೆ ಸ್ಪಷ್ಟವಾದ ತಯಾರಿಯಿಲ್ಲದೆ ವಿಫಲನಾಗುತ್ತಾನೆ.

ಬದುಕಿನಲ್ಲಿ ಸಾಫಲ್ಯ ಹೊಂದಬೇಕೆಂಬ ಹಪಾಹಪಿ ಇದ್ದರೂ ಸಾಫಲ್ಯತೆ ಹೊಂದಲು ನಾಯಕನಿಗೆ ಅವನದೇ ಆದ ಅಡೆತಡೆಗಳಿವೆ. ಇದರಿಂದ ಜೀವನದಲ್ಲಿ ಹಲವಾರು ಗೊಂದಲಗಳನ್ನು ಎದುರಿಸಬೇಕಾಗುತ್ತದೆ. ಸಹಪಾಠಿಗಳಂತೆ ಜೀವನ ನಡೆಸಲು ಹೋಗಿ ತನ್ನ ವ್ಯಕ್ತಿತ್ವಕ್ಕೆ ವಿರುದ್ಧವಾದ ಮುಖವಾಡ ಧರಿಸಲು ಪ್ರಯತ್ನಿಸುತ್ತಾನೆ. ಮೊದಲೇ ಬದುಕಿನ ಬಗ್ಗೆ ಅವ್ಯಕ್ತ ಭಯದಿಂದ ನರಳುತ್ತಿದ್ದ ನಾಯಕನಿಗೆ ಸಹಪಾಠಿಗಳ ಎದುರಿಗೆ Inferiority Complex (ನೈಚ್ಯಾನುಭಾವ) ಕಾಡಲು ಆರುಭಿಸುತ್ತದೆ. ಇದರಿಂದ ಹೊರ ಬರಲು ನಾಯಕ ಗೊಂದಲಗಳನ್ನು ತಾನೇ ಸೃಷ್ಟಿ ಮಾಡಿಕೊಂಡು ತನ್ನ ಸಾಫಲ್ಯದ ಹಾದಿಯನ್ನು ಕಠಿಣಮಾಡಿಕೊಳ್ಳುತ್ತಾನೆ. ಇಡೀ ಲೋಕವೇ ತನ್ನ ವಿರುದ್ಧ ಒಳಸಂಚು ಹೂಡಿದೆ ಎಂದು ಸಿಟ್ಟಾಗುವ ನಾಯಕ, ತನ್ನ ಬದುಕು ನಿರರ್ಥಕ ಎಂದು ಮಾನಸಿಕವಾಗಿ ಕುಗ್ಗಿಹೋಗುತ್ತಾನೆ. ಚಹಾ ಕಂಪನಿಯೊಂದರಲ್ಲಿ ಏಜೆಂಟನಾಗಿ ಕೆಲಸಕ್ಕೆ ಸೇರಿಕೊಳ್ಳುವ ನಾಯಕ ತನ್ನ ಜೀವನ ಶೈಲಿಯನ್ನು ಬದಲಾಯಿಸಿ ಕೊಳ್ಳುತ್ತಾನೆ. ವೇಶ್ಯೆಯ ಸಂಗ ಮಾಡಿ ಹೊಸತನ ಪಡೆಯಬೇಕೆಂದರೂ ಅಪರಾಧಿ ಮನೋಭಾವ ಅವನನ್ನು ಕಾಡಲಾರಂಭಿಸುತ್ತದೆ. ಈ ನಡುವೆ ಹುಡುಗಿಯರ ನಗ್ನ ಚಿತ್ರಗಳನ್ನು ತರಿಸಿಕೊಳ್ಳಲು ತನ್ನ ತಾಯಿಯ ಗೆಳತಿಯ ಮಗಳ ಹೆಸರನ್ನು ಬಳಸಿಕೊಳ್ಳುತ್ತಾನೆ. ಆಗ ವಿಷಯ ತಿಳಿದ ತಾಯಿಯ ಗೆಳತಿ ಕೂಡ ಆತನಿಗೆ ನಿನ್ನ ತಾಯಿಯ ಅಪೇಕ್ಷೆಗಳ ಕತ್ತನ್ನು ಹಿಸುಕಬೇಡ ಎಂದು ಬುದ್ಧಿವಾದ ಹೇಳುತ್ತಾಳೆ. ತನ್ನ ಓದಿಗೆ ನೆರವಾದ ತಾಯಿಯ ನಿರೀಕ್ಷೆಗಳನ್ನು ನಾಯಕ ಅರ್ಥ

ಮಾಡಿಕೊಳ್ಳದೆ ಜೀವನವನ್ನು ನಿರರ್ಥಕವನ್ನಾಗಿಸಿಕೊಳ್ಳುತ್ತಾನೆ. ತಾನು ತನ್ನ ತಂದೆಯಂತಾಗಬಾರದು ಎಂದು ತಿಳಿದಿದ್ದ ನಾಯಕ ಕೊನೆಯ ಪಕ್ಷ ಒಬ್ಬ ಸಾಮಾನ್ಯ ಪರಿಶುದ್ಧ ವ್ಯಕ್ತಿಯೂ ಆಗಲಾರದೆ ಹೋಗುತ್ತಾನೆ. ಮಗನ ಬದುಕಿನ ಸಾಫಲ್ಯತೆಯಲ್ಲಿ ತನ್ನ ಬದುಕಿನ ಸಾಫಲ್ಯತೆಯನ್ನು ಕಾಣಬಯಸಿದ್ದ ತಾಯಿಗೆ ಅವನ ಬದುಕಿನ ನಿರರ್ಥಕತೆ ಕಾಣುವಂತಾಗುತ್ತದೆ. ಆ ನಿರರ್ಥಕತೆಯಲ್ಲಿ ಅವಳ ಪ್ರತಿಭಟನೆಗೆ ಬೆಲೆ ಇಲ್ಲವಾಗುತ್ತದೆ.

ಮಹಿಳೆಯರು ಬೇರೆಯವರ ಬಗ್ಗೆ ಅವರಿಗಿರುವ ಜವಾಬ್ದಾರಿ, ಬೇರೆಯವರ ಭಾವನೆ ಹಿತಾಸಕ್ತಿಗಳಿಗೆ ಪ್ರಾಮುಖ್ಯತೆ ಕೊಡುತ್ತಾರೆ. ಆ ಮೂಲಕ ಮಹಿಳೆ ತನ್ನನ್ನು ಸುತ್ತಲಿನ ಪ್ರಪಂಚದ ಜೊತೆಗೆ ಜೋಡಿಸಿಕೊಳ್ಳುತ್ತಾಳೆ ಎಂದು ಗಿಲಿಗಾನ್‌ರಂತಹ ಮನಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಅದರಂತೆ ನಾಯಕನ ತಾಯಿ ಮಗನ ಭಾವನೆ ಹಿತಾಸಕ್ತಿಗಳಿಗೆ ಬೆಲೆಕೊಟ್ಟು ಆತನನ್ನು ಓದಿಗೆ ಕಳುಹಿಸುತ್ತಾಳೆ. ಆದರೆ ನಾಯಕನು ತಾಯಿಯ ಭಾವನೆಗಳಿಗೆ ಬೆಲೆ ನೀಡದೆ ತನ್ನ ಬದುಕನ್ನು ಕೂಡ ನಿರರ್ಥಕವನ್ನಾಗಿಸಿಕೊಳ್ಳುತ್ತಾನೆ. ತಾಯಿ ಮತ್ತು ತಾಯಿಯ ಗೆಳತಿ ಇಬ್ಬರು ತಮ್ಮ ತಮ್ಮ ಮಿತಿಗಳಲ್ಲಿ ನಾಯಕನ ಬದುಕಿಗೆ ಒತ್ತಾಸೆಯಾಗಿ ನಿಲ್ಲುವ ಪ್ರಯತ್ನ ಪಡುತ್ತಾರೆ. ತಾಯಿ ತನ್ನ ಮಗನೇ ತನ್ನ ಭವಿಷ್ಯ ಎಂದು ಬಗೆದರೆ, ತಾಯಿಯ ಗೆಳತಿ ತಾಯಿಗೆ ನಾಯಕನ ಅಗತ್ಯ ಇರುವುದನ್ನು ಮನಗಾಣಿಸುತ್ತಾಳೆ. "ನೋಡು ನಿನ್ನ ತಾಯಿಗೂ, ನನಗೂ ಜೀವದ ಗೆಳೆತನ ಅವಳು ತುಂಬಾ ನೊಂದಿದ್ದಾಳೆ. ನೀನೇ ಅವಳ ಆಶೆಗೆ ಆಶ್ರಯ ಅವಳ ಕುತ್ತಿಗೆಯನ್ನು ಕೊಯ್ಯಬೇಡ" (ಕುಸುಮಾಕರ ದೇವರಗೆಣ್ಣೂರು, ನಾಲ್ಕನೆಯ ಆಯಾಮ, ೨೦೧೩, ಪುಟ ೫೮) ಎಂದು ತಾಯಿಯ ಗೆಳತಿ ನಯವಾಗಿ ಬುದ್ಧಿವಾದ ಹೇಳುತ್ತಾಳೆ. ನಾಯಕ ತಾಯಿಯ ಗೆಳತಿಯ ಬುದ್ಧಿವಾದವನ್ನು ಕೇಳದೆ ತಾಯಿಯ ನಿರೀಕ್ಷೆಗಳನ್ನು ಸುಳ್ಳು ಮಾಡುತ್ತಾನೆ.

ಗೆಳೆತನಕ್ಕಾಗಿ ನಾಯಕನನ್ನು ತನ್ನ ಮನೆಯಲ್ಲಿ ಇರಿಸಿಕೊಳ್ಳುವ ತಾಯಿಯ ಗೆಳತಿ ತನಗೆ ತೊಡಕಾದರೂ ಆತನನ್ನು ಮನೆಗೆ ಕಳುಹಿಸುವುದಿಲ್ಲ. ನಾಯಕ ಹುಡುಗಿಯರ ನಗ್ನ ಚಿತ್ರಗಳನ್ನು ತರಿಸಿಕೊಳ್ಳಲು ತಾಯಿಯ ಗೆಳತಿಯ ಮಗಳ ಹೆಸರನ್ನು ಬಳಸಿಕೊಂಡಾಗ, ವಿಷಯ ತಿಳಿದ ಗೆಳತಿ ಸಂದಿಗ್ಧತೆಗೆ ಒಳಗಾಗುತ್ತಾಳೆ. ನಾಯಕನು ಮಾಡಿದ ಕೆಲಸಕ್ಕೆ ಬೇಸರಪಟ್ಟುಕೊಂಡ ತಾಯಿಯ ಗೆಳತಿ ಆತನನ್ನು ಮನೆಬಿಟ್ಟು ಕಳುಹಿಸದೆ ನಾಯಕನ ತಾಯಿಯ ಗೆಳತನಕ್ಕಾಗಿ ಕಟ್ಟುಬಿದ್ದು ಆತನಿಗೆ ಬುದ್ಧಿವಾದ ಹೇಳುತ್ತಾಳೆ. ದಾರಿ ತಪ್ಪಿದ ನಾಯಕನಿಗೆ ತಾಯಿಯ ಗೆಳತಿ ತಾಯಿಯ ಸ್ಥಾನದಲ್ಲಿ

ನಿಂತು ಬುದ್ಧಿವಾದ ಹೇಳುವ ಮೂಲಕ ಆತನನ್ನು ಸರಿದಾರಿಗೆ ತರುವ ಪ್ರಯತ್ನ ಮಾಡುತ್ತಾಳೆ. ನಾಯಕನ ತಾಯಿ ನಾಯಕನ ಬುದ್ಧಿ ವಿಸ್ತಾರತೆಗೆ ಅವಕಾಶ ಮಾಡಿಕೊಟ್ಟರೆ, ತಾಯಿಯ ಗೆಳತಿ ನಾಯಕನ ಬುದ್ಧಿ ತಪ್ಪು ದಾರಿ ಹಿಡಿಯುವುದನ್ನು ನಿಯಂತ್ರಿಸುತ್ತಾಳೆ. ಈ ರೀತಿ ಇವರಿಬ್ಬರು ವಿಸ್ತಾರಕ, ನಿಯಂತ್ರಕರುಗಳಾಗಿ ನಾಯಕನನ್ನು ರೂಪಿಸಲು ಪ್ರಯತ್ನಿಸುತ್ತಾರೆ.

ಮುಖವಾಡ ಹಾಕಿಕೊಂಡು ಬದುಕುತ್ತಿದ್ದ ನಾಯಕ ಮುಗ್ಧ ನೃತ್ಯಗಾತಿಯ ಮನಸ್ಸನ್ನು ಪ್ರಭಾವಿಸಲು ಪ್ರಯತ್ನಿಸುತ್ತಾನೆ. ಸೌಷ್ಟವಂ ರೂಪ, ಸಂಪತ್ತಿಶ್ಚಾರು ವಿಸ್ತೀರ್ಣ ವಕ್ಷ್ಯತಾ, ವಿಶಾಲ ನೇತ್ರತಾ, ಬಿಂಬಾಧರತಾ ಎಂಬಂಥ ಮಾತುಗಳ ಮೂಲಕ ನೃತ್ಯ ಕಲೆಯ ಪ್ರಾಥಮಿಕ ಅವಶ್ಯಕತೆಗಳನ್ನು ಹೇಳುವ ನೆಪದಲ್ಲಿ ಆತ ಆಕೆಯ ದೈಹಿಕ ಅಂಗಾಂಗಳನ್ನು ಅಳೆಯುವ ಕೆಲಸ ಮಾಡುತ್ತಾನೆ. "Do you know the girl with world's most beautiful legs?" (ಕುಸುಮಾಕರ ದೇವರಗೆಣ್ಣೂರು, ನಾಲ್ಕನೆಯ ಆಯಾಮ, ೨೦೧೩, ಪುಟ ೧೧೬) ಎಂದು ಕೇಳುವ ಮೂಲಕ ಆಕೆಯ ಕಾಲುಗಳನ್ನು ನೋಡುವ ಪ್ರಯತ್ನ ಮಾಡುತ್ತಾನೆ. ಅವನ ಒಳಮನಸ್ಸು ಅರಿಯದ ಆಕೆ ತನ್ನ ಸೀರೆಯನ್ನು ತನ್ನ ಮೊಳಕಾಲವರೆಗೆ ಎತ್ತಿ ತೋರಿಸುತ್ತಾಳೆ. ಅವನು ಸೂಕ್ಷ್ಮವಾಗಿ ನೋಡಿದಂತೆ ನಟನೆ ಮಾಡಿ ಆಕೆಯ ಮೊಳಕಾಲನ್ನು ಮುಟ್ಟುತ್ತಾನೆ. ಇಂತಹ ಭಾವನೆಗಳನ್ನು ಒಳಗಿಟ್ಟುಕೊಂಡು ಆತ ಮೇಲ್ನೋಟದಲ್ಲಿ ಆಕೆಗೆ ನೃತ್ಯಕಲೆಯ ಬಗ್ಗೆ ಹೇಳಿಕೊಡುವ ಪ್ರಬುದ್ಧತೆಯನ್ನು ನಟಿಸುತ್ತಾನೆ.

ನಾಯಕನ ಮಾತಿಗೆ ಮರುಳಾದ ನೃತ್ಯಗಾತಿ ಅವನು ಹೇಳಿದಂತೆ ಕೇಳಿದರೂ ಅವನ ಮಾತಿಗೊಮ್ಮೆ ಸಂಶಯ ವ್ಯಕ್ತಪಡಿಸುತ್ತಾಳೆ. ಆದರೆ ನಾಯಕ ತನ್ನ ಬುದ್ಧಿವಂತಿಕೆಯಿಂದ ಆಕೆಯ ಸಂಶಯವು ಬೆಳೆಯಗೊಡದೆ, ಗುರುವಿನಲ್ಲಿ ಶ್ರದ್ಧೆ ಇರಬೇಕೆಂದು ಹೇಳಿ ಸಮಾಧಾನ ಪಡಿಸುತ್ತಾನೆ. ದೇಶ ವಿದೇಶಗಳಲ್ಲಿ ಆಕೆಯು ನೃತ್ಯದಲ್ಲಿ ಹಣ ಸಂಪಾದನೆ ಮಾಡಬಹುದೆಂದು ಹೇಳಿ ಆಕೆಯನ್ನು ಪ್ರಸನ್ನಗೊಳಿಸಲು ಪ್ರಯತ್ನಿಸುತ್ತಾನೆ. ಒಂದು ಕ್ಷಣ ಆಕೆಯನ್ನು ಮದುವೆಯಾಗಬಹುದೆ? ಎಂಬ ಯೋಚನೆ ಬಂದು "ತನ್ನ ಸೌಭಾಗ್ಯವತಿ ಉತ್ಸವ ಮೂರ್ತಿಯಾಗಬಾರದು. ತನ್ನ ಹೃದಯ ಸಿಂಹಾಸನದಲ್ಲಿ ಪ್ರತಿಷ್ಠಿತವಾದ ಮೂಲ ವಿಗ್ರಹ" (ಕುಸುಮಾಕರ ದೇವರಗೆಣ್ಣೂರು, ನಾಲ್ಕನೆಯ ಆಯಾಮ, ೨೦೧೩, ಪುಟ ೧೧೯) ತನ್ನ ಹೆಂಡತಿಯಾಗಬೇಕೆಂದು ಆಲೋಚಿಸುವ ಮೂಲಕ ಟಿಪಿಕಲ್ ಗಂಡನ ಮನಸ್ಥಿತಿಯನ್ನು ಅನಾವರಣ ಮಾಡುತ್ತಾನೆ. ಮದುವೆಯಾದ ಮೇಲೆ ಹೆಂಡತಿ ತನ್ನ

ಪ್ರತಿಭೆಯನ್ನು ಒತ್ತಿಗಿಟ್ಟು ಗಂಡನ ಸೇವೆಯಲ್ಲಿ ತೊಡಬೇಕೆನ್ನುವ ಸಾಂಪ್ರದಾಯಿಕ ಗಂಡಸರ ಆಲೋಚನೆಯಂತೆ ನಾಯಕನ ಮನಸ್ಥಿತಿ ಇದೆ. ಮುಗ್ಧ, ಸುಂದರ ನೃತ್ಯಗಾತಿಯನ್ನು ನಾಯಕ ತನ್ನ ಲೈಂಗಿಕತೆಗಾಗಿ ಬಳಸಿಕೊಳ್ಳಲು ಮುಂದಾಗುತ್ತಾನೆ. ತಾಯಿಯ ನಿರೀಕ್ಷೆಯನ್ನು, ತಾಯಿ ಗೆಳತಿಯ ಗೆಳತನವನ್ನು, ನೃತ್ಯಗಾತಿಯ ಮುಗ್ಧತೆಯನ್ನು ಒಂದಲ್ಲಾ ಒಂದು ಕಾರಣಕ್ಕಾಗಿ ನಾಯಕ ಬಳಸಿಕೊಳ್ಳುತ್ತಾನೆ. ತಾಯಿ, ತಾಯಿಯ ಗೆಳತಿ, ನೃತ್ಯಗಾತಿ ಇವರೆಲ್ಲರನ್ನು ನಾಯಕ ತನ್ನ ಬದುಕಿನ ಸಾಫಲ್ಯಕ್ಕೆ ಬಳಸಿಕೊಳ್ಳಬಹುದಿತ್ತು. ಆದರೆ ಹಾಗಾಗದಿದ್ದು ಅವನ ನಿರರ್ಥಕ ಬದುಕಿಗೆ ಕಾರಣವಾಗುತ್ತದೆ.

ಕುಸುಮಾಕರರ 'ನಾಲ್ಕನೆಯ ಆಯಾಮ'ದ ನಾಯಕನಿಗೆ ಹೆಸರಿಲ್ಲದಂತೆ ಗಿರಿಯವರ 'ಗತಿಸ್ಥಿತಿ' ನಾಯಕನಿಗೂ ಮತ್ತು ನಾಯಕಿಗೂ ಹೆಸರಿಲ್ಲ. ಕೆಲಸಕ್ಕಾಗಿ 'ಆತ' ಮತ್ತು 'ಆಕೆ' ಸಿಟಿಯ ಊರಿಗೆ ಬಂದು ನಾನಾ ರೀತಿಯ ತೊಂದರೆಗಳನ್ನು ಅನುಭವಿಸುತ್ತಾರೆ. ಅಧಿಕಾರ ಶಾಹಿಯವರ ಅಸಂಬದ್ಧ ನಡವಳಿಕೆ, ಆಕೆಯೊಡನೆ ಆತನ ವಿಚಿತ್ರ ಸಂಬಂಧ ಈ ಮೊದಲಾದವುಗಳೆಲ್ಲ ಆತನ ಪ್ರಜ್ಞೆ ಮೇಲೆ ಪ್ರಭಾವ ಬೀರುತ್ತವೆ. ಇದರಿಂದ ಆತ ಗೊಂದಲಕ್ಕೆ ಒಳಗಾಗುವುದೇ ಕಾದಂಬರಿಯ ಮೂಲ ವಿನ್ಯಾಸವಾಗಿದೆ.

ನೌಕರಿಯ ಸಲುವಾಗಿ 'ಆತ' ಮತ್ತು 'ಆಕೆ' ಸಿಟಿಯ ಊರಿಗೆ ಬಂದು ಪಡಬಾರದ ಕಷ್ಟಗಳನ್ನು ಅನುಭವಿಸುತ್ತಾರೆ. ಸಿಟಿಯ ಊರಿನ ಬಗ್ಗೆ ಸರಿಯಾಗಿ ತಿಳಿಯದ ಅವರಿಬ್ಬರು ಉಳಿಯಲು ಕೊಠಡಿ, ಊಟ ಮಾಡಲು ಹೋಟೆಲ್ ಪಡೆಯಲು ಸಾಕಷ್ಟು ಶ್ರಮ ಪಡುತ್ತಾರೆ. ಯಾವುದೇ ರೀತಿಯ ಸೌಲಭ್ಯವಿಲ್ಲದ ವಿಶಾಲವಾದ ಹಜಾರದಲ್ಲಿ ೧೫ ಮಂಚಗಳನ್ನು ಹಾಕಿ ರೂಮು ಎಂದು ಕೊಡುವುದನ್ನು 'ಆತ' ಒಪ್ಪಿಕೊಂಡರೂ 'ಆಕೆ' ಒಪ್ಪಿಕೊಳ್ಳುವುದಿಲ್ಲ. ಬೇರೆಯವರ ಜೊತೆ ಮಲಗುವುದು ಸಾಧ್ಯವಿಲ್ಲ. ಪ್ರೈವೆಸಿ ಇರುವುದಿಲ್ಲ ಎಂಬಂತಹ ಕಾರಣಗಳಾದರೆ, ಮತ್ತೊಂದು ಆ ರೂಮನ್ನು ತೋರಿಸಲು ಬಂದಿದ್ದ ಹುಡುಗ ಆಕೆಯೊಡನೆ ಅಸಭ್ಯವಾಗಿ ವರ್ತಿಸಿದ್ದು ಅಲ್ಲಿರಲು 'ಆಕೆ' ನಿರಾಕರಿಸುತ್ತಾಳೆ. ಆಕೆಯೊಡನೆ ರೂಮಿನ ಹುಡುಗ ವರ್ತಿಸಿದ ಅನುಚಿತ ವರ್ತನೆಯ ವಿರುದ್ಧ 'ಆಕೆ'ಯಾಗಲೀ, 'ಆತ'ನಾಗಲೀ ಯಾವುದೇ ರೀತಿಯ ಚಕಾರವನ್ನು ಎತ್ತುವುದಿಲ್ಲ. ಬದಲಿಗೆ ಆ ರೂಮು ಬೇಡವೆಂದು ಬೇರೆ ಹೋಟೆಲಿನ ರೂಮನ್ನು ಹುಡುಕಲು ಹೋಗುತ್ತಾರೆ. ಸಿಕ್ಕ ರೂಮಿಗೆ ಇವರು ಹೊಂದಿಕೊಂಡು ಆದರ ಬಗ್ಗೆ ಅಷ್ಟು ತಲೆಕೆಡಿಸಿಕೊಳ್ಳದೆ ನೌಕರಿಗೆ ರಿಪೋರ್ಟ್

ಮಾಡಿಕೊಳ್ಳಲು ಅವರಿಬ್ಬರು ಸಜ್ಜಾಗುತ್ತಾರೆ. ಆದರೆ ಅಲ್ಲಿನ ಸಿಬ್ಬಂದಿಗಳ ತೊಡಕಿನಿಂದ ಅವರು ಸಾಕಷ್ಟು ತೊಂದರೆಗಳನ್ನು ಅನುಭವಿಸಬೇಕಾಗುತ್ತದೆ.

ಕೆಲಸದ ಸ್ಥಳಗಳಲ್ಲಿ ಮಹಿಳೆಯರ ಮೇಲಾಗುವ ದೌರ್ಜನ್ಯವನ್ನು ಲೇಖಕರು 'ಆಕೆ' ಮೂಲಕ ಅನಾವರಣ ಮಾಡಿದ್ದಾರೆ. 'ಆಕೆ'ಯ ಕೆಲಸದ ಆರ್ಡರ್‌ನಲ್ಲಿ ವಾರಕ್ಕೆ ಆರುಗಂಟೆ ಮಾತ್ರ ಟೀಚಿಂಗ್ ಇರುತ್ತದೆ. ಉಳಿದ ವೇಳೆ ಕ್ಲಿನಿಕಲ್ ವರ್ಕ್ ಮಾಡಬಹುದು ಎಂದು ನಮೂದಿಸಲಾಗಿರುತ್ತದೆ. ಆದರೆ ಅಲ್ಲಿನ ಡೀನ್ ಕ್ಲಿನಿಕಲ್ ವರ್ಕ್ ಮಾಡುವ ಹಾಗಿಲ್ಲ. ಬೆಳಿಗ್ಗೆ ಏಳರಿಂದ ಸಂಜೆ ಐದರವರೆಗೆ ವರ್ಕಿಂಗ್ ಟೈಂ ಇರುತ್ತದೆ. ವರ್ಕಿಂಗ್ ಟೈಂನಲ್ಲಿ ಎಲ್ಲರೂ ಕಾಲೇಜಿನಲ್ಲಿ ಇರಬೇಕು. ವಾರಕ್ಕೆ ಹನ್ನೆರಡು ಗಂಟೆ ಟೀಚಿಂಗ್ ಇರುತ್ತವೆ. ಉಳಿದ ಟೈಂನಲ್ಲಿ ಇಲ್ಲಿಯದೇ ಕೆಲಸ ಮಾಡಬೇಕಾಗುತ್ತದೆ ಎಂದು 'ಆಕೆ'ಯೊಡನೆ ಹೇಳುತ್ತಾನೆ. ಆದರೆ ಕೆಲಸದ ಆರ್ಡರ್‌ನಲ್ಲಿ ಇರುವುದಕ್ಕೂ, ಡೀನ್ ಹೇಳುತ್ತಿರುವುದಕ್ಕೂ ವ್ಯತ್ಯಾಸ ಇರುವುದನ್ನು ಗಮನಿಸಿದ 'ಆಕೆ' ಅದನ್ನು ವಿರೋಧಿಸುತ್ತಾಳೆ. ಆದರೆ ಡೀನ್‌ನ ನಯಗಾರಿಕೆಯ ಮಾತುಗಳ ಮುಂದೆ 'ಆಕೆ' ಏನೂ ಮಾಡಲಾರದವಳಾಗುತ್ತಾಳೆ. ನೂರಾರು ಹುಡುಗ ಹುಡುಗಿಯರ ಹೆಸರು ವಿಳಾಸ ಎಲ್ಲಾ ಇದ್ದ ಉದ್ದನೆಯ ಲಿಸ್ಟ್ ಕೊಟ್ಟು ಅದರಲ್ಲಿ ಹದಿನಾರಕ್ಕೆ ಕಡಿಮೆ ವಯಸ್ಸಿನವರು ಎಷ್ಟು ಜನರಿದ್ದಾರೆ ಎಂದು ಲಿಸ್ಟ್ ಮಾಡುವ ಸಣ್ಣ ಪುಟ್ಟ ಕೆಲಸಗಳನ್ನು ಆಕೆಯ ಕೈಯಲ್ಲಿ ಮಾಡಿಸುತ್ತಾರೆ. ಅದಕ್ಕೆ ತೀವ್ರವಾದ ವಿರೋಧವನ್ನು ತಾನು ವ್ಯಕ್ತಪಡಿಸಿದರೆ ಸಿಕ್ಕಿರುವ ಕೆಲಸ ಹೊರಟು ಹೋಗಬಹುದೆಂದು ತಿಳಿದು 'ಆಕೆ' ಸುಮ್ಮನಾಗುತ್ತಾಳೆ. 'ಆತ'ನಿಗೂ ಕೆಲಸ ಸಿಕ್ಕಿಲ್ಲ. ಮನೆಯಿಂದ ಬರುವಾಗ ತಂದಿದ್ದ ಹಣವು ಖಾಲಿಯಾಗುತ್ತಿರುವುದರಿಂದ ಈ ಕೆಲಸವನ್ನು 'ಆಕೆ' ಒಪ್ಪಿಕೊಳ್ಳಲೇಬೇಕೆಂಬ ಅನಿವಾರ್ಯತೆ ಆಕೆಗಿದೆ. ಉನ್ನತ ವಿದ್ಯಾಭ್ಯಾಸ ಪಡೆದರೂ ಕೆಲಸದ ಸ್ಥಳದಲ್ಲಿ ತನಗಾಗುತ್ತಿರುವ ಶೋಷಣೆಯನ್ನು 'ಆಕೆ'ಯು ವಿರೋಧಿಸಲು ಸಾಧ್ಯವಾಗುವುದಿಲ್ಲ. ಅಧಿಕಾರಶಾಹಿಗಳು 'ಆಕೆ'ಯೊಡನೆ ನಡೆಸುವ ಶೋಷಣೆಯಿಂದ 'ಆಕೆ'ಯ ಮಾನಸಿಕ ನೆಮ್ಮದಿ ಹಾಳಾದರೂ, ಆ ಕೆಲಸದಿಂದ ತೃಪ್ತಿ ಸಿಗದೆ ಇದ್ದರೂ ಬದುಕಿಗಾಗಿ 'ಆಕೆ' ಸಹಿಸಿಕೊಳ್ಳುತ್ತಾಳೆ.

'ಆಕೆ'ಗೆ ನೌಕರಿ ಸಿಕ್ಕಿದ್ದರೂ ಕ್ವಾಟರ್ಸ್ ಸಿಕ್ಕಿರಲಿಲ್ಲ. ಆದ್ದರಿಂದಲೇ ಅವರಿಬ್ಬರು ಹೋಟೆಲಿನ ರೂಂನಲ್ಲಿ ವಾಸವಿದ್ದರು. ತಾವು ಮನೆಯಿಂದ ತಂದಿದ್ದ ಹಣವು ರೂಂ ಬಾಡಿಗೆಗೆ, ಊಟ ತಿಂಡಿ ಎಂದು ಖರ್ಚಾಗುತ್ತಿತ್ತು. 'ಆಕೆ'ಗೆ ಸಂಬಳ ಬರುವುದಕ್ಕೆ ತಿಂಗಳಾಗಬೇಕಿತ್ತು. ಆದೂ ಅಲ್ಲದೆ ತಾನು ತಂದಿದ್ದ ಹಣದಲ್ಲಿ ಇಪ್ಪತ್ತೈದೋ,

ಇಪ್ಪತ್ತಾರೋ ಮಾತ್ರ ಉಳಿದಿತ್ತು. ಅಷ್ಟು ಹಣದಲ್ಲಿ ಖರ್ಚನ್ನು ನಿಭಾಯಿಸುವುದು ಕಷ್ಟ ಎಂದು ತಿಳಿದು 'ಆಕೆ' ಪರಿಯಚಸ್ಥನಾದ ಮೂರ್ತಿಗೆ ಪತ್ರ ಬರೆದು ಹಣ ಕಳಿಸುವಂತೆ ಕೇಳಿಕೊಳ್ಳುತ್ತಾಳೆ. 'ಆತ'ನಿಗೆ ಅವನ ಕೆಲಸದ ಚಿಂತೆ ಬಿಟ್ಟರೆ ಇಂತಹವುಗಳ ಕಡೆ ಗಮನವಿಲ್ಲ. ಸಿಗದ ಕೆಲಸ ದಿನೇ ದಿನೇ ಏರುತ್ತಿರುವ ಖರ್ಚು ಈ ಮೊದಲಾದವುಗಳೆಲ್ಲ ಮಾನಸಿಕವಾಗಿ 'ಆತ' ಕುಗ್ಗಿ ಹೋಗುವಂತೆ ಮಾಡುತ್ತದೆ. ಆದರೆ 'ಆಕೆ' ತನ್ನ ಕೆಲಸದಲ್ಲಿ ಅಷ್ಟು ಒತ್ತಡವಿದ್ದರೂ ಸಹಿಸಿಕೊಂಡು ಅಲ್ಲಿನ ಖರ್ಚಿಗಾಗಿ ಮಾಡಬೇಕಾದ ಕೆಲಸವನ್ನು 'ಆಕೆ' ಮಾಡುತ್ತಾಳೆ. ಆದರೆ 'ಆತ' ಸಮಯ ಕಳೆಯಲು ಪುಸ್ತಕಗಳನ್ನು ಕೊಳ್ಳಲು ಮುಂದಾಗುತ್ತಾನೆ. ಒಳ್ಳೆಯ ಪುಸ್ತಕಗಳ್ಯಾವುವೂ ಸಿಗದೆ ಕೊನೆಗೆ ಆಫ್ರಿಕಾ ಖಂಡದಲ್ಲಿನ ವಿವಿಧ ಲೈಂಗಿಕ ಪದ್ಧತಿಗಳನ್ನು ವರ್ಣಿಸಿದ ಪುಸ್ತಕವೊಂದನ್ನು ಮೂರುವರೆ ರೂಪಾಯಿ ತೆತ್ತು ಕೊಳ್ಳುತ್ತಾನೆ. ಒಂದು ಕಡೆ 'ಆಕೆ' ಹಣಕ್ಕಾಗಿ ಪರದಾಡುತ್ತಿದ್ದರೆ, ಇನ್ನೊಂದು ಕಡೆ 'ಆತ' ಇರುವ ಹಣವನ್ನು ಸುಮ್ಮನೆ ಖರ್ಚು ಮಾಡುತ್ತಾನೆ. ಜೊತೆಗೆ "ನಾಳೆ ಆಫೀಸಿನಲ್ಲಿ ಸರಿಯಾಗಿ ವಿಚಾರಿಸು. ನಾನಿನ್ನು ಈ ಲಾಡ್ಜ್‌ನಲ್ಲಿ ಇರಕ್ಕಾಗಲ್ಲ. ದುಡ್ಡಿಲ್ಲ. ಫ್ಲ್ಯಾಟ್ ಬೇಕೇ ಬೇಕು ಅಂತ ಅವರಿಗೆ ಹೇಳು", "ದುಡ್ಡು ಬರ್‍ಲಿಲ್ವಾ" (ಗಿರಿ, ಗತಿ ಸ್ಥಿತಿ, ೧೯೯೯, ಪುಟ ೫೮) ಮೊದಲಾದಂತಹ ಕಟುವಾದ ಮಾತುಗಳನ್ನು 'ಆಕೆ'ಗೆ ಹೇಳುತ್ತಾನೆ. ವಾಸ್ತವಿಕತೆಯನ್ನು ಅರಿಯದೆ ಪರಿಸ್ಥಿತಿ ಒತ್ತಡಕ್ಕೊಳಗಾಗಿ 'ಆಕೆ'ಯಲ್ಲಿ 'ಆತ' ಸಿಡಿಮಿಡಿಗೊಳ್ಳುತ್ತಾನೆ. ಆದರೆ 'ಆಕೆ' ಮಾತ್ರ 'ಆತ'ನನ್ನು ಸಮಾಧಾನ ಮಾಡುತ್ತಾಳೆ. ಸಮನಾದ ಪರಿಸ್ಥಿತಿ ಇಬ್ಬರ ಮೇಲೆ ಬೇರೆ ಬೇರೆ ರೀತಿಯ ಪರಿಣಾಮಗಳನ್ನು ಉಂಟುಮಾಡುತ್ತದೆ. ಪರಿಸ್ಥಿತಿಯ ಒತ್ತಡಕ್ಕೊಳಗಾಗಿ 'ಆತ' ಹಿಂದೆ ಮುಂದೆ ನೋಡದೆ ಕೋಪಗೊಂಡರೆ, 'ಆಕೆ' ಪರಿಸ್ಥಿತಿಯ ಒತ್ತಡಕ್ಕೊಳಗಾದರೂ ತನ್ನ, ಮಾನಸಿಕ ಸ್ಥಿರತೆಯನ್ನು ಕಳೆದುಕೊಳ್ಳದೆ, ಸಹನಶೀಲತೆಯನ್ನು ಬೆಳೆಸಿಕೊಳ್ಳುತ್ತಾಳೆ. ಹೊರಗಿನ ಪರಿಸರ 'ಆತ'ನ ನೆಮ್ಮದಿಯನ್ನು ಹಾಳು ಮಾಡುತ್ತದೆ. ಬದುಕನ್ನು ಕಟ್ಟಿಕೊಳ್ಳಬೇಕೆಂಬ ಹಂಬಲ 'ಆತ'ನಿಗಿದ್ದರೂ ವ್ಯವಸ್ಥೆಯು ಒಡ್ಡುವ ಅಡೆತಡೆಗಳನ್ನು ದಾಟುವಷ್ಟು ಚಾಕಚಕ್ಯತೆ 'ಆತ'ನಿಗಿಲ್ಲ. ಅದರೊಟ್ಟಿಗೆ ವ್ಯವಸ್ಥೆಯ ಪಿತೂರಿಗೆ 'ಆತ' ಒಳಗಾದಂತೆ ತನ್ನ ಸ್ಥಿರತೆಯನ್ನು ಕಳೆದುಕೊಂಡು ಬಹುಬೇಗ ಉದ್ವಿಗ್ನತೆಗೊಳಗಾಗುತ್ತಾನೆ. ಒಟ್ಟಾರೆ 'ಆಕೆ' 'ಆತ'ನಿಗಿಂತ ಚೆನ್ನಾಗಿ ಪರಿಸ್ಥಿತಿಯನ್ನು ನಿಭಾಯಿಸುತ್ತಾಳೆ.

'ಆತ'ನನ್ನು ಬಹುವಾಗಿ ಪ್ರೀತಿಸುವ 'ಆಕೆ' ತಮ್ಮ ಪ್ರೀತಿಯನ್ನು ವಿವಾಹದ ಚೌಕಟ್ಟಿಗೆ ಒಳಪಡಿಸಬೇಕೆಂದು ಆಶಿಸುತ್ತಾಳೆ. ಮದುವೆಯ ಪ್ರಸ್ತಾಪವನ್ನು 'ಆತ'ನ ಮುಂದೆ ಮಾಡಿದಾಗ ಮದುವೆ ಯಾಕಾಗಬೇಕು? ನಾವಿಬ್ಬರು ಐದು ದಿನ ಒಟ್ಟಿಗೆ

ಇದ್ದರೂ ಮಿಂಡನ ಜೊತೆ ಇದ್ದಂತೆ ನಿನಗೆ, ಹುಡುಗಿ ಜೊತೆ ಮಜಾ ಮಾಡಿದೆ ಎಂದು ನನಗೆ ಅನ್ನಿಸಿಲ್ಲ. ಬೇರೆಯವರ ದೃಷ್ಟಿಯಲ್ಲಿ ಮದುವೆ ಆಗಿದೆ ಎಂದು ತಿಳಿಸಲು ಮಾಡಿಕೊಂಡರೂ ನಮ್ಮ ದೃಷ್ಟಿಯಲ್ಲಿ ವ್ಯತ್ಯಾಸ ಆಗುವುದಿಲ್ಲ. ಬೇರೆಯವರಿಗಾಗಿ ಮದುವೆ ಆಗಲು ಸಾಲ ಮಾಡಬೇಕು, ಒದ್ದಾಡಬೇಕು ಎಂದು ಹೇಳುತ್ತಾನೆ. 'ಆತ'ನ ಈ ಮಾತಿಗೆ 'ಆಕೆ'ಯ ವಿರೋಧವಿಲ್ಲದಿದ್ದರೂ ಸಮಾಜವು ಮದುವೆಯಾಗದ ಒಬ್ಬ ಗಂಡಿನ ಜೊತೆ ಇರುವ ಹೆಣ್ಣನ್ನು ತುಚ್ಛವಾಗಿ ಕಾಣುವುದನ್ನು ಸ್ವತಃ ಆಕೆಯೇ ಅನುಭವಿಸಿದ್ದಾಳೆ. ಆಕೆಯ ಕಾಲೇಜಿನ ಡೀನ್ "ನಿನಗೆ ಅಲಾಟ್ ಮಾಡಿದ ರೂಮನ್ನು ಇವತ್ತೇ ನೀನು ಬಂದು ಸೇರಬೇಕು. ನಿನಗೆ ಬೇರೆ ಮನೆ ಯಾವುದೂ ಕೊಡಕ್ಕಾಗಲ್ಲ. ಅಲ್ಲದೆ ನೀನು ಕ್ಯಾಂಪಸ್‌ನಲ್ಲೇ ಇರಬೇಕು. ಹೊರಗಡೆ ಎಲ್ಲೋ ಇರ್ತೀನಿ, ಯಾರ್‍ಯಾರ ಜೊತೇನೋ ಇರ್ತಿನಿ ಅಂದ್ರೆ ಅವೆಲ್ಲ ಆಗೋಲ್ಲ. ಮದುವೆ ಆಗ್ದಿರೋ ಹುಡ್ಗಿ ಹೋಟೆಲಿನಲ್ಲಿ..." (ಗಿರಿ, ಗತಿ ಸ್ಥಿತಿ, ೧೯೯೯, ಪುಟ ೭೩) ಎಂದು 'ಆಕೆ'ಗೆ ಹೇಳಿದ್ದರಿಂದ ಆ ಮಾತುಗಳನ್ನು ಮನಸ್ಸಿಗೆ 'ಆಕೆ' ತೆಗೆದುಕೊಳ್ಳುತ್ತಾಳೆ. ಡೀನ್ ಈ ಮೇಲಿನಂತೆ ಹೇಳಿದಾಗ 'ಆಕೆ' ನನ್ನ ವಸತಿ ಪ್ರಶ್ನೆ ನನ್ನದು, ನಿಮ್ಮ ರೂಮು ಬೇಕಿಲ್ಲ. ನಾನು ಎಲ್ಲಾದರೂ ಇರ್ತೀನಿ ಎಂದು ಹೇಳುವ ಮೂಲಕ 'ಆಕೆ' ವಿರೋಧವನ್ನು ಆ ಕ್ಷಣಕ್ಕೆ ವ್ಯಕ್ತಪಡಿಸಿದರೂ, ಮುಂದೆ ಯಾರಾದರೂ, ಯಾವಾಗಲಾದರೂ ಇದೇ ರೀತಿ ಮಾತನಾಡಿದರೆ ಎಂಬ ಭಯಕ್ಕಾಗಿ ಮದುವೆ ಪ್ರಸ್ತಾಪ ಮಾಡುತ್ತಾಳೆ. 'ಲಿವಿಂಗ್ ಟುಗೆದರ್'ನಂತಹ ಆಧುನಿಕ ಕಾಲದಲ್ಲಿ ನಿಂತು ಈ ಸಂದರ್ಭ ಗಮನಿಸಿದರೆ ಅಂತಹ ಮಹತ್ವದ್ದು ಅನಿಸುವುದಿಲ್ಲ. ಆದರೆ ಅಂದಿನ ದಿನಗಳಲ್ಲಿ 'ಲೀವಿಂಗ್ ಟುಗೆದರ್'ನಂತಹ ಸಂಬಂಧಗಳ ಮಹಿಳೆಯನ್ನು ಅಪಹಾಸ್ಯಕ್ಕೆ ಗುರಿ ಮಾಡುವಂತೆ ಇದ್ದವು. ಆದ್ದರಿಂದಲೇ 'ಆಕೆ', 'ಆತ'ನ ಲೀವಿಂಗ್ ಟುಗೆದರ್ ಸಂಬಂಧವನ್ನು ಒಪ್ಪಿಕೊಂಡರೂ ಸಮಾಜಕ್ಕಾಗಿ ಮದುವೆ ಪ್ರಸ್ತಾಪ ಮುಂದಿಡುತ್ತಾಳೆ. ಸಮಾಜದ ಆಚಾರ, ನಂಬಿಕೆಗಳು ಆಕೆಯ ವೈಯಕ್ತಿಕ ಜೀವನದ ಮೇಲೆ ಪ್ರಭಾವ ಬೀರುವುದನ್ನು ಇಲ್ಲಿ ನೋಡಬಹುದು.

ನಗರ ಪ್ರದೇಶದಲ್ಲಿ ಒಳ್ಳೆಯ ವಿದ್ಯಾಭ್ಯಾಸ ಪಡೆದ ಮಹಿಳೆಯರು ಉಪನ್ಯಾಸಕರು, ವೈದ್ಯರು, ವಕೀಲರು ಮೊದಲಾದ ಒಳ್ಳೆಯ ವೃತ್ತಿಗಳಲ್ಲಿ ಇರುತ್ತಾರೆ. ಈ ಮೇಲಿನ ಮೊದಲಾದ ವೃತ್ತಿಗಳಲ್ಲಿ ಪುರುಷರೇ ಹೆಚ್ಚಾಗಿ ಬಹಳ ಹಿಂದಿನಿಂದಲೂ ಇದ್ದಾರೆ. ಈ ಕ್ಷೇತ್ರಗಳನ್ನು ಕೆಲವು ದಶಕಗಳಿಂದೀಚೆಗೆ ಮಹಿಳೆಯರು ಪ್ರವೇಶಿಸಿದ್ದಾರೆ. ಪುರುಷರೇ ಹೆಚ್ಚಾಗಿರುವ ಈ ಕ್ಷೇತ್ರಗಳಲ್ಲಿ ಮಹಿಳೆಯರು ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ತುಸು ಹೆಚ್ಚೇ ಎನ್ನುವ ಹೋರಾಟ ನಡೆಸಬೇಕಾಗುತ್ತದೆ. ಈ ಕಾದಂಬರಿಯ 'ಆಕೆ'

ಕೂಡ ಉತ್ತಮ ವಿದ್ಯಾಭ್ಯಾಸ ಪಡೆದ ಮಹಿಳೆ. ಹಾಗೆ ಉಪನ್ಯಾಸಕ ವೃತ್ತಿಯನ್ನು ಆರಿಸಿಕೊಂಡವಳು. ಆ ಕೆಲಸದಲ್ಲಿ ಅಧಿಕಾರಶಾಹಿಗಳು ನೀಡುವ ಶೋಷಣೆಯನ್ನು ಮೀರಿ ತನ್ನದೇ ಆದ ಅಸ್ತಿತ್ವ ಸ್ಥಾಪಿಸಿಕೊಳ್ಳಲು ಬದ್ಧಳಾಗಿ ನಿಂತವಳು. ಈ ರೀತಿ ಅಸ್ತಿತ್ವ ಸ್ಥಾಪಿಸಿಕೊಳ್ಳುವ ಹಂತದಲ್ಲಿ 'ಆಕೆ' ಒತ್ತಡಗಳನ್ನು ಎದುರಿಸಬೇಕಾಗುತ್ತದೆ. ಒತ್ತಡ ಎಂದರೆ ಒಬ್ಬ ವ್ಯಕ್ತಿಯ ಸಾಮರ್ಥ್ಯಕ್ಕೆ ಮೀರಿದ, ಸಹಿಷ್ಣುತೆಗೆ ಮೀರಿದಂತಹ ದೈಹಿಕ ಅಥವಾ ಮಾನಸಿಕ ಘಟನೆಗಳಾಗಿವೆ. ಅತಿಯಾದ ಪರಿಶ್ರಮ, ಹವಾಮಾನದ ವೈಪರಿತ್ಯ ಈ ಮೊದಲಾದವು ದೇಹವನ್ನು ಕುಗ್ಗಿಸುತ್ತವೆ. ಭಯ, ಅವಮಾನ, ಆತಂಕ ಮುಂತಾದವು ಮನಸ್ಸಿಗೆ ತೊಂದರೆ ಉಂಟು ಮಾಡುತ್ತವೆ. ಇವೆಲ್ಲಾ ವ್ಯಕ್ತಿಗೆ ಒತ್ತಡವನ್ನು ತಂದೊಡ್ಡುತ್ತದೆ. ಜೀವನದ ಎಲ್ಲಾ ಸಂದರ್ಭದ ಎಲ್ಲಾ ಘಟನೆಗಳು ವ್ಯಕ್ತಿಗೆ ಒತ್ತಡವಾಗುವುದಿಲ್ಲ. ಯಾವುದೋ ಒಂದು ಸಮಸ್ಯೆ ಬಹಳ ಕಾಲ ವ್ಯಕ್ತಿಯಲ್ಲಿ ಉಳಿದಾಗ, ಆ ವ್ಯಕ್ತಿಗೆ ಸಮಸ್ಯೆಯನ್ನು ತನ್ನಿಂದ ಪರಿಹರಿಸಲಾಗುವುದಿಲ್ಲ ಎಂಬಂತಹ ಅಸಹಾಯಕತೆ ಮೂಡಿದಾಗ, ಈ ಸಮಸ್ಯೆಯನ್ನು ಪರಿಹಾರ ಮಾಡಲು ಯಾರ ಒತ್ತಾಸೆ, ಸಹಾಯ ಇಲ್ಲದಿದ್ದಾಗ, ಉಪಾಯವಿಲ್ಲದಿದ್ದಾಗ, ಕೆಲವು ವ್ಯಕ್ತಿತ್ವ ದೋಷಗಳಿದ್ದಾಗ ವ್ಯಕ್ತಿಗೆ ಆ ಸಮಸ್ಯೆಯೇ ಒತ್ತಡವಾಗಿ ಪರಿಣಮಿಸುತ್ತದೆ. 'ಆಕೆ' ಮತ್ತು 'ಆತ'ನಿಗೂ ಈ ಕಾದಂಬರಿಯಲ್ಲಿ ಒತ್ತಡವಿದೆ. ನೌಕರಿಗಾಗಿ ಆ ಸೆಖೆಯ ಊರಿಗೆ ಬಂದ ಅವರಿಬ್ಬರಿಗೆ ಆ ಊರಿನ ಸೆಖೆ, ತಾಪ, ಕಿರುಕುಳ, ಬಾಸುಗಳು, ಪ್ರೊಫೆಸರುಗಳು, ಬಂಡೆಗಳು, ಅಲ್ಲಿನ ಊಟ, ಹೋಟೆಲಿನ ರೂಮು ಈ ಮೊದಲಾದ ಸಂಗತಿಗಳು ದೈಹಿಕ ಮತ್ತು ಮಾನಸಿಕ ಒತ್ತಡಗಳಾಗಿ ಪರಿಣಮಿಸುತ್ತದೆ. ಪ್ರತಿದಿನ ಇಂತಹ ಒತ್ತಡದಲ್ಲಿ ಅವರು ದಿನ ಕಳೆಯಬೇಕಾಗುತ್ತದೆ. ಈ ಒತ್ತಡವನ್ನು ನಿವಾರಿಸಲು ಅವರಿಬ್ಬರಿಗೆ ಸಾಧ್ಯವಾಗುವುದಿಲ್ಲ. ಕಾಣದ, ಗೊತ್ತಿಲ್ಲದ ಊರಿನಲ್ಲಿ ಅಪರಿಚಿತರ ನಡುವೆ ಯಾವುದೇ ಸಹಾಯ, ಸಹಕಾರ, ಒತ್ತಾಸೆಯಿಲ್ಲದೆ ಒತ್ತಡ ದೂರವಾಗುವುದಿಲ್ಲ. 'ಆಕೆ' ಆ ಸಮಸ್ಯೆಯನ್ನು ಒತ್ತಡವಾಗಿ ಪ್ರಾರಂಭದಲ್ಲಿ ತೆಗೆದುಕೊಳ್ಳದೆ ಸಹನೆ ಬೆಳೆಸಿಕೊಂಡರೂ ವೃತ್ತಿಯ ಸ್ಥಳದಲ್ಲಿನ ಅಧಿಕಾರ ಶಾಹಿಗಳ ಕಿರುಕುಳವು ಅವಳ ಸಹನೆಯನ್ನು ಕಳೆಯುತ್ತದೆ. 'ಆಕೆ'ಗೆ ದೈಹಿಕ ದಣಿವಿನ ಒತ್ತಡಕ್ಕಿಂತ ವೃತ್ತಿಯಲ್ಲಿನ ಮಾನಸಿಕ ಒತ್ತಡವು ಅತಿಯಾಗಿ ಕಾಡಲಾರಂಭಿಸುತ್ತದೆ. ಈ ವೃತ್ತಿಯಲ್ಲಿನ ಒತ್ತಡದ ಪರಿಣಾಮವಾಗಿ ಕೊನೆಗೊಂದು ದಿನ 'ಆಕೆ' ತನ್ನ ಕೆಲಸ ಬಿಡುವ ನಿರ್ಧಾರ ಮಾಡುತ್ತಾಳೆ. ಇದು ಆಕೆಯ ಪಲಾಯನವಾದಿತನವಲ್ಲ. ಬದಲಿಗೆ ತನ್ನ ಅಹಂಗೆ ಕುಂದಾಗುತ್ತಿರುವುದನ್ನು ತಡೆಯುವ, ಕೊನೆಗೆ ಅಧಿಕಾರಶಾಹಿಗಳ ತಾಳಕ್ಕೆ ಕುಣಿಯದ, ತಾನೇ ತಾನಾಗುವ ಅಸ್ತಿತ್ವದ ಕಡೆ ಹೆಜ್ಜೆ ಹಾಕುವ ನಡೆಯಾಗಿದೆ.

ಟಿ.ಜಿ.ರಾಘವರವರ 'ಮನೆ' ಕಾದಂಬರಿಯು ಆಧುನಿಕ ನಗರ ಜೀವನವನ್ನು ಅದರ ದುರಂತವನ್ನು ಸವಿಸ್ತಾರವಾಗಿ ಕಟ್ಟಿಕೊಡುತ್ತದೆ. ಕಾದಂಬರಿಯ ರಾಜಣ್ಣ ಮತ್ತು ಗೀತ ದಂಪತಿ ನಗರೀಕರಣದ ಭರಾಟೆಯಲ್ಲಿ ತಮ್ಮ ಖಾಸಗೀತನವನ್ನು ಹಂತಹಂತವಾಗಿ ಕಳೆದುಕೊಂಡ ಬಗೆಯನ್ನು ಮತ್ತು ತಮ್ಮ ಮೊದಲಿನ ಜೀವನವನ್ನು ಮರಳಿ ಪಡೆಯುವುದಕ್ಕಾಗಿ ಅವರು ಪಡುವ ಪ್ರಯತ್ನವನ್ನು ನಾವು ಕಾಣಬಹುದಾಗಿದೆ. ಮನೆಗೆ ನಮ್ಮ ಬದುಕಿನಲ್ಲಿ ಮಹತ್ವವಾದ ಸ್ಥಾನವಿದೆ. ಮನೆಯು ಹೊರಗಿನ ಜಂಜಾಟಗಳಿಂದ ಬೇಸತ್ತ ನಮ್ಮ ಮನಸ್ಸಿಗೆ ಹಿತ ನೀಡುತ್ತದೆ. ನಾವು, ನಮ್ಮದು ಎಂಬ ಬಾಂಧವ್ಯವನ್ನು ಮನೆಯು ಬೆಸೆಯುತ್ತದೆ. ನಮ್ಮ ಜೀವನದ ಖಾಸಗಿತನದ ಅನುಭವವನ್ನು ಮನೆ ನೀಡುತ್ತದೆ. ಇಂತಹ ಎಲ್ಲಾ ಆಸೆಗಳನ್ನು ರಾಜಣ್ಣ ಮತ್ತು ಗೀತ ದಂಪತಿಗಳು ಇಟ್ಟುಕೊಂಡು ಬೆಂಗಳೂರಿನ ಆ ಮನೆಗೆ ವಾಸಕ್ಕೆ ಬರುತ್ತಾರೆ. ಮನೆ ಪುಟ್ಟದಾದರೂ ಕೊಪ್ಪದಲ್ಲಿದ್ದ ಮನೆಯಂತೆ ಯಾವುದೇ ತಾಪತ್ರಯಗಳು ಇಲ್ಲವೆಂದುಕೊಂಡು ಅವರು ಬೆಂಗಳೂರಿನ ಆ ಮನೆಗೆ ಬಾಡಿಗೆದಾರರಾಗುತ್ತಾರೆ. ಆದರೆ ಕಾಲ ಕ್ರಮೇಣ ರಾಜಣ್ಣ ಮತ್ತು ಗೀತ ದಂಪತಿಗಳಿಗೆ ಮನೆ ಖಾಸಗೀತನದಿಂದ ನಿಧಾನವಾಗಿ ಸಾರ್ವಜನಿಕಗೊಳ್ಳುತ್ತಾ ಹೋಗುವ ಅರಿವಾಗುತ್ತದೆ. ನಗರೀಕರಣ ಪ್ರಕ್ರಿಯೆಗೆ ಒಳಪಟ್ಟ ಬೆಂಗಳೂರು ರಾಜಣ್ಣ ಮತ್ತು ಗೀತರ ನಡುವೆ ಇದ್ದ ಪ್ರೀತಿ, ನೆಮ್ಮದಿಯನ್ನು ಪಲ್ಲಟಗೊಳಿಸುತ್ತದೆ. ನಗರೀಕರಣದ ಭಾಗವಾದ ವರ್ಕ್‌ಶಾಪ್ ಅವರ ಮನೆಗೆ ಹೊಂದಿಕೊಂಡೇ ಇದ್ದು, ಅದರ ಗದ್ದಲ ಉದ್ದೇಶಪೂರ್ವಕವಾಗಿ ಹೆಚ್ಚಾದಾಗ ಅದನ್ನು ನಿವಾರಿಸಲು ರಾಜಣ್ಣ ಮತ್ತು ಗೀತ ದಂಪತಿ ನಾನಾ ರೀತಿಯ ಪ್ರಯತ್ನಗಳನ್ನು ಪಡುತ್ತಾರೆ. ಕ್ರಮೇಣ ಪ್ರೀತಿ, ನೆಮ್ಮದಿ ಇದ್ದ ಜಾಗದಲ್ಲಿ ಅಸಹನೆ, ಸಂದೇಹಗಳು ಜಾಗ ಪಡೆಯುತ್ತವೆ.

ಮನೆ ಮಾಲೀಕನ ಕುತಂತ್ರ ಮತ್ತು ವರ್ಕ್‌ಶಾಪ್ ಜನರ ಕ್ರೂರತೆಯಿಂದಾಗಿ, ವರ್ಕ್‌ಶಾಪ್‌ನ ಗದ್ದಲ ದಿನೇ ದಿನೇ ಹೆಚ್ಚಾಗುತ್ತದೆ. ಭಾನುವಾರ ಕೂಡ ದಂಪತಿಗಳು ಗದ್ದಲದಿಂದ ಮುಕ್ತರಾಗಿ ನೆಮ್ಮದಿಯಿಂದ ಇರಲು ಸಾಧ್ಯವಾಗುವುದಿಲ್ಲ. ಅತ್ತ ವರ್ಕ್‌ಶಾಪ್‌ನ ಗದ್ದಲ ಹೆಚ್ಚಾಗುತ್ತಿದ್ದಂತೆ ಇತ್ತ, ರಾಜಣ್ಣನ ಅಸಹನೆಯು ಹೆಚ್ಚಾಗುತ್ತದೆ. ಈ ಹಿಂದೆಯೆಲ್ಲ ಹೆಂಡತಿಯ ಹತ್ತಿರ ಪ್ರೀತಿಯಿಂದ ಇರುತ್ತಿದ್ದ ರಾಜಣ್ಣ, ಈಗ ಅಸಹನೆಯಿಂದ ಸಿಡಿಮಿಡಿಗೊಳ್ಳಲು ಪ್ರಾರಂಭಿಸುತ್ತಾನೆ. ಸಾಮಾನ್ಯವಾಗಿ ವ್ಯಕ್ತಿಗಳು ಒಂದು ವಸ್ತು ಅಥವ ಘಟನೆಯ ಬಗ್ಗೆ ಇರುವ ಆವೇಗಗಳನ್ನು ಬೇರೆ ವಸ್ತುವಿಗೆ ವರ್ಗಾಯಿಸುತ್ತಾರೆ. ಅದೇ ರೀತಿ ಇಲ್ಲಿ ರಾಜಣ್ಣ ವರ್ಕ್‌ಶಾಪ್‌ನ ಗದ್ದಲದ ಬಗ್ಗೆ ಇರುವ ಆವೇಗವನ್ನು ತನ್ನ ಹೆಂಡತಿಯ ಮೇಲೆ ಕೋಪಗೊಳ್ಳುವ ಮೂಲಕ

ವರ್ಗಾಯಿಸುತ್ತಾನೆ. ರಾಜಣ್ಣ ಮತ್ತು ಗೀತ ಇಬ್ಬರೂ ಒಂದೇ ರೀತಿಯ ಸಮಸ್ಯೆಯನ್ನು ಎದುರಿಸುತ್ತಿದ್ದರೂ, ಗೀತ ಅದನ್ನು ರಾಜಣ್ಣನಂತೆ ವರ್ಗಾಯಿಸುವುದಿಲ್ಲ. ಮಹಿಳೆ ಪುರುಷನಿಗೆ ಅಧೀನವಾದ್ದರಿಂದ ರಾಜಣ್ಣ ತನ್ನ ಆವೇಗವನ್ನು ಗೀತಳಿಗೆ ವರ್ಗಾಯಿಸುತ್ತಾನೆ. ಆದರೆ ಆ ರೀತಿ ಗೀತ ಮಾಡುವಂತ್ತಿಲ್ಲ ಮತ್ತು ಮಾಡುವುದಿಲ್ಲ.

ವರ್ಕ್ ಶಾಪ್‌ನ ಗದ್ದಲದಿಂದ ಮುಕ್ತರಾಗಲು ರಾಜಣ್ಣ ಮತ್ತು ಗೀತ ಸಾಕಷ್ಟು ಪರಿಶ್ರಮಪಡುತ್ತಾರೆ. ಗೀತಾಳ ಚಿಕ್ಕಮ್ಮನ ನಡತೆ ಚೆನ್ನಾಗಿಲ್ಲ ಎಂದು ತಿಳಿದಿದ್ದರೂ, ಆಕೆಯ ನೆರವಿನಿಂದ ತಮ್ಮ ಸಮಸ್ಯೆಯಿಂದ ಮುಕ್ತರಾಗಲು ಬಯಸುತ್ತಾರೆ. ಗೀತಾಳ ಚಿಕ್ಕಮ್ಮ ತನಗೆ ಗೊತ್ತಿರುವ ಇನ್ಸ್‌ಪೆಕ್ಟರ್ ಮೂಲಕ ದಂಪತಿಗಳ ಸಮಸ್ಯೆ ಪರಿಹಾರಿಸಲು ಮುಂದಾಗುತ್ತಾಳೆ. ಆದರೆ ಇನ್ಸ್‌ಪೆಕ್ಟರ್ ಗೀತಾಳ ಮೇಲೆ ಇಟ್ಟಿರುವ ವಿಶೇಷ ಆಸಕ್ತಿಯನ್ನು ಕಂಡ ರಾಜಣ್ಣನಿಗೆ ತನ್ನ ಹೆಂಡತಿಯನ್ನೇ ಅನುಮಾನದಿಂದ ಕಾಣಲು ಪ್ರೇರೇಪಿಸುತ್ತದೆ. ವರ್ಕ್‌ಶಾಪಿನ ಗದ್ದಲದ ಸಮಸ್ಯೆ ಬೃಹದಾಕಾರದ ಸಮಸ್ಯೆಯಾಗಿ ದಾಂಪತ್ಯ ಜೀವನದ ನಂಬಿಕೆಯನ್ನು ಕಳೆದು ಹಾಕುತ್ತದೆ. ಗಂಡನೇ ತನ್ನ ಪ್ರೀತಿಯ ಹೆಂಡತಿಯನ್ನು ಸಂದೇಹದಿಂದ ನೋಡುವಂತೆ ನಗರೀಕರಣ ಸಂದರ್ಭವು ಸೃಷ್ಟಿಸುತ್ತದೆ. ನಗರೀಕರಣವು ಅಸಹನೆ, ಅನುಮಾನ, ಒತ್ತಡಗಳನ್ನು ಆ ದಂಪತಿಗಳಲ್ಲಿ ಸೃಷ್ಟಿ ಮಾಡಿದಂತೆ ಮಗುವಿನ ನಿರೀಕ್ಷೆಯನ್ನು ಒಪ್ಪಿಕೊಳ್ಳದಂತೆ ಮಾಡುತ್ತದೆ. ಒಟ್ಟಾರೆ ನಗರೀಕರಣವು ರಾಜಣ್ಣ ಮತ್ತು ಗೀತ ದಂಪತಿಗಳ ಜೀವನದ ಪ್ರತಿಯೊಂದು ಅಂಶಗಳ ಮೇಲೂ ತನ್ನ ಅಸ್ತಿತ್ವವನ್ನು ಸ್ಥಾಪಿಸಲು ಪ್ರಯತ್ನಿಸಿ ಸಫಲವಾಗುತ್ತದೆ. ಈ ನಗರೀಕರಣವು ಅಸಹನೆ, ಅನುಮಾನ, ಅಸೂಯೆ ಇಂತಹ ಭಾವನೆಗಳು ಪುರುಷರಲ್ಲಿ ಹೆಚ್ಚಾಗುವಂತೆ ಪ್ರೇರೇಪಿಸುತ್ತದೆ. ರಾಜಣ್ಣನ ಇಂತಹ ಭಾವನೆಗಳನ್ನು ಗೀತ ಅಸಹಾಯಕಳಂತೆ ಸಹಿಸಿಕೊಳ್ಳುತ್ತಾಳೆ. ಏಕೆಂದರೆ ನಗರೀಕರಣವು ಅಂತಹ ಅನಿವಾರ್ಯತೆಯನ್ನು ಆ ರೀತಿ ಸೃಷ್ಟಿ ಮಾಡಿದೆ.

ಬಿ.ಎಂ.ಶ್ರೀಯವರ ಮೊಮ್ಮಗಳಾದ ರಾಜಲಕ್ಷ್ಮಿಯವರಿಗೆ ಸಹಜವಾಗಿಯೇ ದಟ್ಟವಾದ ಸಾಹಿತ್ಯಕ ವಾತಾವರಣದ ಹಿನ್ನೆಲೆ ಇತ್ತು. ತಮ್ಮ ಕಾಲದಲ್ಲಿನ ಸಾಹಿತ್ಯದ ಶೈಲಿಗೆ ಬಗ್ಗೆ ಬೇಸತ್ತ ರಾಜಲಕ್ಷ್ಮಿಯವರು ಜೀವನ ಹಾಗೂ ಸಮಸ್ಯೆಗಳನ್ನು ಸಾಹಿತ್ಯವು ಪರಿಶೀಲಿಸುವಂತಿರಬೇಕು ಎಂಬ ಆಸೆಯನ್ನು ಹೊಂದಿದ್ದ ಅವರು ಅದೇ ರೀತಿಯ ಸಾಹಿತ್ಯ ರಚನೆಗೆ ಮುಂದಾದರು ರಾಮಚಂದ್ರ ಶರ್ಮದ ಕಥೆಗಳಿಂದ ಪ್ರಭಾವಗೊಂಡ ರಾಜಲಕ್ಷ್ಮಿ ಎನ್.ರಾವ್ ಅವರು ಗೋಪಾಲ ಕೃಷ್ಣ ಅಡಿಗರನ್ನು ತಮ್ಮ ಸಾಹಿತ್ಯಕ ಗುರು ಎಂದು ಭಾವಿಸುತ್ತಾರೆ. ನವ್ಯ ಕಾಲಘಟ್ಟದ ಆರಂಭದ ದಿನಗಳಲ್ಲಿ ಬರೆಯಲು

ಆರಂಭಿಸಿದ ಇವರು, ಸಂಗಮ ಎನ್ನುವ ಒಂದೇ ಒಂದು ಕಥಾಸಂಕಲನವನ್ನು ಹೊರತಂದಿದ್ದಾರೆ ಇವರ ಕಥೆಗಳ ವಸ್ತುವು ಗಂಡು ಹೆಣ್ಣಿನ ಸಂಬಂಧವನ್ನು ಕುರಿತಾದ್ದಾಗಿದೆ. ಇವರ ಕಥೆಗಳಲ್ಲಿ ಬಾಹ್ಯ ವಿವರಣೆಗಳಿಗಿಂತ ಮನೋವಲಯದಲ್ಲಿ ನಡೆಯುವ ದ್ವಂದ್ವ, ಸಂಘರ್ಷಗಳ ಹೋರಾಟಗಳ ಚಿತ್ರಣವಿವೆ. ಮಹಿಳೆಯ ನೋವು, ಸಂಘರ್ಷಗಳ ಹೋರಾಟಗಳ ಚಿತ್ರಣವಿದೆ. ಮಹಿಳೆಯ ನೋವು, ಸಂಘರ್ಷಗಳು ಜೊತೆಜೊತೆಗೆ ಪುರುಷನ ಸೂಕ್ಷ್ಮಾತಿ ಸೂಕ್ಷ್ಮ ಮನೋವ್ಯಾಪಾರಗಳ ವಿವರಗಳು ಇವರ ಕಥೆಯಲ್ಲಿ ಪಾವ ಪಡೆದಿವೆ " ಗಂಡುಹೆಣ್ಣುಗಳಿಬ್ಬರೂ ಸಾಮಾನ್ಯವಾದ ಯಾತನೆಯ ಮಿಸ್ಟರಿಯನ್ನು ಅವರು ಗಂಡು ಹೆಣ್ಣುಗಳು ಸಾಮಾನ್ಯವಾದ ಯಾತನೆಯ ಮಿಸ್ಟರಿಯನ್ನು ಅವರು ಗಂಡು ಹೆಣ್ಣುಗಳ ಸಂಬಂಧದ ಚೌಕಟ್ಟಿನಲ್ಲಿ ದಾಂಪತ್ಯದ ಚೌಕಟಿನಲ್ಲಿ ಪರಿಶೀಲಿಸುತ್ತಾರೆ ತ್ರಿವೇಣಿಯಂತೆ ಅವರು ಸ್ತ್ರೀವರ್ಗದ ವಕ್ತಾರಂತೆ ಬರೆಯುತ್ತಿದ್ದಾರೆ ಅನ್ನಿಸುವುದಿಲ್ಲ ಗಂಡಸಿನ ದೌರ್ಬಲ್ಯಗಳ ಜೊತೆಗೆ ಅವನ ಕಷ್ಟಗಳ ಅರಿವು ಇರುವುದರಿಂದ ಮತ್ತು ಆ ಕಷ್ಟಗಳ ವಸ್ತು ನಿಷ್ಠ ನಿರೂಪಣೆಯಿಂದ ರಾಜಲಕ್ಷ್ಮಿಯವರ ಕತೆಗಳಲ್ಲಿ ಲೇಖಕಿಯರಿಗೆ ಅಪರೂಪವಾದ ವಸ್ತುನಿಷ್ಠತೆ, ಪ್ರಬುದ್ದತೆ ಸಾಧಿಸುವುದು ಅನನ್ಯ. ಇದರಿಂದಾಗಿಯೇ ಅನುಭವವನ್ನು ಸರಳವಾಗಿ ನೇರವಾಗಿ ಹೇಳಿಬಿಟ್ಟು ಕೈ ತೊಳೆದು ಕೊಳ್ಳುವ ತ್ರಿವೇಣಿ, ಅನುಪಮಾ, ವಾಣಿ ಇವರಿಗಿಂತ ಭಿನ್ನವಾಗಿ ಕಥೆ ಹೇಳುವ ಕಷ್ಟಕ್ಕೂ, ಹೊಸ ಶೈಲಿಯ ಅನಿವಾರ್ಯತೆಗೂ ಒಳಗಾದರೆಂದು ಕಾಣುತ್ತದೆ. ಅವರು ಕಥೆಗಳು ಮಹಿಳಿಯರಿಗೆ, ವಿಶಿಷ್ಠವಾದ ದೃಷ್ಟಿಕೋನ, ಶೈಲಿ ಇವುಗಳ ಅನಿವಾರ್ಯತೆಯನ್ನು ಜೊತೆಗೆ, ಈ ಲೇಖಕಿಯರು ಒಟ್ಟು ಸಾಹಿತ್ಯಪರಂಪರೆಯೊಡನೆ ಪಡೆಯಬೇಕಾದ ಸಂಬಂಧದ ಸ್ವರೂಪವನ್ನು ಸೂಚಿಸುವ ಪ್ರತೀಕಗಳಾಗಿ ಉಳಿದಿವೆ." (ಶೂದ್ರ ಪತ್ರಿಕೆ, ನವೆಂಬರ್ ೧೯೮೦) ಎಂದು ಲಂಕೇಶರವರು ರಾಜಲಕ್ಷ್ಮಿಯವರ ಕಥೆಗಳನ್ನು ಕುರಿತು ಹೇಳಿದ್ದಾರೆ. ಅವರ ಮಾತುಗಳು ರಾಜಲಕ್ಷ್ಮಿಯವರ ಕಥಾ ಯಶಸ್ವಿಗೆ ಹಿಡಿದ ಕೈ ಗನ್ನಡಿಯಾಗಿದೆ.

'ಕಲ್ಯಾಣಿ' ಕಥೆಯಲ್ಲಿ ರಾಜಲಕ್ಷ್ಮಿಯವರ ಗಂಡು, ಹೆಣ್ಣಿ ಪ್ರಪಂಚಗಳ ನಡುವೆ ಇರುವ ಅಂತರವನ್ನು ಸ್ಪಷ್ಟವಾಗಿ ಅಭಿವ್ಯಕ್ತಿಸುತ್ತಾರೆ. ಈ ಕಥೆಯಲ್ಲಿ ಮೂವರು ನಾಯಕರು ಒಂದು ಹೆಣ್ಣನ್ನು ಪರಿಭಾವಿಸುವ ನೆಲೆಗೂ ಹೆಣ್ಣೊಬ್ಬಳು ಗಂಡೊಬ್ಬನನ್ನು ಅಭಿವ್ಯಕ್ತಿಸುವ ಕ್ರಮಕ್ಕೂ ಇರುವ ಸ್ಪಷ್ಟ ವ್ಯತ್ಯಾಸವನ್ನು ಕಾಣಬಹುದಾಗಿದೆ. ಶ್ರೀಮಂತನಾದ ಮಾಧವನಿಗೆ ಹೆಣ್ಣಿಗಿಂತ ಹಣವೇ ಮುಖ್ಯ, ವ್ಯಾಪಾರೀ ಮನೋಭಾವದವನಾದ ಈತ ಬದುಕಿನ ಎಲ್ಲ ವಿಚಾರಗಳನ್ನು ಹಣದಿಂದಲೇ ಅಳೆದು ನೋಡುತ್ತಾನೆ. ಕಲಾವಿದನಾದ ಕೇಶವನಿಗೆ ಯಾವುದೇ ದೋಷ ವಿಲ್ಲದ ಹೆಣ್ಣಿನ ಬಗ್ಗೆ

ಹೆಂಡತಿ, ಮಕ್ಕಳ ಬಗ್ಗೆ ಅತೀವವಾದ ಪ್ರೀತಿ. ಈ ಮೂವರು ಪುರುಷರು ಮೂರು ವಿಭಿನ್ನ ರೀತಿಯ ಗುಣಗಳನ್ನು ಹೊಂದಿದ್ದಾರೆ. ಆದರೆ ಕತೆಯ ನಾಯಕಿ ಕಲ್ಯಾಣಿಯ ಪಾಲಿಗೆ ಈ ಮೂವರು ಗಂಡುಗಳ ಅಪೂರ್ಣರಾಗಿ ಕಾಣಿಸಿಕೊಳ್ಳುತ್ತಾರೆ. ಅವಳು ಕಂಡ ಕೇಶವ, ಮಾಧವ, ಗೋಪಾಲರು ತನ್ನ ಒಂದೊಂದು ಭಾಗವನ್ನು ಅರ್ಥಮಾಡಿಕೊಳ್ಳುತ್ತಾರೆ. ಮೂರು ಕನ್ನಡಿಗಳಲ್ಲೂ ಚಿತ್ರ ಸುಂದರವಾಗಿರು ಬಹುದು. ಇಲ್ಲದಿರಬಹುದು. ಆದರೆ ಮೂರು ಚಿತ್ರಗಳು ಅಪೂರ್ಣವಾದ್ದದ್ದು ಎಂದು ಹೇಳುತ್ತಾ ಈ ಮೂವರನ್ನು ತಿರಸ್ಕರಿತ್ತಾಳೆ. ತನ್ನ ವ್ಯಕ್ತಿತ್ವ ಅಸ್ತಿತ್ವದ ಬಗ್ಗೆ ಗಟ್ಟಿಯಾದ ನಂಬಿಕೆ ಇರುವುದರಿಂದ ಕಲ್ಯಾಣಿ ಇತರರ ದೌರ್ಬಲ್ಯಗಳನ್ನು ಕಂಡು ಹಿಡಿಯಲು ಸಮರ್ಥಳಾಗುತ್ತಾಳೆ. ಮಹಿಳೆಯ ನಿರ್ಧಾರಕ ಶಕ್ತಿ ಬಗ್ಗೆ (ಡಿಸಿಷನ್ ಮೇಕಿಂಗ್) ರಾಜಲಕ್ಷ್ಮಿಯವರು ಹೆಚ್ಚು ಗಮನ ಹರಿಸಿದ್ದಾರೆ.

ವಿವಾಹೇತರ ಸಂಬಂಧವನ್ನು ಹೇಳುವ 'ಫೀಡ್ರಾ' ಕತೆಯು ಮಹಿಳೆಯ ಲೈಂಗಿಕ ಬಯಕೆಗಳನ್ನು ಅದನ್ನು ಈಡೇರಿಸಿಕೊಳ್ಳಲು ಸಾಧ್ಯವಿಲ್ಲದ ನೈತಿಕ ಚೌಕಟ್ಟನ್ನು ಅಭಿವ್ಯಕ್ತಿಸುತ್ತದೆ. ಬಡತನಕ್ಕೆ ಸಿಲುಕಿದ ಪಾರ್ವತಿಯನ್ನು ಮುದುಕ ನರಸಿಂಹಯ್ಯ ಮದುವೆಯಾಗುತ್ತಾನೆ. ಹದಿನಾರು ವರ್ಷದ ಪಾರ್ವತಿ ತನಗಿಂತ ಎರಡು ವರ್ಷ ದೊಡ್ಡವನಾದ ಮಲಮಗನಿಂದ ಆಕರ್ಷಿತಳಾಗುತ್ತಾಳೆ ನೈತಿಕ ಪ್ರಜ್ಞೆ ಮತ್ತ ಲೈಂಗಿಕ ಪ್ರಜ್ಞೆಗಳ ಸಂಘರ್ಷಕ್ಕೆ ಒಳಗಾಗುವ ಈಕೆಯ ಮನಸ್ಥಿತಿಯನ್ನು ಲೇಖಕಿ ಬುದ್ಧನ ಪ್ರತಿಮೆ ಮೂಲಕ ಅನಾವರಣ ಮಾಡುತ್ತಾರೆ. ವಯೋ ಸಹಜವಾದ ಕಾಮನೆಗಳನ್ನು ವ್ಯವಸ್ಥೆ ಹತ್ತಿಕ್ಕುವ ರೀತಿಯನ್ನು ರಾಜಲಕ್ಷ್ಮಿಯವರು ಬಿಂಬಿಸಿದ್ದಾರೆ.

ಸಂಗೀತದ ಹಿನ್ನೆಲೆಯಿರುವ 'ಆವೆ ಮರಿಯಾ', ಗಂಡಿನ ಅನುಮಾನ ಪ್ರವೃತ್ತಿ ಇರುವ 'ಸಂಗಮ', ಮಹಿಳೆಯೊಬ್ಬಳ ಮಾನಸಿಕ ತಲ್ಲಣಗಳನ್ನು ಗುರುತಿಸುವ 'ನನಗೊಂದು ಬಿಳಿಗುಲಾಬಿ' ಈ ಯಾವುದೇ ಕಥೆಗಳನ್ನು ತೆಗೆದುಕೊಂಡರು ಹೆಣ್ಣಿನ ಸಂಕಷ್ಟಗಳು, ದ್ವಂದ್ವಗಳು ಸೂಕ್ಷ್ಮ ನೆಲೆಯಲ್ಲಿ ಪ್ರಕಟವಾಗುತ್ತದೆ. ಯಾವುದನ್ನೇ ಆಗಲಿ ಕೂಗಿ ಹೇಳುವ ವಾಚ್ಯನೆಲೆಯ ಬರವಣಿಗೆ ಇವರಲ್ಲಿ ಇಲ್ಲ, ಬದಲಿಗೆ ಮಾನಸಿಕ ನೆಲೆಯಲ್ಲಿ ಘಟಿಸುವ ನರಳಿಕೆಗಳು ಇವರ ಕಥಾ ಸಾಹಿತ್ಯದಲ್ಲಿ ಮೆರೆಯುತ್ತವೆ. ಮಹಿಳೆಯ ಅನನ್ಯತೆಯನ್ನು ಗುರುತಿಸುವ ಕೆಲಸವನ್ನು ರಾಜಲಕ್ಷ್ಮಿಯವರು ಸಮರ್ಥ ವಾಗಿ ಮಾಡುತ್ತಾರೆ. ಈ ಕಾರಣಕ್ಕಾಗಿಯೇ ಇವರನ್ನು ಬಿ.ಎಸ್. ವೆಂಕಟಲಕ್ಷ್ಮಿಯವರು ಗುರುತಿಸುವಂತೆ "ಹೊಸಹಾದಿ ಹಿಡಿದವರು" ಎಂದು ಹೇಳಬಹುದಾಗಿದೆ.

ರಾಜಲಕ್ಷ್ಮಿಯವರು ನವ್ಯ ಕಾಲಘಟ್ಟದ ಆರಂಭದ ದಿನಗಳಲ್ಲಿ ಸಾಹಿತ್ಯವನ್ನು ಪ್ರವೇಶ ಮಾಡಿದರೆ, ವೀಣಾ ಶಾಂತೇಶ್ವರರವರು ನವ್ಯ ಕಾಲಘಟ್ಟದ ಅಬ್ಬರದ ದಿನಗಳಲ್ಲಿ ಸಾಹಿತ್ಯವನ್ನು ಪ್ರವೇಶಿಸಿದರು. ಅನುಪಮಾ ಅವರನ್ನು ಹೊರತು ಪಡಿಸಿದರೆ ಉಳಿದಂತೆ ಬಹುಪಾಲು ಲೇಖಕಿಯರು ಕನ್ನಡ ಸಾಹಿತ್ಯದ ಯಾವುದೇ ಚಳುವಳಿಗಳಲ್ಲಿ ತಮ್ಮನ್ನು ಗುರುತಿಸಿಕೊಳ್ಳದ ಸಂದರ್ಭದಲ್ಲಿ ವೀಣಾ ಶಾಂತೇಶ್ವರರವರು ನವ್ಯ ಕಾಲಘಟ್ಟದಲ್ಲಿ ತಮ್ಮನ್ನು ತಾವು ಗುರುತಿಸಿಕೊಂಡರು.

ವೀಣಾ ಅವರು 'ಮುಳ್ಳುಗಳು' ಕಥಾ ಸಂಕಲನವು ಮೊಟ್ಟ ಮೊದಲ ಬಾರಿಗೆ ಪುರುಷ ನಿರ್ಮಿತ ಮಹಿಳಾ ಮಾದರಿಯನ್ನು ಧಿಕ್ಕರಿಸಿತು. ಈ ಕಥಾ ಸಂಕಲನದಲ್ಲಿರುವ ಬಹುಪಾಲು ಕಥೆಗಳು ಗಂಡು-ಹೆಣ್ಣಿನ ಲೈಂಗಿಕ ಸಂಬಂಧಗಳನ್ನು ಚಿತ್ರಿಸುತ್ತದೆ 'ಕೊನೆಯದಾರಿ' ಕಥೆಯ ನಾಯಕಿ, ಲೀಲಾ ಗಂಡನ ಹಿಂಸೆಗಳಿಗೆ ಬೇಸತ್ತು ಅವನಿಂದ ದೂರಾಗಿ ಕೆಲಸಕ್ಕೆ ಸೇರುತ್ತಾಳೆ. ಗಂಡನಿಂದ ದೂರಾದ ಆಕೆಯ ಬದುಕಿನಲ್ಲಿ ಅನೇಕ ಪುರುಷರು ಪ್ರವೇಶ ಪಡೆಯುತ್ತಾರೆ. ಡಾ. ಗೋವಿಂದ ಮೂರ್ತಿ, ವಿನಯ ಸಾವಕಳಿಕರ, ಆಫೀಸಿನ ಬಾಸ್, ವಿಲಯಮ್ಸ್ ಈ ಎಲ್ಲರೂ ನಾಯಕಿ ಲೀಲಾಳ ಜೀವನದಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಸಂಬಂಧ ಸ್ಥಾಪಿಸುತ್ತಾರೆ. ಇವರೆಲ್ಲಾ ಆಕೆಯನ್ನು ಲೈಂಗಿಕವಾಗಿ ಬಳಸಿಕೊಳ್ಳುತ್ತಾರೆ. ಆದರೆ ಆಕೆ ಬಯಸಿದ ತಾಯ್ತನವನ್ನು ನೀಡಲು ಯಾರೊಬ್ಬರೂ ಮುಂದೆ ಬರುವುದಿಲ್ಲ. ಜೀವನ ಇರುವುದೇ ಸುಖವನ್ನು ಅನುಭವಿಸುವುದಕ್ಕಾಗಿ, ಮದುವೆಯಾಗದ ಹುಡುಗಿ, ನನ್ನಿಂದ ಇಂತಹ ಪಾಪದ ಕೆಲಸವು ಆಗುವುದಿಲ್ಲ, ನಮ್ಮಿಬ್ಬರದು ಆತ್ಮದ ಸಂಬಂಧ ದೇಹದ ವ್ಯಾಮೋಹವು ಕ್ಷಣಿಕವಾದದ್ದು. ಇದಕ್ಕಾಗಿ ಶಾಶ್ವತವಾದದ್ದನ್ನು ಅಪವಿತ್ರಗೊಳಸಬಾರದು ಎಂದು ಗೋವಿಂದಮೂರ್ತಿ ಅವಳ ಬಾಸ್, ವಿನಯ ಸಾವಳಿಕರ ಕ್ರಮವಾಗಿ ಈ ಮಾತುಗಳನ್ನು ಆಡುತ್ತಾರೆ. ಪುರುಷ ಲೈಂಗಿಕ ತೃಪ್ತಿಗಾಗಿ ನಡೆಸುವ ಮಹಿಳೆಯ ಮೇಲಿನ ದೌರ್ಜನ್ಯವನ್ನು ಇದು ಅನಾವರಣ ಮಾಡುತ್ತದೆ. ಒಂದು ಹಂತದಲ್ಲಿ ನಾಯಕಿ ಲೀಲಾಳ ತಾಯ್ತನದ ಬಯಕೆ ಆಕೆಯ ಆಯ್ಕೆಯ ಸ್ವಾತಂತ್ರ್ಯವನ್ನು ಅನಾವರಣ ಮಾಡಿದರೂ, ಮತ್ತೊಂದು ಹಂತದಲ್ಲಿ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯ ಆಯ್ಕೆಯ ಸ್ವಾತಂತ್ರ್ಯಕ್ಕೆ ಸೋಲಾಗುವುದನ್ನು ಅಭಿವ್ಯಕ್ತಿಸುತ್ತದೆ. ಇದರ ಜೊತೆಗೆ ಹೆಣ್ಣಿನ ಜೊತೆಗಿನ ಲೈಂಗಿಕ ಸಂಬಂಧವನ್ನು ನಿರಾಕರಿಸಿದ ಪುರುಷ ಆಕೆಯ ಬಯಕೆಯನ್ನು ನಯವಾಗಿ ತಿರಸ್ಕರಿಸುವ ಮೂಲಕ ಲೈಂಗಿಕ ಶೋಷಣೆಯನ್ನು ಮಾಡುವ ರೀತಿಯನ್ನು ಈ ಕತೆ ನಿರೂಪಿಸುತ್ತದೆ.

ಮಹಿಳೆಯ ಆಯ್ಕೆ ಸ್ವಾತಂತ್ರ್ಯದ ವಿಷಯವಿರುವ ಮತ್ತೊಂದು ಕತೆ 'ಹೀಗೊಂದು ಕಥೆ'ಯಾಗಿದೆ, ಕತೆಯ ನಾಯಕಿ ಮದುವೆ ಎಂಬ ಪರವಾನಗಿ ಇಲ್ಲದಿದ್ದರೂ ಹತ್ತು ವರ್ಷಗಳ ಕಾಲ ತಾನು ಇಷ್ಟ ಪಟ್ಟವನ ಜೊತೆ ಕಳೆದು ಗರ್ಭಿಣಿಯಾಗುತ್ತಾಳೆ. ಮದುವೆಯಿಲ್ಲದೆ ಮಗುವಿಗೆ ತಾನು ತಂದೆಯಾಗುವುದು ನಾಯಕಿಯ ಗೆಳಯನಿಗೆ ಇಷ್ಟವಿಲ್ಲದ ವಿಷಯವಾಗಿದೆ. ಅದನ್ನು ಎದುರಿಸುವ ಎದೆಗಾರಿಕೆ ಆತನಲ್ಲಿ ಇಲ್ಲ. ಅದಕ್ಕಾಗಿ ಆತ ತಮ್ಮಿಬ್ಬರ ಸಂಬಂಧಕ್ಕೆ ಹೆಸರು ಕೊಡುವ ಪ್ರಯತ್ನ ಮಾಡುತ್ತಾನೆ. ಆದರೆ ಇಲ್ಲಿನ ನಾಯಕಿ ತನ್ನ ತಾಯ್ತನ ತನ್ನ ಜನ್ಮ ಸಿದ್ದ ಹಕ್ಕು, ತನಗೆ ಯಾರ ಅವಶ್ಯಕತೆ ಇಲ್ಲ ಎಂದು ಆತನನ್ನು ಧಿಕ್ಕರಿಸುತ್ತಾಳೆ. ತಾಯ್ತನವನ್ನು ಉಳಿಸಿಕೊಳ್ಳುವುದಕ್ಕಾಗಿ ಇಷ್ಟ ಪಟ್ಟವನನ್ನು ನಿರಾಕರಿಸುವ ಆಕೆಯ ದಿಟ್ಟತನ ಮೆಚ್ಚುಗೆ ಅರ್ಹವಾಗಿದೆ. ಬದುಕಿನ ಸಂಗಾತಿಯ ಆಯ್ಕೆ ಮತ್ತು ತಾಯ್ತನದ ಆಯ್ಕೆ ಈ ಎರಡೂ ವಿಷಯಗಳು ಇಲ್ಲಿ ಚರ್ಚಿತವಾಗಿದೆ.

ವೀಣಾಶಾಂತೇಶ್ವರರವರ ಕಥನ ಸಾಹಿತ್ಯದಲ್ಲಿನ ಮಹಿಳೆಯರು ವಿದ್ಯಾವಂತರು, ಉದ್ಯೋಗಸ್ಥರು, ಮುಂಬಯಿಯಂತಹ ಮಹಾನಗರದಲ್ಲಿ ಬಾಳುತ್ತಿರುವವರು. ಹೀಗಾಗಿ ಇವರಿಗೆ ತಮ್ಮ ಮೇಲೆ ಆಗುತ್ತಿರುವ ದೌರ್ಜನ್ಯಗಳ ಸ್ಪಷ್ಟವಾದ ಅರಿವಿದೆ. ಜೊತೆಗೆ ಸಂವಿಧಾನದಲ್ಲಿ ಮಹಿಳೆಗೆ ನೀಡಿರುವ ಹಕ್ಕುಗಳ ಬಗ್ಗೆ, ಕಾನೂನಿನ ಬಗ್ಗೆ ಸರಿಯಾದ ತಿಳುವಳಿಕೆ ಇದೆ. ಇದಲ್ಲದೆ ಇವರಿಗೆ ಆರ್ಥಿಕ ಸ್ವಾತಂತ್ರ್ಯವಿದೆ. ಆರ್ಥಿಕವಾಗಿ ತಾವು ಯಾರೊಬ್ಬರ ಮೇಲೂ ಅವಲಂಬಿತರಾಗ ಬೇಕಾದ ಪರಿಸ್ಥಿತಿ ಅವರಿಗಿಲ್ಲ ಈ ಮೇಲಿನ ಎಲ್ಲಾ ಅಂಶಗಳು ಮಹಿಳೆಯ ಆಯ್ಕೆಯಲ್ಲಿ ನಿರ್ಧಾರದಲ್ಲಿ ಬಹುಮುಖ್ಯ ಪಾತ್ರವನ್ನು ವಹಿಸಿದೆ.

'ಕವಲು' ಕತೆಯ ಮಿನಿ ಒಬ್ಬ ವಿವಾಹಿತ ಪುರುಷನ ಜೊತೆ ಸಂಬಂಧ ಇಟ್ಟುಕೊಂಡು ಸುಖವನ್ನು ಪಡೆದಂತೆ ನೋವನ್ನು ಅನುಭವಿಸಿದವಳು. ಈ ಕಾರಣಕ್ಕಾಗಿಯೇ ಈ ಸಂಬಂಧವನ್ನು ಬಿಟ್ಟು ಹೊರ ದೇಶಕ್ಕೆ ಹೋಗುವ ನಿರ್ಧಾರ ಮಾಡಿದ್ದಾಳೆ. ಆದರೆ ಈ ಸಂದರ್ಭದಲ್ಲಿಯೇ ಆ ವಿವಾಹಿತ ಪುರುಷನ ಹೆಂಡತಿ ಸತ್ತು ಹೋಗುವುದರಿಂದ ತನ್ನನ್ನು ಮಿನಿಗೆ ಪೂರ್ಣವಾಗಿ ಒಪ್ಪಿಸಿಕೊಳ್ಳುವ ನಿರ್ಧಾರ ಮಾಡುತ್ತಾನೆ. ಆದರೆ ಈಗಾಗಲೇ ಈ ಸಂಬಂಧದಿಂದ ಬೇಸತ್ತು ಹೋಗಿರುವ ಮಿನಿ ತಾನು ಹೊರ ದೇಶಕ್ಕೆ ಹೋಗುವುದನ್ನು ಈಗ ಕ್ಯಾನ್ಸಲ್ ಮಾಡಲು ಸಾಧ್ಯವಿಲ್ಲ, ನಮ್ಮದಾರಿ ಕವಲೊಡೆದಿದೆ ಎಂದು ಹೇಳುತ್ತಾ ತನ್ನ ಗಟ್ಟಿ ನಿರ್ಧಾರವನ್ನು ಆತನಿಗೆ ತಿಳಿಸುತ್ತಾಳೆ. ಕೌಟುಂಬಿಕ ವ್ಯವಸ್ಥೆಯಲ್ಲಿ ಇರುವ ಮಹಿಳೆಯನ್ನು ಉಳಿಸಿಕೊಂಡು,

ಹೊರಗಡೆ ಬೇರೊಂದು ಮಹಿಳೆಯನ್ನು ಲೈಂಗಿಕವಾಗಿ ಬಳಸಿಕೊಳ್ಳುವುದು ಆ ವಿವಾಹಿತ ಪುರುಷನ ಹುನ್ನಾರದ ತಂತ್ರವಾಗಿದೆ. ಈ ಎರಡು ಸ್ಥರಗಳಲ್ಲಿ ಆತ ಇಬ್ಬರು ಮಹಿಳೆಯರನ್ನು ಏಕಕಾಲಕ್ಕೆ ಶೋಷಣೆಗೆ ಒಳಪಡಿಸುತ್ತಾನೆ. ಅವನ ಈ ವಂಚನೆಗೆ ಪ್ರತಿಯಾಗಿ ಮಿನಿ ಆತನನ್ನೇ ತಿರಸ್ಕರಿಸುವ ಮೂಲಕ ಆಯ್ಕೆ ಸ್ವಾತಂತ್ರ್ಯವನ್ನು ಅಭಿವ್ಯಕ್ತಿಸಿದ್ದಾಳೆ.

ವೀಣಾಶಾಂತೇಶ್ವರರವರ 'ಗಂಡಸರು' ಕಾದಂಬರಿ ಪುರುಷರ ಪೂರ್ವಾಗ್ರಹ ಪೀಡಿತ ಮನಸ್ಥಿತಿಯನ್ನು ಹೇಳುತ್ತದೆ. ಶೀರ್ಷಿಕೆಯೇ ಪುರುಷರ ನೇತ್ಯಾತ್ಮಕ ಗುಣಗಳನ್ನು ಸಾರಿ ಹೇಳುವಂತಿದೆ. ಪ್ರೇಮದ ವಿಷಯದಲ್ಲಿ ಪುರುಷರು ಹಾಕಿಕೊಳ್ಳುವ ಮುಖವಾಡಗಳನ್ನು ಸಣ್ಣತನಗಳನ್ನು ಇದು ಬಿಚ್ಚಿಡುತ್ತದೆ. ಈ ಕಾದಂಬರಿಯ ನಾಯಕಿ ಶಾಂತಿ ಇಂತಹ ಪುರುಷರ ಒಡನಾಟದಲ್ಲಿಯೇ ತನ್ನೊಂದಿಗೆ ವ್ಯವಹರಿಸುವ ಪುರುಷರ ಜೊತೆ ದೈಹಿಕ ಸಂಪರ್ಕದಲ್ಲಿದ್ದರೂ ತನ್ನ ವ್ಯಕ್ತಿತ್ವವನ್ನು ಉಳಿಸಿಕೊಳ್ಳುವ ಹೋರಾಟ ಮಾಡುತ್ತಾಳೆ.

ಲೀಲಾ, ಮಿನಿ, ಶಾಂತಿ ಈ ಮೊದಲಾದವರೆಲ್ಲಾ ಒಂದಲ್ಲಾ ಒಂದು ಕಾರಣಕ್ಕಾಗಿ ವ್ಯವಸ್ಥೆಯಲ್ಲಿ ಬಲಿಯಾಗಬೇಕಾದವರು. ಪುರುಷರ ನಯವಂಚನೆಯಿಂದಾಗಿ ತಮ್ಮ ಅಸ್ತಿತ್ವವನ್ನು ಇಲ್ಲವಾಗಿಸಿಕೊಂಡು ಮೂಲೆಗುಂಪಾಗಬೇಕಾದವರು. ಆದರೆ ಅವರಿಗಿದ್ದ ಜಾಗೃತಿಯಿಂದಾಗಿ ಅವರ ಆಯ್ಕೆ, ನಿರ್ಧಾರಗಳಲ್ಲಿ ಸತ್ವವು ತುಂಬಿ ಬಂದು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಸಾಧ್ಯವಾಗಿದೆ. ಪುರುಷ ತನ್ನ ಬದುಕಿನಲ್ಲಿ ಅಸ್ತಿತ್ವನ್ನು ಉಳಿಸಿಕೊಳ್ಳಲು ಪ್ರಯತ್ನ ಪಡುವಂತೆ ಇವರೆಲ್ಲಾ ಇಲ್ಲಿ ತಮ್ಮ ಅಸ್ತಿತ್ವದ ಸ್ಥಾಪನೆಗಾಗಿ ಪರಿಶ್ರಮ ಪಡುತ್ತಾರೆ. ವಿವಾಹೇತರ ಸಂಬಂಧ, ತನಗೆ ಸೀಮಿತವಾದ ವ್ಯಾಪ್ತಿಯಲ್ಲಿ ಪುರುಷ ಮಹಿಳೆಯನ್ನು ನಿರಾಕರಿಸುವುದು, ತಮ್ಮ ಹಕ್ಕನ್ನು ಸ್ಥಾಪಿಸುವುದು ಈ ಮೊದಲಾದವುಗಳೆಲ್ಲಾ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಪುರುಷ ಮಾಡಬಹುದಾದ ಸಾಮಾನ್ಯ ಸಂಗತಿಯಾಗಿವೆ. ಆದರೆ ವೀಣಾ ಶಾಂತೇಶ್ವರರವರ ಕಥನ ಸಾಹಿತ್ಯದಲ್ಲಿನ ಮಹಿಳೆ ಆ ರೀತಿ ನಡೆದು ಕೊಳ್ಳುತ್ತಾಳೆ. ಒಟ್ಟಾರೆ ಪುರುಷ ಪ್ರಧಾನ ಸಮಾಜ ಆಕೆಯ ಮೇಲೆ ಹೇರಿದ್ದ ನಿರ್ಬಂಧಗಳನ್ನು ಆಕೆ ಕಳಚಿಹಾಕುವುದು ಮತ್ತು ಆ ಮೂಲಕ ಮಹಿಳೆ ತನ್ನದೇ ಆದ ಪ್ರತ್ಯೇಕ ಅಸ್ತಿತ್ವ ರೂಪಿಸುವುದು ವೀಣಾ ಶಾಂತೇಶ್ವರರವರ ಕಥನ ಸಾಹಿತ್ಯದ ಪ್ರಮುಖ ಆಶಯವಾಗಿದೆ.

ಅರವತ್ತರ ದಶಕದಲ್ಲಿ ತಮ್ಮ ಬರವಣಿಗೆಯನ್ನು ಆರಂಭಿಸಿದ ತೇಜಸ್ವಿಯವರು, ನವ್ಯ ಲೇಖಕರಾಗಿ ಕಾಣಿಸಿಕೊಳ್ಳುವುದು 'ಸ್ವರೂಪ' ಮತ್ತು 'ನಿಗೂಢ ಮನುಷ್ಯರು'

ಎಂಬ ಕಿರು ಕಾದಂಬರಿಗಳ ಮೂಲಕವಾಗಿದೆ. ನವ್ಯ ಕಾದಂಬರಿಗಳಾದ 'ಸ್ವರೂಪ' ಮತ್ತು 'ನಿಗೂಢ ಮನುಷ್ಯರು'ಗಳಲ್ಲಿ ಉಳಿದ ನವ್ಯ ಕಾದಂಬರಿಗಳ ಲಕ್ಷಣಗಳಿವೆ. ಬೇರೆಯ ಲಕ್ಷಣಗಳ ಜೊತೆಜೊತೆಯಲ್ಲಿ 'ಮಹಿಳೆ' ಪರಿಕಲ್ಪನೆಯೂ ಅದೇ ರೀತಿ ಇಲ್ಲೂ ಬೆಳೆದು ಬಂದಿದೆ. ಮಹಿಳೆಯರು ಹೆಚ್ಚಾಗಿ ಕಾಣದ ಈ ಕಾದಂಬರಿಗಳಲ್ಲಿ ತೇಜಸ್ವಿಯವರು ಬೇರೆ ನವ್ಯ ಲೇಖಕರಂತೆ ಹೆಣ್ಣನ್ನು ಲೈಂಗಿಕ ಪ್ರಜ್ಞೆಯ ನೆಲೆಯಲ್ಲೇ ನೋಡುತ್ತಾರೆ. ಹೊಲೆಯ ಹೆಂಗಸರು ಕೇವಲ ಎಲೆ, ಅಡಿಕೆ ಆಸೆಗೆ ಅವರು ಮಲಗುವುದಿಲ್ಲ. ಅಷ್ಟು ಜಾಸ್ತಿ ಕೊಟ್ಟರೆ ಬರುತ್ತಾರೆ ಎನ್ನುವ ಶ್ರೀನಿವಾಸನ ಅಭಿಪ್ರಾಯ, ಹೇಮಂತ ಒಬ್ಬ ಸೂಳೆಯನ್ನು ನಿಲ್ಲಿಸಿಕೊಂಡು ಸಂಭೋಗ ನಡೆಸಿದ್ದು, ಶ್ರೀನಿವಾಸನ ಉಪಾಧ್ಯಾಯಿನಿ ಪ್ರೇಯಸಿ ದೂರವಾದಾಗ ಅವಳ ಕನ್ಯತ್ವವನ್ನು ಕೆಡಿಸದೆ ಉಳಿಸಿದ್ದು ತಪ್ಪಾಯಿತು ಎಂದು ಅಂದು ಕೊಳ್ಳುವ ಕಡೆಯೆಲ್ಲಾ ಮಹಿಳೆ ಬಗ್ಗೆ ಪುರುಷರು ತಾಳಿರುವ ಭಾವನೆಗಳನ್ನೇ ತೇಜಸ್ವಿಯವರು ತಂದಿದ್ದಾರೆ. ಇದಕ್ಕಿಂತ ಭಿನ್ನವಾಗಿ ತೇಜಸ್ವಿಯವರ ಈ ಕಾದಂಬರಿಗಳಲ್ಲಿ ಮಹಿಳೆ ಕಾಣಸಿಗುವುದೇ ಇಲ್ಲ.

ಮಹಿಳೆಯ ಅಸ್ತಿತ್ವ, ಪ್ರತಿಭಟನೆ, ಆಯ್ಕೆ ಸ್ವಾತಂತ್ರ್ಯ ಈ ಮೊದಲಾದವುಗಳೆಲ್ಲಾ ತೇಜಸ್ವಿಯವರು ನವ್ಯದಿಂದ ಹೊರ ಬಂದ ಮೇಲೆ ಬರೆದ 'ಕಿರಗೂರಿನ ಗಯ್ಯಾಳಿಗಳು' ಎಂಬ ನೀಳ್ಗತೆಯಲ್ಲಿ ಕಾಣಸಿಗುತ್ತದೆ. ಮಹಿಳೆಯ ಅದ್ಭುತವಾದ ಶಕ್ತಿಯನ್ನು ನಾವು ಇಲ್ಲಿ ಕಾಣಬಹುದಾಗಿದೆ. "....ಒಬ್ಬೊಬ್ಬ್ರು ಹತ್ತು ಹತ್ತು ಹಡಿಯೊ ಹಂಗೆ ಮಾಡಬೇಕು. ಪುರುಸೊತ್ತೇ ಕೊಡಬಾರ್ದು ಹಂಗಿದ್ರೆ ನೋಡಪ್ಪಾ ಈ ಹಾಳ್ಮುಂಡೇರನ್ನ ಹದ್‌ಬಸ್ತಿಗೆ ತರಬೌದು" (ಪೂರ್ಣಚಂದ್ರ ತೇಜಸ್ವಿ, ಕಿರಗೂರಿನ ಗಯ್ಯಾಳಿಗಳು, ೨೦೦೬, ಪುಟ ೧೫) ಎನ್ನುವ ಸಿದ್ಧನ ಮಾತು ಹೆರುವ ಯಂತ್ರವನ್ನಾಗಿಸಿ ಮಹಿಳೆಯರನ್ನು ಹದ್ದು ಬಸ್ತಿನಲ್ಲಿಡುವ ಪುರುಷ ಸಮಾಜದ ಹುನ್ನಾರವನ್ನು ತೇಜಸ್ವಿ ಅಭಿವ್ಯಕ್ತಿಸಿದ್ದಾರೆ. ಇಂತಹ ಪುರುಷರ ನೀಚ ತಂತ್ರಗಳು, ಆಚಾರ, ಮದುವೆ ಈ ಮೊದಲಾದವುಗಳ ಬಗ್ಗೆ ಕಿರಗೂರಿನ ಮಹಿಳೆಯರು ರೊಚ್ಚಿಗೇಳುತ್ತಾರೆ. ಹೆಂಗಸರಿಗೆ ಬುದ್ಧಿ ಕಲಿಸುವ ಉದ್ದೇಶದಿಂದ ಸೇರಿಸಿದ ಪಂಚಾಯ್ತಿಯನ್ನು ತಮ್ಮ ರೊಚ್ಚಿನಿಂದ ರಣರಂಗವನ್ನಾಗಿಸುವ ಕಿರಗೂರಿನ ಮಹಿಳೆಯರು ಊರ ಮುಖಂಡರಿಗೆ, ತಮ್ಮ ಗಂಡಂದಿರಿಗೆ ಬಯನೆ ಮರದ ದಬ್ಬೆಗಳ ರುಚಿ ತೋರಿಸುತ್ತಾರೆ. ವ್ಯರ್ಥವಾಗಿ ಬದುಕನ್ನು ಸಾಗಿಸುತ್ತಿರುವ, ತಮ್ಮ ಗಂಡರ ಬಗ್ಗೆ ಅಸಹ್ಯ ಪಟ್ಟುಕೊಳ್ಳುವ ಕಿರಗೂರಿನ ಮಹಿಳೆಯರು ಅವರನ್ನು ತೊರೆದು ಬೇರೆ ಪುರುಷನ ಜೊತೆ ಓಡಿ ಹೋಗಬೇಕೆಂದು ಭಾವಿಸುತ್ತಾರೆ. ಅವರ ಈ ಆಲೋಚನ ಲಹರಿಯು ಮಹಿಳೆಯ ಪ್ರತಿಭಟನೆಯನ್ನು ಮತ್ತು ಆಯ್ಕೆಯ ಸ್ವಾತಂತ್ರ್ಯವನ್ನು ಅನಾವರಣಗೊಳಿಸುತ್ತದೆ. ಕಿರಗೂರಿನ ಮಹಿಳೆಯರ

ಈ ಅರಿವಿನ ಸ್ಫೋಟವು ತೇಜಸ್ವಿಯವರು ನವ್ಯ ಕಾಲಘಟ್ಟದಿಂದ ಹೊರ ಬಂದ ಮೇಲೆ ಆಗಿರುವುದು ಎಂದು ನಾವು ಇಲ್ಲಿ ಗಮನಿಸಬೇಕಾಗುತ್ತದೆ.

ನಾಗರಿಕತೆ ಬೆಳೆದಂತೆ ನಗರೀಕರಣಗಳು ಆದಂತೆ ಮನುಷ್ಯ-ಮನುಷ್ಯರ ನಡುವಿನ ಸಂಬಂಧಗಳು ಸೂಕ್ಷ್ಮವಾಗುವುದನ್ನು, ಸಂಬಂಧಗಳು ಬೆಲೆ ಕಳೆದು ಕೊಳ್ಳುವುದನ್ನು ಟಿ.ಜಿ.ರಾಘವರವರ 'ಮನೆ' ಪರಿಣಾಮಕಾರಿಯಾಗಿ ಅಭಿವ್ಯಕ್ತಿಸುತ್ತದೆ. ನಗರದ ಸುಖದ ಜೀವನವನ್ನು ಅರಸಿ ಬರುವ ರಾಜಣ್ಣ ಮತ್ತು ಗೀತಾ ದಂಪತಿಗಳಿಗೆ 'ಮನೆ' ವಾಸ್ತವದ ಅನುಭವವನ್ನು ತೋರಿಸಿ ಕೊಡುತ್ತದೆ. ವರ್ಕ್‌ಶಾಪ್‌ನ ಗದ್ದಲ ಇವರ ದಾಂಪತ್ಯ ಜೀವನವನ್ನು ಹಾಳು ಮಾಡುತ್ತದೆ. ಗಂಡನ ಅಸಹನೆ, ಅನುಮಾನ, ಅಸೂಯೆ 'ಮನೆ'ಯ ಸಮಸ್ಯೆಯಿಂದ ಹೆಚ್ಚಾಗುತ್ತದೆ. ಮೇಲೆ ಹೇಳಿದ ಈ ಎಲ್ಲಾ ಅಂಶಗಳು ಪುರುಷರಲ್ಲಿ ಇದ್ದೇ ಇರುತ್ತವೆ. ಆದರೆ ನಗರೀಕರಣ ಈಗಾಗಲೇ ಸುಪ್ತವಾಗಿದ್ದ ಈ ಅಂಶಗಳು ರಾಜಣ್ಣನಲ್ಲಿ ಜಾಗೃತವಾಗುವಂತೆ ಮಾಡುತ್ತದೆ. ರಾಜಣ್ಣನ ಈ ಜಾಗೃತ ಭಾವನೆಗಳನ್ನು ಎಲ್ಲಾ ಮಹಿಳೆಯರು ಒಪ್ಪಿ ಬಾಳುವಂತೆ ಗೀತಾ ಬದುಕು ನೂಕುತ್ತಾಳೆ. ವಿದ್ಯಾವಂತನಾದರೂ ರಾಜಣ್ಣನ ನಡವಳಿಕೆಗಳು ಇತರ ಪುರುಷರಂತೆ ಇದೆ. ರಾಜಣ್ಣನ ವರ್ತನೆಗೆ 'ಮನೆ'ಯ ಸಮಸ್ಯೆ ಕಾರಣವೆಂದು ತಿಳಿದುಕೊಂಡರೆ ಅದು ನಮ್ಮ ತಪ್ಪಾದ ಗ್ರಹಿಕೆಯಾಗುತ್ತದೆ.

ಗಿರಿಯವರ 'ಗತಿಸ್ಥಿತಿ' ಕಾದಂಬರಿಯು 'ಆಕೆ' ಮತ್ತು 'ಆತ' ಕೆಲಸಕ್ಕಾಗಿ ಬೇರೆ ಊರಿಗೆ ಬಂದಾಗ ಅಧಿಕಾರ ಶಾಹಿಗಳು ಅವರನ್ನು ನಡೆಸಿಕೊಳ್ಳುವ ರೀತಿಯಿಂದ ಅವರ ಸಂಬಂಧ ಸೂಕ್ಷ್ಮವಾಗುವುದನ್ನು ಅನಾವರಣ ಮಾಡುತ್ತದೆ. ಉನ್ನತ ವ್ಯಾಸಂಗ ಮಾಡಿ ಉದ್ಯೋಗಕ್ಕೆ ಸೇರಿದ ಮೇಲೆ 'ಆಕೆ'ಗೆ ಅಧಿಕಾರ ಶಾಹಿಗಳು ನೀಡುವ ತೊಂದರೆಗಳು ಉದ್ಯೋಗಸ್ಥ ಮಹಿಳೆಯ ಸಮಸ್ಯೆಯನ್ನು ತೆರೆದಿಡುತ್ತದೆ. ಯಾವುದೇ ತೊಂದರೆ ಬಂದರೂ 'ಆಕೆ' 'ಆತ'ನಿಗಿಂತ ಹೆಚ್ಚು ಸಮರ್ಥವಾಗಿ ಎದುರಿಸುತ್ತಾಳೆ. ಇದು ಮಹಿಳೆಗಿರುವ ಜಾಣ್ಮೆಯನ್ನು ತೋರಿಸುತ್ತದೆ. ದೈಹಿಕ ಮತ್ತು ಮಾನಸಿಕ ಒತ್ತಡಗಳನ್ನು ನಿಭಾಯಿಸುವಲ್ಲಿ 'ಆತ'ನಿಗಿಂತ 'ಆಕೆ' ಹೆಚ್ಚು ಸಮರ್ಥಳಾಗಿದ್ದಾಳೆ. 'ಆತ'ನಂತೆ 'ಆಕೆ' ಪಲಾಯನವಾದಿಯಲ್ಲ. ಪರಿಸ್ಥಿತಿ ಯನ್ನು ಎದುರಿಸುವ ಕಲೆಗಾರಿಕೆ 'ಆತ'ನಿಗಿಂತ 'ಆಕೆ'ಗೆ ಇದೆ. ಅಧಿಕಾರಶಾಹಿಗಳು ನೀಡುವ ತೊಂದರೆಯನ್ನು ಪ್ರತಿಭಟಿಸುವ ರೀತಿ, ಸಮಸ್ಯೆಗೆ ಮುಖಾಮುಖಿಯಾಗುವ ರೀತಿ ಈ ಮೊದಲಾದ ಕಡೆಗಳಲ್ಲಿ 'ಆಕೆ'ಯ ನಡೆ ಮೆಚ್ಚುಗೆಯನ್ನು ಪಡೆಯುತ್ತದೆ. ಸ್ಥಿತಿಯನ್ನು ಒಪ್ಪಿ

ನಡೆಯುವ 'ಆಕೆ' 'ಆತ'ನಿಗಿಂತ ಹೆಚ್ಚು ಹತ್ತಿರವಾಗುತ್ತಾಳೆ. 'ಆಕೆ'ಯ ನಡೆ ಮೂಲಕ ಗಿರಿಯವರು ಮಹಿಳೆಗೆ ಇರುವ ಸ್ಥೈರ್ಯವನ್ನು ಅಭಿವ್ಯಕ್ತಿಸಿದ್ದಾರೆ.

ಬದುಕಿನಲ್ಲಿ ಸಾಫಲ್ಯ ಹೊಂದಬೇಕೆಂದು ಆಸೆ ಇಟ್ಟು ಕೊಂಡಿರುವ ಕುಸುಮಾಕರವರ 'ನಾಲ್ಕನೆಯ ಆಯಾಮ'ದ ನಾಯಕನಿಗೆ ಅವನದೇ ಆದ ಸಮಸ್ಯೆ ಇರುವುದರಿಂದ ಗುರಿ ಸಾಧಿಸಲು ಕಷ್ಟವಾಗುತ್ತದೆ. ನಾಯಕ ತನ್ನ ತಾಯಿಯ ನಿರೀಕ್ಷೆ, ತಾಯಿಯ ಗೆಳತಿಯ ಗೆಳೆತನ, ನೃತ್ಯಗಾತಿಯ ಮುಗ್ಧತೆ ಇವುಗಳನ್ನು ನಾಯಕ ಒಂದಲ್ಲಾ ಒಂದು ಕಾರಣಕ್ಕೆ ಬಳಸಿಕೊಳ್ಳುತ್ತಾನೆ. ನಾಯಕನಿಂದ ಇವರು ಶೋಷಣೆಗೆ ಒಳಗಾದ ರೀತಿಯನ್ನು ಕುಸುಮಾಕರರು ಅಭಿವ್ಯಕ್ತಿಸಿದ್ದಾರೆ. ಮಗನ ಓದಿಗೆ ಮೊದಲ ಬಾರಿಗೆ ಗಂಡನ ವಿರುದ್ಧ ಮಾತನಾಡಿ ಎಚ್ಚರಿಸಿದ ನಾಯಕನ ತಾಯಿಯ ಪ್ರತಿಭಟನೆಯೊಂದನ್ನು ಬಿಟ್ಟರೆ ಉಳಿದಂತೆ ಮಹಿಳೆಯ ಮೇಲಿನ ಶೋಷಣೆ ಅಂಶಗಳು 'ನಾಲ್ಕನೆಯ ಆಯಾಮ'ದಲ್ಲಿ ಸ್ಥಾನ ಪಡೆದು ಕೊಂಡಿವೆ.

'ಮನೆ', 'ಗತಿಸ್ಥಿತಿ', 'ನಾಲ್ಕನೆಯ ಆಯಾಮ' ಈ ಕೃತಿಗಳಲ್ಲಿ ಬರುವ ನಾಯಕರು ನವ್ಯದ ಇತರ ಕಥನ ಸಾಹಿತ್ಯದಲ್ಲಿ ಬರುವ ನಾಯಕರಂತೆ ಮಾನಸಿಕ ದುರ್ಬಲತೆಯನ್ನು ಹೊಂದಿದ್ದಾರೆ. ಬದುಕಿನ ಎದುರಾಗುವ ಸಂಘರ್ಷಗಳಿಗೆ ಮುಖಾಮುಖಿಯಾಗುವ ಸಾಮರ್ಥ್ಯವಿಲ್ಲದ ಇವರು, ಬದುಕಿನಲ್ಲಿ ಸಾಫಲ್ಯವನ್ನು ಹೊಂದಲು ಅಸಮರ್ಥರಾಗಿದ್ದಾರೆ. ಬದುಕಿನಿಂದ ಉಂಟಾಗುವ ದೈಹಿಕ ಮತ್ತು ಮಾನಸಿಕ ಒತ್ತಡವನ್ನು ಸಹಿಸಿಕೊಳ್ಳುವಷ್ಟು ಸೈರಣೆ ಇವರಿಗಿಲ್ಲ. ಆದ್ದರಿಂದಲೇ ಇವರು ಪಲಾಯನವಾದಿಗಳಂತೆ ವರ್ತಿಸುತ್ತಾರೆ. 'ಮನೆ', 'ಗತಿಸ್ಥಿತಿ' ಕಾದಂಬರಿಗಳು ನಾಯಕ ಮತ್ತು ನಾಯಕಿಗೆ ಒತ್ತಡ ತರುವ ಸನ್ನಿವೇಶಗಳನ್ನು ತರುತ್ತವೆ. ಈ ಒತ್ತಡಗಳಿಗೆ ಮುಖಾಮುಖಿಯಾಗುವ ನಾಯಕರು ಒತ್ತಡವನ್ನು ನಿರ್ವಹಿಸಲು ಅಸಮರ್ಥರಂತೆ ವರ್ತಿಸುತ್ತಾರೆ. ಆದರೆ ಅಲ್ಲಿನ ನಾಯಕಿಯರು ಈ ಒತ್ತಡವನ್ನು ಯಶಸ್ವಿಯಾಗಿ ನಿರ್ವಹಿಸುತ್ತಾರೆ. ರಾಜಣ್ಣ ಮತ್ತು 'ಆತ' ಸನ್ನಿವೇಶವನ್ನು ಎದುರಿಸಲು ಬಾರದೆ ಗೀತ ಮತ್ತು 'ಆಕೆ'ಯ ಜೊತೆಯಲ್ಲಿ ಸಂಘರ್ಷಕ್ಕೆ ಇಳಿಯುತ್ತಾರೆ. ಈ ಒತ್ತಡದ ನಿರ್ವಹಣೆ ವಿಷಯದಲ್ಲಿ ಲೇಖಕರು ಮಹಿಳೆಯ ಮನೋಸಾಮರ್ಥ್ಯದ ಔನ್ನತ್ಯವನ್ನು ಗುರುತಿಸಿದ್ದಾರೆ.

ಉದ್ಯೋಗಸ್ಥ ಮಹಿಳೆಯು ತನ್ನ ಅಧಿಕಾರಶಾಹಿಗಳಿಂದ ಪಡುವ ತೊಂದರೆ, ಆ ತೊಂದರೆ ವಿರುದ್ಧ 'ಆಕೆ' ತೋರಿಸುವ ಪ್ರತಿಭಟನೆ, 'ಮನೆ'ಯ ಸಮಸ್ಯೆಯನ್ನು ಗಂಡನಿಗಿಂತ ಹೆಚ್ಚಾಗಿ ಬಿಡಿಸುವ ಗೀತಾಳ ಜಾಣ್ಮೆ ಮತ್ತು ಸೈರಣೆ, ಮಗನ ಓದಿಗಾಗಿ

ಗಂಡನ ವಿರುದ್ಧ ಮಾತನಾಡುವ ಸಂಪ್ರದಾಯಸ್ಥ ಮನೆತನದ ನಾಯಕನ ತಾಯಿ, ಕಿರಗೂರಿನ ಸಮಸ್ತ ಸ್ತ್ರೀ ಸಮೂಹದ ಅರಿವಿನ ಶಕ್ತಿ ಈ ಕಡೆಗಳಲ್ಲೆಲ್ಲಾ ಲೇಖಕರು ಮಹಿಳೆಯ ಸಾಮರ್ಥ್ಯವನ್ನು ಅನಾವರಣ ಮಾಡಿದ್ದಾರೆ. ಆದರೆ ಲೈಂಗಿಕತೆಯ ವಿಷಯದ ಸಂದರ್ಭಗಳಲ್ಲಿ ಲೇಖಕರು ಇತರ ನವ್ಯ ಲೇಖಕರ ಮನಸ್ಥಿತಿಯನ್ನೇ ಹೊಂದಿದ್ದಾರೆ. ಈ ಒಂದು ವಿಷಯವನ್ನು ಹೊರತು ಪಡಿಸಿದರೆ ತೇಜಸ್ವಿ, ಗಿರಿ, ಟಿ.ಜಿ.ರಾಘವ, ಕುಸುಮಾಕರ ದೇವರಗೆಣ್ಣೂರು, ರಾಜಲಕ್ಷ್ಮಿ ಎನ್.ರಾವ್, ವೀಣಾಶಾಂತೇಶ್ವರರವರು ತಮ್ಮ ಕಥನ ಸಾಹಿತ್ಯದಲ್ಲಿ ಮಹಿಳೆಯ ಸಾಮರ್ಥ್ಯವನ್ನು ಅನಾವರಣ ಮಾಡಿದ್ದಾರೆ. ವಿವಿಧ ಸಂದರ್ಭಗಳಲ್ಲಿ ಮಹಿಳೆ, ಪುರುಷನಿಗಿಂತ ಹೆಚ್ಚು ಸಮರ್ಥವಾಗಿ ಪರಿಸ್ಥಿತಿಯನ್ನು ನಿಭಾಯಿಸುವ ರೀತಿಯನ್ನು ಈ ನವ್ಯ ಲೇಖಕರು ಮತ್ತು ಲೇಖಕಿಯರು ತಮ್ಮ ಕಥನ ಸಾಹಿತ್ಯದಲ್ಲಿ ಅಭಿವ್ಯಕ್ತಿಸಿರುವುದನ್ನು ಇಲ್ಲಿ ಕಾಣಬಹುದಾಗಿದೆ.

# ಅಧ್ಯಾಯ - ೬

# ನವ್ಯ ಕಥನ ಸಾಹಿತ್ಯ ತೌಲನಿಕ ಅಧ್ಯಯನ

Comparative Literature ಎಂಬ ಇಂಗ್ಲಿಷ್ ಪದದ ಸಂವಾದಿಯಾಗಿ ಕನ್ನಡದಲ್ಲಿ ತೌಲನಿಕ ಸಾಹಿತ್ಯ ಎಂಬುದು ಬಳಕೆಯಾಗುತ್ತಿದೆ. ಫ್ರಾನ್ಸ್ ದೇಶದಲ್ಲಿ ಮೊಟ್ಟ ಮೊದಲು ಕಾಣಿಸಿಕೊಂಡ ಈ ಅಧ್ಯಯನ ಇಂದು ಜರ್ಮನಿ, ಅಮೇರಿಕ, ಇಂಗ್ಲೆಂಡ್, ಇಟಲಿ, ಡೆನ್ಮಾರ್ಕ್, ಬೆಲ್ಜಿಯಂ, ರಷ್ಯಾ, ಜಪಾನ್, ಭಾರತ ಮುಂತಾದ ದೇಶಗಳಲ್ಲಿ ಒಂದು ಶಿಸ್ತಿನ ಅಧ್ಯಯನವಾಗಿ ವ್ಯಾಪಕವಾಗಿ ರೂಪುಗೊಳ್ಳುತ್ತಿದೆ. ತೌಲನಿಕ ಅಧ್ಯಯನ ವ್ಯಾಪಕವಾದ ವಿಧಾನಗಳನ್ನು ಒಳಗೊಂಡಿದೆ. ವಸ್ತು ವಿಧಾನ, ಪಾತ್ರವಿಧಾನ, ವರ್ಣನಾವಿಧಾನ, ಸಂಸ್ಕೃತಿ ವಿಧಾನ, ತತ್ವ ವಿಧಾನ, ಭಾವನಾ ವಿಧಾನ, ಪ್ರಭೇದದ ವಿಧಾನ, ಪ್ರಭಾವದ ವಿಧಾನದಂತಹ ನಾನಾ ವಿಧಾನಗಳ ಮೂಲಕ ತೌಲನಿಕ ಅಧ್ಯಯನವನ್ನು ಮಾಡಬಹುದಾಗಿದೆ. ಈ ಅಧ್ಯಾಯದಲ್ಲಿ ನವ್ಯಕಾಲಘಟ್ಟದ ಸಮಕಾಲೀನ ಲೇಖಕರಲ್ಲಿ ವಸ್ತು ವಿಧಾನ ಮೂಲಕ ಮಹಿಳೆಯ ಪರಿಕಲ್ಪನೆಯನ್ನು ಈ ಕೆಳಗಿನ ಹಂತಗಳ ಮೂಲಕ ಅಧ್ಯಯನ ಮಾಡಲಾಗಿದೆ.

## ೬. ೧. ವ್ಯಕ್ತಿ ಹಾಗೂ ಸಮಾಜದ ಕೇಡಿನ ಪ್ರಜ್ಞೆ ಮತ್ತು ಮಹಿಳೆಯರು :

ಪುರುಷ ಪ್ರಧಾನ ವ್ಯವಸ್ಥೆಯಲ್ಲಿನ ಮೌಲ್ಯಗಳಿಗೆ ಒಳಪಟ್ಟು ಬದುಕಬೇಕೆಂಬ ನಿಯಮವನ್ನು ವ್ಯವಸ್ಥೆಯು ಮಹಿಳೆಯರ ಮೇಲೆ ಹೇರಿದೆ. ಪ್ರಜ್ಞಾವಂತ ಪುರುಷರು ಸಹ ಇಂತಹ ಜೀವ ವಿರೋಧಿ ಧೋರಣೆಗಳನ್ನು ಪ್ರಶ್ನಿಸದೆ ಒಪ್ಪಿ ಬಾಳುತ್ತಿದ್ದಾರೆ. ಗೊತ್ತಿದ್ದೊ, ಗೊತ್ತಿಲ್ಲದೋ ಮಹಿಳೆಯರ ಮೇಲಿನ ದೌರ್ಜನ್ಯಕ್ಕೆ ತಮ್ಮದೇ ಕೊಡುಗೆ ನೀಡುತ್ತಿದ್ದಾರೆ. ದ್ವಿತೀಯ ಪ್ರಜೆಯಾಗಿರುವ ಮಹಿಳೆಯ ಪರಿಸ್ಥಿತಿ ವ್ಯಕ್ತಿ ಮತ್ತು ಸಮಾಜದ ದೌರ್ಜನ್ಯದಿಂದ ಮತ್ತಷ್ಟು ಹದಗೆಡುತ್ತಿದೆ. ವ್ಯಕ್ತಿಯಲ್ಲಿ ಈ ಮೊದಲೇ ಇರುವ ಕ್ರೌರ್ಯದ ಜೊತೆಗೆ ಸಮಾಜದ ಇಂತಹ ಜೀವ ವಿರೋಧಿ ಧೋರಣೆ ಎರಡೂ ಸೇರಿ ಮಹಿಳೆಯ ಸ್ಥಿತಿಯನ್ನು ದುರಂತಕ್ಕೊಳಪಡಿಸುತ್ತಿದೆ. ಇಂತಹ ಕ್ರೌರ್ಯದ ವಿರುದ್ಧ ಪ್ರತಿಭಟಿಸಲು ಧೈರ್ಯ ಮತ್ತು ಶಕ್ತಿ ಸಾಲದ ಮಹಿಳೆಯರು ವ್ಯಕ್ತಿ ಮತ್ತು ಸಮಾಜದ ದೌರ್ಜನ್ಯದಲ್ಲಿ ನಲುಗಿ ಹೋಗುತ್ತಿದ್ದಾರೆ. ಈ ಅಂಶವನ್ನು ನವ್ಯ ಕಾಲಘಟ್ಟದ ಸಾಹಿತಿಗಳು ಗುರುತಿಸಿ ಅದನ್ನು ತಮ್ಮ ಸಾಹಿತ್ಯ ಕೃತಿಯಲ್ಲಿ ಉಲ್ಲೇಖಿಸುವ ಕೆಲಸ ಮಾಡಿದ್ದಾರೆ.

ವ್ಯಕ್ತಿಯ ವ್ಯಕ್ತಿತ್ವ ಮತ್ತು ಜೀವನದ ಆಳದಲ್ಲಿ ಕೇಡಿನ (Evil) ಅಂಶವು ಹುದುಗಿಕೊಂಡಿದೆ. ಇಂತಹ ಕೇಡನ್ನು ಪ್ರಧಾನ ಅಂಶವಾಗಿ ಸಾಹಿತ್ಯ ಕೃತಿಗಳಲ್ಲಿ ತರುವ ಕೆಲಸವನ್ನು ಮಾಡಿದ ಲೇಖಕರು ಕನ್ನಡ ಸಾಹಿತ್ಯದಲ್ಲಿ ಬಹಳ ಕಡಿಮೆ. ಗ್ರೀಕ್ ನಾಟಕಕಾರ ಈಸ್ಕೈಲಸ್, ಇಟಲಿಯ ಡಾಂಟೆ, ಶೇಕ್ಸ್‌ಪಿಯರ್, ಫ್ರೆಂಚ್ ಕವಿ ಬೋದಿಲೇರ್, ಕಾದಂಬರಿಕಾರ ಸೆಂದ್ತಾಲ್, ಜೋಸೆಫ್ ಕಾನ್ರಾಡ್, ಕಾಫ್ಕಾ ಮುಂತಾದ ಶ್ರೇಷ್ಠ ಬರಹಗಾರರು ಕೇಡಿನ ಬಗ್ಗೆ ತೀವ್ರವಾಗಿ ಬರೆಯುತ್ತಾರೆ. ಪಾಶ್ಚಾತ್ಯ ವಿದ್ವಾಂಸರು ಹೇಳುವ "Call No Man Happy, Until He Be Dead" ಎಂಬ ವಸ್ತುನಿಷ್ಠ ಮಾತುಗಳನ್ನು ನಾವು ಚಿತ್ತಾಲ ಮತ್ತು ಅನಂತಮೂರ್ತಿಯವರ ಕಥನ ಸಾಹಿತ್ಯದಲ್ಲಿ ಕಾಣಬಹುದಾಗಿದೆ.

ಚಿತ್ತಾಲರು ಕೇಡನ್ನು ಬಹಳ ಹತ್ತಿರದಿಂದ ನೋಡಿ ಸಾಹಿತ್ಯ ಕೃತಿಯಲ್ಲಿ ತಂದಿದ್ದಾರೆ. 'ಕೇಡು' ಚಿತ್ತಾಲರ ಕಥನ ಸಾಹಿತ್ಯದಲ್ಲಿ ಪ್ರಮುಖ ಆಸ್ಥೆಯಾಗಿ ಮೂಡಿಬಂದಿದೆ. ಜೀವನದಲ್ಲಿ ಒಮ್ಮೆಗೆ ಬರುವ ಅಸಾಮಾನ್ಯ ಸಂಗತಿಗಳು, ಕುಟುಂಬ ರಹಸ್ಯಗಳು ಇವುಗಳ ಮಧ್ಯೆ ಏನೂ ಅರಿಯದವರು, ಮುಗ್ಧರು ಅನುಭವಿಸುವ ನರಕಯಾತನೆ ಇವೆಲ್ಲ ಚಿತ್ತಾಲರ ಕಥನದಲ್ಲಿ ಕಾಣಸಿಗುತ್ತವೆ. 'ನಿರಪರಾಧಿ ಮುಗ್ಧನು ಅಕಾರಣ ಹಿಂಸೆಗೆ ಗುರಿಯಾಗುವುದು' ಚಿತ್ತಾಲರ ಕೃತಿಗಳಲ್ಲಿ ಸಾಮಾನ್ಯವಾಗಿದೆ. ಆ ಮೂಲಕ ಚಿತ್ತಾಲರು ವಾಸ್ತವ ಸಮಾಜಕ್ಕೆ ಹತ್ತಿರವಾಗುತ್ತಾರೆ. ಕೇಡನ್ನು ವಿವರಿಸಲು ಚಿತ್ತಾಲರು ಹನೇಹಳ್ಳಿ, ಮುಂಬಯಿಯಂತಹ ನಗರಗಳನ್ನು ಒಂದರೊಳಗೊಂದು ತರುವ ಪ್ರಯತ್ನ ಮಾಡುತ್ತಾರೆ. ಉತ್ತರ ಕನ್ನಡ ಜಿಲ್ಲೆಯ ಹನೇಹಳ್ಳಿ ಮತ್ತು ಮುಂಬಯಿ ನಗರಗಳು ಚಿತ್ತಾಲರ ಸಾಹಿತ್ಯ ಕೃತಿಗಳಲ್ಲಿ ಬಂದ ಭೌತಿಕ ಪರಿಸರದ ಅಂಶಗಳು ಮಾತ್ರವಾಗಿಲ್ಲ ಬದಲಿಗೆ ಇವೆರಡೂ ಚಿತ್ತಾಲರ ಪಾಲಿಗೆ ವಾಸ್ತವ ಪ್ರಪಂಚವೂ ಆಗುತ್ತದೆ, ಮತ್ತೊಂದು ಕಡೆ ರೂಪಕವೂ ಆಗುತ್ತದೆ.

ಚಿತ್ತಾಲರ 'ಆಬೋಲೀನ' ಕತೆಯ ಆಬೋಲೀನ, 'ಮೂರು ದಾರಿಗಳು' ಕತೆಯ ನಿರ್ಮಲ, 'ಕತೆಯಾದಳು ಹುಡುಗಿ'ಯ ಜಾನಕಿ, 'ಪುರುಷೋತ್ತಮ'ದ ಸೀತಾ ಇವರೆಲ್ಲಾ ಬಾಳು ಏನು ಎಂದು ಅರಿಯುವ ಮೊದಲೆ ವ್ಯಕ್ತಿ ಮತ್ತು ಸಮಾಜದ ಕೇಡಿಗೆ ಬಲಿಯಾಗಿದ್ದಾರೆ. "ಈಗಲಾದರೂ ಒಪ್ಪುತ್ತೀಯೋ ಇಲ್ಲವೋ ನನ್ನನ್ನು ಮದುವೆಯಾಗಲು ನನ್ನ ಎಂಜಲು ನಿನ್ನ ತುಟಿಯಲ್ಲಿದೆ ಈಗ ನೀನು ಬಸರಾಗುತ್ತಿ" (ಯಶವಂತ ಚಿತ್ತಾಲ, ಚಿತ್ತಾಲರ ಕತೆಗಳು, ೧೯೮೩, ಪುಟ ೯೪) ಎಂದು ವಿನಾಕಾರಣ ಹೆದರಿಸಿದ ಮನವೇಲನ ಮಾತಿಗೆ ಹೆದರಿದ ಮುಗ್ಧ ಹುಡುಗಿ ಆಬೋಲೀನ,

'ಕತೆಯಾದಳು ಹುಡುಗಿ' ಕತೆಯ ಚಂದಿಯಾದ ಕಿರುಗಣೆ ಉಟ್ಟ, ಪುಟ್ಟ ಹುಡಗಿ ಜಾನಕಿ, "ಮನೆಯೊಳಗೊಬ್ಬ ಸೂಳೆ ತನ್ನ ದಂಧೆ ಸುರು ಮಾಡಿದ್ದಾಳೆಂದು ನಮಗೆ ಈ ಕೇರಿಯವರಿಂದ ದೂರುಗಳು ಬಂದಿವೆ" (ಯಶವಂತ ಚಿತ್ತಾಲ, ಪುರುಷೋತ್ತಮ, ೨೦೦೬, ಪುಟ ೩೦೪) ಎಂಬ ಸುಳ್ಳು ಆರೋಪ ಹೊತ್ತುಕೊಂಡ 'ಪುರುಷೋತ್ತಮ'ದ ಸೀತಾ, "ರಾತ್ರಿ ಎಂಟು ಗಂಟೆಯಲ್ಲಿ ರಂಗಪ್ಪನ ಸ್ಟುಡಿಯೋದ ಬಾಗಿಲಲ್ಲಿ ಕಾಣಿಸಿಕೊಂಡ" (ಯಶವಂತ ಚಿತ್ತಾಲ, ಮೂರು ದಾರಿಗಳು, ೨೦೦೦, ಪುಟ ೮೬) ಅಪರಾಧಕ್ಕಾಗಿ ಎಲ್ಲರ ನಿಂದನೆಗೆ ಗುರಿಯಾಗುವ ನಿರ್ಮಲೆ ಇವರೆಲ್ಲಾ ತಮಗಾದ ದುರಂತಗಳಿಂದ ನಮ್ಮನ್ನು ಕಾಡುತ್ತಾರೆ.

ವ್ಯವಸ್ಥೆ ಕೆಲವೊಂದು ಮೌಲ್ಯಗಳನ್ನು ಅಲ್ಲಿ ಬದುಕುವ ವ್ಯಕ್ತಿಗಳ ಮೇಲೆ ಹೇರುತ್ತದೆ. ಮತ್ತು ಅದರಂತೆ ಬದುಕಬೇಕೆಂದು ಒತ್ತಾಯಿಸುತ್ತದೆ. ವ್ಯವಸ್ಥೆಯ ಕೆಲವೊಂದು ಮೌಲ್ಯಗಳನ್ನು ಕೆಲವೊಂದು ಸಾರಿ ಮೀರಲು ವ್ಯಕ್ತಿಗಳು ಪ್ರಯತ್ನ ಪಡುತ್ತಾರೆ. ಆಗ ಬಲಿಷ್ಠವಾದ ಸಮಾಜದ ಎದುರು ವ್ಯಕ್ತಿ ಮುಖಾಮುಖಿಯಾಗಲು ಸಾಧ್ಯವಿಲ್ಲವಾದಾಗ ಸೋಲನ್ನು ಕಾಣುತ್ತಾನೆ. ಅವನ ದುರಂತವನ್ನು ಚಿತ್ತಾಲರ ಕಥನ ಕೃತಿಗಳು ದಾಖಲಿಸುವ ಪ್ರಯತ್ನ ಮಾಡುತ್ತವೆ. ನಿರಪರಾಧಿ ವ್ಯಕ್ತಿಗಳ ದುರಂತದಲ್ಲಿ ವ್ಯಕ್ತಿ ಮತ್ತು ಸಮಾಜದ ಕೇಡಿನ ಪಾತ್ರವನ್ನು ಚಿತ್ತಾಲರು ಗುರುತಿಸಿದ್ದಾರೆ. "ಸಮಾಜ ಈ ಕಾದಂಬರಿಯಲ್ಲಿ ಖಳನಾಯಕನ ಸ್ಥಾನದಲ್ಲಿದೆ" (ರಾಜೇಂದ್ರ ಚೆನ್ನಿ (ಸಂ), ಯಶವಂತ ಚಿತ್ತಾಲರ ಸಾಹಿತ್ಯ ಲೋಕ, ೨೦೧೧, ಪುಟ ೨೩೪) ಎನ್ನುವ ಜಿ.ಎಸ್.ಅಮೂರರ ಮಾತು ಚಿತ್ತಾಲರ ಈ ಮೇಲೆ ಉಲ್ಲೇಖಿಸಿದ ಸಾಹಿತ್ಯ ಕೃತಿಗಳಿಗೂ ಅನ್ವಯಿಸುತ್ತದೆ. ತಾವು ಮಾಡದ ತಪ್ಪಿಗಾಗಿ ಮನವೇಲ, ರಂಗಪ್ಪ, ವೆಂಕಟದಾಸೂವಿನಂತಹವರಿಂದಲೋ ಆಬೋಲೀನ, ನಿರ್ಮಲೆ, ಸೀತೆಯಂತಹವರು ದುರಂತವನ್ನು ಕಾಣುತ್ತಾರೆ. ಇಲ್ಲಿ ವ್ಯಕ್ತಿಯ ಕೇಡಿನ ಜೊತೆಗೆ ಸಮಾಜದ ಕೇಡೂ ಸೇರಿಕೊಂಡು ಮಹಿಳೆ ದುರಂತವನ್ನು ಕಾಣಬೇಕಾಗುತ್ತದೆ. "ಭಾಷೆ ಕಲಿತ ಮಾನವ ವ್ಯಕ್ತಿ ಬರಿಯ ಮಾತಿನ ದುರಪಯೋಗದಿಂದಲೇ ಇನ್ನೊಬ್ಬರ ಮನಸ್ಸನ್ನು ಎಷ್ಟೊಂದು ಕೆಡಿಸಬಲ್ಲದು? ವ್ಯಕ್ತಿ, ವ್ಯಕ್ತಿಗೆ ಎಷ್ಟೊಂದು ಅನ್ಯಾಯ ಮಾಡಬಲ್ಲದು? ಎನ್ನುವಂತಹ ಪಾತ್ರಗಳನ್ನು ಹುಡುಕಲು ದೂರ ಹೋಗಬೇಕಿಲ್ಲ. ಇಲ್ಲಿಯ ನಮ್ಮ ಸುತ್ತಲಿನ ಜನರ ಸ್ವಭಾವವನ್ನು ಚಿತ್ರಿಸಿದರೇ ಸಾಕು ಅಬ್ಬ, ಅವರ ನಾಲಗೆಯೇ!" (ಯಶವಂತ ಚಿತ್ತಾಲ, ಮೂರು ದಾರಿಗಳು, ೨೦೦೦, ಪುಟ ೧೨೬) ಎನ್ನುವ ಮಾತಿನ ಮೂಲಕ ಸಮಾಜದ ಕೇಡನ್ನು ಅರಿಯಬಹುದಾಗಿದೆ. ವ್ಯಕ್ತಿ ಮತ್ತು ಸಮಾಜದ ಕೇಡಿನ ಮೂಲಕ ಮಹಿಳೆಯರ

ಬದುಕು ಮತ್ತಷ್ಟು ಹೇಗೆ ಶೋಚನೀಯವಾಗುತ್ತದೆ ಎಂಬುದನ್ನು ಚಿತ್ತಾಲರು ಗುರುತಿಸುವ ಪ್ರಯತ್ನ ಮಾಡುತ್ತಾರೆ.

ಚಿತ್ತಾಲರಷ್ಟು ಆಳವಾಗಿ ಅಲ್ಲದಿದ್ದರೂ ಅನಂತಮೂರ್ತಿಯವರು ಕೇಡಿನ ಪ್ರಜ್ಞೆಯನ್ನು ತಮ್ಮ ಕಥನ ಸಾಹಿತ್ಯದಲ್ಲಿ ಅನಾವರಣ ಮಾಡುತ್ತಾರೆ. ವೈದಿಕ ಸಂಪ್ರದಾಯದ ಹಿನ್ನೆಲೆಯಿರುವ ಅನಂತಮೂರ್ತಿ ವೈದಿಕತೆಯ ಗೊಡ್ಡುತನವನ್ನೆಲ್ಲಾ ಬಿಚ್ಚಿಡುತ್ತಾರೆ. ಅಗ್ರಹಾರ ವ್ಯವಸ್ಥೆ ಮಹಿಳೆಯನ್ನು ಶೋಷಿಸುವುದನ್ನು ಯಥಾವತ್ತಾಗಿ ಹೇಳುತ್ತಾರೆ. ವ್ಯವಸ್ಥೆಯ ಕೇಡು ಮಹಿಳೆಯನ್ನು ಸಂಪ್ರದಾಯದ ಹೆಸರಿನಲ್ಲಿ ಶೋಷಿಸುವುದನ್ನು ತಮ್ಮ ಕಥನ ಸಾಹಿತ್ಯದಲ್ಲಿ ದಾಖಲಿಸಿದ್ದಾರೆ. 'ಘಟಶ್ರಾದ್ಧ' ದ ಯಮುನಕ್ಕ ಚಿಕ್ಕ ವಯಸ್ಸಿನ ವಿಧವೆಯಾಗಿದ್ದಾಳೆ. ವಯೋಸಹಜವಾದ ಆಸೆ, ಆಕಾಂಕ್ಷೆಗಳು ವಿಧವೆಯಾದರೂ ಯಮುನಕ್ಕಳ ಮನಸ್ಸಿನಲ್ಲಿ ಜಾಗೃತವಾಗಿದೆ. ತನ್ನ ವಯೋಸಹಜವಾದ ಆಸೆಗಳನ್ನು ತೀರಿಸಿಕೊಳ್ಳಲು ಮೇಷ್ಟ್ರ ಜೊತೆ ಸಂಬಂಧ ಬೆಳೆಸುವ ಯಮುನಕ್ಕ ಗರ್ಭಿಣಿಯಾಗುತ್ತಾಳೆ. ವಿಷಯ ತಿಳಿದ ಅಗ್ರಹಾರದ ಜನ ಯಮುನಕ್ಕಳನ್ನು ನಿಂದಿಸುತ್ತಾರೆ. ಹೆದರಿದ ಯಮುನಕ್ಕ ಗರ್ಭಪಾತ ಮಾಡಿಸಿಕೊಳ್ಳುತ್ತಾಳೆ. ಈಕೆಯನ್ನು ಇಷ್ಟಕ್ಕೆ ಬಿಡದ ಅಗ್ರಹಾರದ ವ್ಯವಸ್ಥೆಯು ಆಕೆಗೆ ಬಹಿಷ್ಕಾರ ಹಾಕುತ್ತದೆ. ಆದರೆ ಆಕೆಯ ಜೊತೆ ಸಂಬಂಧ ಬೆಳೆಸಿದ ಮೇಷ್ಟ್ರಿಗೆ ಯಾವುದೇ ಶಿಕ್ಷೆಯಾಗುವುದಿಲ್ಲ. ಇದೇ ಕತೆಯ ಮುಂದುವರೆದ ರೂಪದಂತಿರುವ 'ಪ್ರಶ್ನೆ' ಕತೆಯ ಪಾರ್ವತಿ ಚಿಕ್ಕವಯಸ್ಸಿಗೆ ವಿಧವೆಯಾದವಳು. ಪುರುಷನೊಬ್ಬನ ಜೊತೆ ಸಂಬಂಧ ಬೆಳೆಸಿ ಗರ್ಭಿಣಿಯಾಗುತ್ತಾಳೆ. ಆದರೆ ಕೊನೆಗೆ ಸಮಾಜಕ್ಕೆ ತಿಳಿದರೆ ಅವಮಾನವಾಗುತ್ತದೆ ಎಂದು ಭಾವಿಸಿ ಪಾರ್ವತಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ವ್ಯವಸ್ಥೆಯ ಕೇಡಿನ ಮನೋಧರ್ಮದ ಫಲವಾಗಿಯೇ 'ಘಟಶ್ರಾದ್ಧ' ದ ಯಮುನಕ್ಕ ಮತ್ತು 'ಪ್ರಶ್ನೆ' ಯ ಪಾರ್ವತಿಯರ ಬದುಕು ದುರಂತಕ್ಕೊಳಗಾಗುತ್ತದೆ.

ಚಿತ್ತಾಲರವರಲ್ಲಾಗಲೀ, ಮೂರ್ತಿಯವರಲ್ಲಾಗಲೀ ವ್ಯಕ್ತಿ ಮತ್ತು ಸಮಾಜದ ಕೇಡು 'ಯಯಾತಿ' ಯ ಪ್ರತೀಕದಂತೆ ಕೆಲಸ ಮಾಡುತ್ತದೆ. ಅಂದರೆ ಇಲ್ಲೆಲ್ಲಾ ಕೇಡಿನ ಮನೋಧರ್ಮಕ್ಕೆ ಜಯವಾಗಿದೆ. ಅದರ ದುರಂತಕ್ಕೆ ಮಹಿಳೆಯರು ಸಿಲುಕಿ ಹಾಕಿಕೊಂಡಿದ್ದಾರೆ. ಕೇಡಿನ ವಿರುದ್ಧ ಪ್ರತಿಭಟಿಸಲಾರದ ಮಹಿಳೆಯರು ತಮ್ಮ ಬದುಕನ್ನು ದುರಂತಕ್ಕೊಳ ಪಡಿಸಿಕೊಂಡಿದ್ದಾರೆ. ಈ ದಾರಿ ಬಿಟ್ಟರೆ ಅವರಿಗೆ ಬೇರೆ ದಾರಿಯೇ ಇರಲಿಲ್ಲವೇನೋ ಎನ್ನುವಷ್ಟರ ಮಟ್ಟಿಗೆ ಮಹಿಳೆಯರು ಕೇಡಿನ ವಿರುದ್ಧ ಅಸಹಾಯಕರಾಗಿದ್ದಾರೆ. ಇಲ್ಲಿನ ಮಹಿಳೆಯ ಅಸಹಾಯಕತೆ ನಮ್ಮನ್ನು ಕಾಡುವಂತೆ

ಕೇಡಿನ ಬಗೆಗೆ ಆಕ್ರೋಶವು ವ್ಯಕ್ತವಾಗುತ್ತದೆ. ಕೇಡಿನ ಪ್ರಜ್ಞೆಯನ್ನು ತಮ್ಮ ಸಾಹಿತ್ಯ ಕೃತಿಗಳಲ್ಲಿ ತರುವ ಮೂಲಕ ಚಿತ್ತಾಲ ಮತ್ತು ಅನಂತಮೂರ್ತಿಯರು ಸಮಕಾಲೀನ ಬದುಕಿನ ವಾಸ್ತವದ ಚಿತ್ರಣವನ್ನು ಕಟ್ಟಿಕೊಡುತ್ತಾರೆ.

## ೯.೨. ಲೈಂಗಿಕ ಪ್ರಜ್ಞೆ ಮತ್ತು ಮಹಿಳೆಯರು :

ನವ್ಯದ ಪ್ರಧಾನವಾದ ವಸ್ತುಗಳಲ್ಲಿ ಲೈಂಗಿಕ ಪ್ರಜ್ಞೆಯೂ ಒಂದಾಗಿದೆ. ನವ್ಯ ಕಾಲಘಟ್ಟದ ಸಾಹಿತಿಗಳು ಲೈಂಗಿಕ ಪ್ರಜ್ಞೆಯನ್ನು ಯಥೇಚ್ಛವಾಗಿ ತಮ್ಮ ಸಾಹಿತ್ಯ ಕೃತಿಗಳಲ್ಲಿ ತಂದಿದ್ದಾರೆ. ಚಿತ್ತಾಲರು ಕೂಡ ತಮ್ಮ ಕಥನ ಸಾಹಿತ್ಯದಲ್ಲಿ 'ಲೈಂಗಿಕ ಪ್ರಜ್ಞೆ'ಯನ್ನು ಆಳವಾಗಿ ಶೋಧಿಸುವ ಪ್ರಯತ್ನ ಮಾಡಿದ್ದಾರೆ. ಲೈಂಗಿಕ ಪ್ರಜ್ಞೆ ಚಿತ್ತಾಲರಲ್ಲಿ ಪ್ರವೃತಿ ಅಲ್ಲ, ಬದಲಿಗೆ ಅದು ಮಹಿಳೆಯನ್ನು ಶೋಷಿಸುವ ಅಸ್ತ್ರವಾಗಿ ಬಳಕೆಯಾಗಿದೆ. ಲೈಂಗಿಕ ಅತ್ಯಾಚಾರಗಳು ಚಿತ್ತಾಲರ ಕಥನ ಸಾಹಿತ್ಯದಲ್ಲಿ ಪದೇ ಪದೇ ಆಗುತ್ತವೆ. ಹೆಣ್ಣಿನ ಶೋಷಣೆಯ ಹಂತದಲ್ಲಿ ಚಿತ್ತಾಲರು ಲೈಂಗಿಕ ಪ್ರಜ್ಞೆಯನ್ನು ಗ್ರಹಿಸುತ್ತಾರೆ. 'ಆಬೋಲೀನ' ಕತೆಯ ಆಬೋಲೀನ, 'ಕತೆಯಾದವಳು ಹುಡುಗಿ'ಯ ಜಾನಕಿಯ ಮೇಲೆ ನಡೆಯುವ ಲೈಂಗಿಕ ಬಲತ್ಕಾರವು ಹೆಣ್ಣಿನ ಶೋಷಣೆಯ ರೀತಿಯಲ್ಲಿ ವ್ಯಕ್ತವಾಗಿದೆ. ಅನಂತಮೂರ್ತಿಯವರಲ್ಲಿ ಲೈಂಗಿಕ ಪ್ರಜ್ಞೆ ಮನುಷ್ಯನ ಮೂಲ ಪ್ರವೃತಿ ಎಂಬಂತೆ ಬಳಕೆಯಾಗಿದೆ. "ಈ ದೇಹದಲ್ಲಿರುವ ತನಕ ನಾವೆಲ್ಲರೂ ಮನುಷ್ಯರೇ, ಕ್ರೋಧ, ಕಾಮ, ಮೋಹ ಯಾರನ್ನು ಬಿಟ್ಟಿದ್ದಿಲ್ಲ" (ಯು.ಆರ್.ಅನಂತಮೂರ್ತಿ, ಭವ, ೨೦೦೯, ಪುಟ ೩೪) ಎಂಬಂತಹ ಸರಳ ರೇಖೆಯಲ್ಲಿ ಲೈಂಗಿಕತೆಯನ್ನು ಅನಂತಮೂರ್ತಿಯವರು ಗ್ರಹಿಸುತ್ತಾರೆ. 'ಪ್ರಕೃತಿ' ಕತೆಯ ಲಕ್ಷ್ಮಿ, 'ಘಟಶ್ರಾದ್ದ' ದ ಯಮುನಕ್ಕ, 'ಪ್ರಶ್ನೆ' ಪಾರ್ವತಿಯ ಮೂಲಕ ಅನಂತಮೂರ್ತಿ ಅವರು ಲೈಂಗಿಕ ಪ್ರಜ್ಞೆ ಮಾನವನ ಮೂಲ ಪ್ರವೃತ್ತಿಗಳಲ್ಲಿ ಒಂದು ಅದಕ್ಕೆ ಗಂಡು-ಹೆಣ್ಣು ಎಂಬ ಬೇಧವಿಲ್ಲ, ಪರಿಸ್ಥಿತಿ ಸಂದರ್ಭಗಳ ಹಂಗಿಲ್ಲ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. 'ಸಂಸ್ಕಾರ'ದ ಪ್ರಾಣೇಶಚಾರ್ಯರಿಗೆ ಚಂದ್ರಿಯಿಂದ ಲೈಂಗಿಕ ಅನುಭವಗಳು ದೊರಕುವ ಮೂಲಕ ಪ್ರಾಣೇಶಚಾರ್ಯರು ಜೀವನ್ಮುಖಿಯಾಗುತ್ತಾರೆ. ಲಂಕೇಶರಲ್ಲಿಯೂ ಲೈಂಗಿಕ ಪ್ರಜ್ಞೆಯು ಯಥೇಚ್ಛವಾಗಿ ಕಾಣಸಿಗುತ್ತದೆ. ಇಲ್ಲಿಯೂ ಕೂಡ ಲೈಂಗಿಕ ಪ್ರಜ್ಞೆಯನ್ನು ಒಂದು ಸಹಜ ಪ್ರವೃತ್ತಿ ಎಂಬಂತೆ ಕಾಣಲಾಗಿದೆ. 'ದಾಳಿ' ಕತೆಯ ಮಲ್ಲಿ, 'ಸುಭದ್ರ' ಕತೆಯ ಸುಭದ್ರರ ಮೂಲಕ ಲೈಂಗಿಕ ಪ್ರಜ್ಞೆಯನ್ನು ಚಿತ್ರಿಸಿದ್ದಾರೆ. ಈ ನವ್ಯ ಸಾಹಿತಿಗಳೆಲ್ಲಾ ಬಿಚ್ಚು ನುಡಿಗಳಿಂದ ಲೈಂಗಿಕ ಪ್ರಜ್ಞೆಯ ವಿವರಗಳನ್ನು ತಮ್ಮ ಸಾಹಿತ್ಯ ಕೃತಿಗಳಲ್ಲಿ ಬಿಚ್ಚಿಟ್ಟಿದ್ದಾರೆ. ಮನುಷ್ಯನ ಸಹಜ

ಕಾಮಾನೆಯಾದ ಲೈಂಗಿಕತೆಯ ವಿವರಗಳನ್ನು ನಿರ್ಭಿಡೆಯಿಂದ ಮುಜುಗರಕ್ಕೆ ಈಡು ಮಾಡುವಂತೆ ನವ್ಯ ಸಾಹಿತಿಗಳು ವರ್ಣಿಸಿದ್ದಾರೆ. ಮೇಲ್ಜಾತಿಯ ಪುರುಷರು ತಮ್ಮ ಲೈಂಗಿಕ ಅನುಭವಕ್ಕಾಗಿ ಕೆಳ ಜಾತಿಯ ಹೆಣ್ಣು ಮಕ್ಕಳನ್ನು ಬಳಸಿಕೊಳ್ಳುತ್ತಾರೆ. ಅನಂತಮೂರ್ತಿಯವರ 'ಸಂಸ್ಕಾರ'ದ ಪ್ರಾಣೇಶಚಾರ್ಯ-ಚಂದ್ರಿ, ಲಂಕೇಶರ 'ಚಂದ್ರಪ್ಪಗೌಡರಿಗೆ ಬಿದ್ದ ಕನಸು'ದ ಚಂದ್ರಪ್ಪಗೌಡ-ಮಂಜಿಯರ ಪ್ರಸಂಗಗಳ ಮೂಲಕ ಈ ಅಂಶ ಅರಿವಿಗೆ ಬರುತ್ತದೆ. ಆದರೆ ಚಿತ್ತಾಲರು ಮಾತ್ರ ತಮ್ಮ ಸಮಕಾಲೀನರಂತೆ ಲೈಂಗಿಕ ಪ್ರಜ್ಞೆಯನ್ನು ಜೀವನ ಪ್ರವೃತ್ತಿಯೆಂದು ಬಿಂಬಿಸದೆ ಮಹಿಳೆಯ ಶೋಷಣೆ ಅಸ್ತ್ರವನ್ನಾಗಿಸಿದ್ದಾರೆ. ಇದನ್ನು ನಾವು ಸೂಕ್ಷ್ಮವಾಗಿ ಗಮನಿಸಿದರೆ ಅರಿವಾಗುತ್ತದೆ.

ಲೈಂಗಿಕತೆಯು ಸ್ತ್ರೀ-ಪುರುಷರನ್ನು ದೈಹಿಕವಾಗಿ ಒಂದುಗೂಡಿಸಿ, ಅವರು ಮಾನಸಿಕವಾಗಿಯೂ ಹತ್ತಿರವಾಗುವಂತೆ ಮಾಡುತ್ತದೆ. ಆ ಮೂಲಕ ಸೃಷ್ಟಿ ಕ್ರಿಯೆ ನಡೆಯುತ್ತದೆ, ಬದುಕು ಪರಿಪೂರ್ಣವಾಗುತ್ತದೆ. ಇದರಿಂದ ಲೈಂಗಿಕತೆ ಎಂದರೆ ಹಸಿ ಬದುಕಿನ ಕ್ಷಣವಲ್ಲ, ಬದಲಿಗೆ ಬದುಕನ್ನು ಅರಳಿಸುವ ವಾಹಕ ಎಂಬುದು ತಿಳಿದು ಬರುತ್ತದೆ. ಶಾಂತಿನಾಥ ದೇಸಾಯಿಯವರು ತಮ್ಮ ಕಥನ ಸಾಹಿತ್ಯದಲ್ಲಿ ಇಂಥ ಲೈಂಗಿಕ ಪ್ರಜ್ಞೆಗೆ ಒತ್ತು ಕೊಟ್ಟಿದ್ದಾರೆ. ಲೈಂಗಿಕ ಪ್ರಜ್ಞೆಗೆ ಸಂಬಂಧಿಸಿದ ಸಾಂಪ್ರದಾಯಿಕ ನಿಲುವು ದೇಸಾಯಿಯವರು ಕಥನ ಸಾಹಿತ್ಯದಲ್ಲಿ ಕಾಣಸಿಗುವುದಿಲ್ಲ. ಬದಲಿಗೆ ಮುಕ್ತ ಲೈಂಗಿಕತೆಗೆ ದೇಸಾಯಿಯವರು ಒತ್ತು ಕೊಟ್ಟಿದ್ದಾರೆ. ಆದ್ದರಿಂದಲೇ ಇವರ ಕಥನ ಸಾಹಿತ್ಯದಲ್ಲಿ ಮುಕ್ತ ಲೈಂಗಿಕತೆಗೆ ತಮ್ಮನ್ನು ತಾವು ತೆರೆದು ಕೊಂಡಿರುವ ಪುರುಷ ಮತ್ತು ಮಹಿಳೆಯರನ್ನು ಯಥೇಚ್ಛವಾಗಿ ಕಾಣಬಹುದಾಗಿದೆ.

" 'ಮುಕ್ತಿ'ಯ ವಸ್ತು ಲೈಂಗಿಕ ಪ್ರಜ್ಞೆಯ ವಿವೇಚನೆ ಇದೀಗ ಪಶುವೃತ್ತಿಯಲ್ಲ, ಒಂದು ವ್ಯಾಧಿಯೂ ಅಲ್ಲ ನಿಸರ್ಗದತ್ತವಾದ ಅಪರಿಹಾರ್ಯವಾದ ಸರ್ವ ಸಾಧರಣವಾದ ಶಕ್ತಿ, ಒಂದು ನಿರ್ದಿಷ್ಟ ಕಾಲಾವಕಾಶದಲ್ಲಿ ಜೀವನವನ್ನೇ ಕೆಣಕಿಸಿ ಕೊಚ್ಚಿ ಹರಿಯುವ ಹೊಳೆ ವ್ಯಕ್ತಿತ್ವದಲ್ಲಿ ನಾಟ್ಯ ಪೂರ್ಣ ಪ್ರಸಂಗಗಳನ್ನು ನಿರ್ಮಿಸಿ ಮಿಂಚಿ ಮಾಯವಾಗುವ ಅಮೂರ್ತ ಮಾಯೆ ಇದು ಮನಸ್ಸಿನಾಚೆಗಿನ ಅಡವಿಯಲ್ಲಿ ಸಂಚರಿಸುವ ವಿಚಿತ್ರವಾದ ಪ್ರಾಣಿಯಲ್ಲ. ಇದರ ಹೆಜ್ಜೆ ಗುರುತುಗಳು ಅಸ್ಪಷ್ಟವಾಗಿರುವುದಿಲ್ಲ. ಧಮನಿ ಧಮನಿಗಳಲ್ಲಿ ಒಲ್ಲೆನೆನ್ನಲಾಗದ ಅಚ್ಚೊತ್ತಿ, ಕಿವಿಯವರೆಗೂ ಎಳೆದು ಹಿಡಿದ ಬಿಲ್ಲಿನಲ್ಲಿಯ ಶಕ್ತಿಯಂತೆ ಜೀವನವನ್ನು ಒತ್ತಿ ದೂಡುವ ಜೀವನ ಸತ್ತ್ವವಾಗಿದೆ" (ಮಾರುತಿ ಶಾನುಭಾಗ, ಸಂಕ್ರಮಣ (೮:೧೯೬೫), ಪುಟ ೨೯-೩೦) ಎಂದು ಮಾರುತಿ ಶಾನುಭಾಗರವರು 'ಮುಕ್ತಿ' ಕಾದಂಬರಿಯಲ್ಲಿ ಬರುವ

ಲೈಂಗಿಕ ಪ್ರಜ್ಞೆಯನ್ನು ಅರ್ಥಪೂರ್ಣವಾಗಿ ಗುರುತಿಸಿದ್ದಾರೆ. ಇದು ದೇಸಾಯಿಯವರ 'ಮುಕ್ತಿ' ಕಾದಂಬರಿಯಲ್ಲಿ ಬರುವ ಲೈಂಗಿಕ ಪ್ರಜ್ಞೆಗೆ ಮಾತ್ರ ಅನ್ವಯಿಸದೆ ಅವರ ಎಲ್ಲಾ ಕಥನ ಸಾಹಿತ್ಯಕ್ಕೂ ಅನ್ವಯಿಸಬಹುದುದಾಗಿದೆ.

"ಸ್ತ್ರೀಯ ಸಹಾನುಭೂತಿ ಬೇಕು ಎಂಬ ಹಂಬಲ, ಕಾತರ... ಈ ಎರಡೂ ಭಾವನೆಗಳಿಗೆ ಉತ್ತರ ರೂಪವಾಗಿ ಬಂದವಳು ಡಾಲಿ! ಅವಳ ಸಹವಾಸದಲ್ಲಿ ಒಂದು ಬಗೆಯ ಅಸಾಧರಣ ನಾವೀನ್ಯದ ಅನುಭವ ನನಗುಂಟಾಯಿತು.ಅದರ ಜೊತೆಗೆ ನನ್ನ ಬೆಂದ ಹೃದಯಕ್ಕೆ ಬೇಕಾದ ಶುಶ್ರೂಷೆ ಅವಳಲ್ಲಿ ದೊರೆಯಿತು..." (ಶಾಂತಿನಾಥ ದೇಸಾಯಿ, ಮುಕ್ತಿ, ೨೦೦೨, ಪುಟ ೨೯) ಎನ್ನುವ ಗೌರೀಶನ ಮಾತಿನಲ್ಲಿ ಡಾಲಿಯ ಸಹವಾಸದಿಂದ ಆತ ಪಡೆದ ನೆಮ್ಮದಿಯನ್ನು ಕಾಣಬಹುದಾಗಿದೆ. ಇಂತಹ ಗೌರೀಶ ಮತ್ತು ಡಾಲಿಯವರು ದೇಸಾಯಿ ಅವರ ಕಥನ ಸಾಹಿತ್ಯದಲ್ಲಿ ಹೇರಳವಾಗಿ ಸಿಗುತ್ತಾರೆ. ದೇಸಾಯಿ ಅವರಲ್ಲಿ ಮಹಿಳೆಯ ಮೂಲಕವೇ ಪುರುಷನ ಬದುಕಿಗೆ ಅರ್ಥ ದೊರೆಯುತ್ತದೆ. ಆದ್ದರಿಂದ ಮಹಿಳೆ ಇಲ್ಲಿ ಪ್ರಮುಖ ಪಾತ್ರ ವಹಿಸುತ್ತಾಳೆ. ಪುರುಷನಿಗೆ ಮಹಿಳೆಯ ಅವಶ್ಯಕತೆ ಎಷ್ಟಿದೆ ಎಂಬುದನ್ನು ದೇಸಾಯಿಯವರು ತಮ್ಮ ಕಥನ ಸಾಹಿತ್ಯದಲ್ಲಿ ಮುಕ್ತ ಲೈಂಗಿಕ ಪ್ರಜ್ಞೆಯನ್ನು ತರುವ ಮೂಲಕ ಗುರುತಿಸುವ ಪ್ರಯತ್ನ ಮಾಡಿದ್ದಾರೆ.

ಮನುಷ್ಯನ ಪ್ರಾಥಮಿಕ ಅವಶ್ಯಕತೆಗಳಲ್ಲಿ ಒಂದಾಗಿರುವ ಲೈಂಗಿಕತೆಯನ್ನು ಆರೋಗ್ಯಕರವಾದ ಸಂಬಂಧಗಳಲ್ಲಿ ಪೂರೈಸಿಕೊಳ್ಳಬೇಕು. ಆದರೆ ಕೆಲವೊಂದು ಸನ್ನಿವೇಶಗಳಲ್ಲಿ ಲೈಂಗಿಕತೆಯು ನೈತಿಕ ಮಾರ್ಗಬಿಟ್ಟು ಅನೈತಿಕ ಮಾರ್ಗವನ್ನು ಹಿಡಿಯುತ್ತದೆ. ಪುರುಷ ಪ್ರಧಾನ ಸಮಾಜದಲ್ಲಿ ಲೈಂಗಿಕತೆಯ ವಿಷಯದಲ್ಲಿ ಪುರುಷನಿಗಿಲ್ಲದ ಕಟ್ಟು ಪಾಡುಗಳನ್ನು ಮಹಿಳೆಯ ಮೇಲೆ ಹೇರಿದೆ. ಇಂತಹ ಸಂದರ್ಭದಲ್ಲಿ ಮಹಿಳೆ ಪ್ರಕೃತಿ ಸಹಜವಾದ ಲೈಂಗಿಕ ಭಾವನೆಗಳನ್ನು ಹತ್ತಿಕ್ಕಲಾರದೆ ಸಮಾಜಕ್ಕೆ ಗೊತ್ತಿಲ್ಲದಂತೆ ತನ್ನ ಲೈಂಗಿಕ ದಾಹವನ್ನು ತೀರಿಸಿಕೊಳ್ಳುವ ಪ್ರಯತ್ನ ಮಾಡುತ್ತಾಳೆ. ಇಂತಹ ಲೈಂಗಿಕ ಪ್ರಜ್ಞೆಯನ್ನು ಲಂಕೇಶ್ ತಮ್ಮ ಕಥನ ಸಾಹಿತ್ಯದಲ್ಲಿ ಅನಾವರಣ ಮಾಡಿದ್ದಾರೆ.

ವಿಧುರನಿಗೆ ಮಾತ್ರ ಮರು ಮದುವೆಯಾಗುವ ಅವಕಾಶ ಕೊಟ್ಟಿರುವ ನಮ್ಮ ಸಮಾಜ ನೈತಿಕತೆಯ ಚೌಕಟ್ಟಿನಲ್ಲಿ ಪುರುಷರು ತಮ್ಮ ಲೈಂಗಿಕತೆಯನ್ನು ಬಳಸಿಕೊಳ್ಳುವ ಅವಕಾಶವನ್ನು ಮಾಡಿಕೊಟ್ಟಿದೆ. ಆದರೆ ಇಂತಹ ಅವಕಾಶ ಮಹಿಳೆಯರಿಗಿಲ್ಲ ವಾದ್ದರಿಂದ, ಆಕೆ ಪ್ರಕೃತಿ ಸಹಜವಾದ ಲೈಂಗಿಕತೆಯನ್ನು ಬಲವಂತವಾಗಿ

ಹತ್ತಿಕ್ಕಬೇಕಾಗುತ್ತದೆ. ಅಥವಾ ಕದ್ದು ಮುಚ್ಚಿಯೋ, ಬೇರೆ ಮಾರ್ಗದ ಮೂಲಕವೋ ತನ್ನ ಲೈಂಗಿಕ ಇಚ್ಛೆಗಳನ್ನು ಪೂರೈಸಿಕೊಳ್ಳಬೇಕಾಗುತ್ತದೆ. ಇಂತಹ ಲೈಂಗಿಕತೆಯ ಅನಾವರಣವನ್ನು ಲಂಕೇಶ್ ಮಾಡಿದ್ದಾರೆ. 'ದಾಳಿ' ಕತೆಯ ಮಲ್ಲಿ, 'ಸುಭದ್ರ' ಕತೆಯ ಸುಭದ್ರರ ಮೂಲಕ ವಿಧವಾ ಮಹಿಳೆಯ ಲೈಂಗಿಕ ಪ್ರಜ್ಞೆಯನ್ನು ಮತ್ತು ಅವುಗಳನ್ನು ತಣಿಸಿಕೊಳ್ಳಲು ಅವರು ಅನುಸರಿಸುವ ಮಾರ್ಗಗಳನ್ನು ಲಂಕೇಶ್‌ರವರು ತೆರೆದಿದ್ದಾರೆ. ತನ್ನ ಲೈಂಗಿಕ ಆಸೆಗಳನ್ನು ಈಡೇರಿಸಿಕೊಳ್ಳಲು ಸುಭದ್ರ ಸುಳ್ಳಿನ ಮಾರ್ಗ ಹಿಡಿಯುತ್ತಾಳೆ. ಮಲ್ಲಿ ತನ್ನ ಬಯಕೆಗಳನ್ನು ಸಲೀಂನ ಜೊತೆಗೂಡಿ ತೀರಿಸಿಕೊಳ್ಳುತ್ತಾಳೆ. ಮರುಕ್ಷಣ ಸಮಾಜದ ಕಣ್ಣಿಗೆ ತನ್ನ ಬಯಕೆ ತೀರಿಸಿಕೊಂಡ ರೀತಿಯನ್ನು ಅತ್ಯಾಚಾರ ಎಂಬಂತೆ ಬಿಂಬಿಸುವ ಕೆಲಸ ಮಾಡುತ್ತಾಳೆ. ಮಲ್ಲಿ, ಸುಭದ್ರರಂತಹ ವಿಧವಾ ಮಹಿಳೆಯರ ಮೇಲೆ ಸಮಾಜ ಕಟ್ಟುಪಾಡುಗಳನ್ನು ವಿಧಿಸಿ ತಾನು ಅವರನ್ನು ನಿಯಂತ್ರಣಕ್ಕೊಳಪಡಿಸಿದ್ದೇನೆ ಎಂದು ಸಮಾಜ ಭಾವಿಸಿದ್ದರೂ ಪ್ರಕೃತಿ ಸಹಜವಾದ ಲೈಂಗಿಕ ಭಾವನೆಗಳನ್ನು ಸಮಾಜದ ಕಟ್ಟು ಪಾಡುಗಳ ಹಿಂದೆ ಮಹಿಳೆಯರು ತಮ್ಮ ಲೈಂಗಿಕತೆಯನ್ನು ತೀರಿಸಿಕೊಳ್ಳುವ ವಿಧಾನ ಸಮಾಜಕ್ಕೆ ಸಂದ ಸೋಲಾಗಿದೆ.

ಸಮಾಜದ ಕಟ್ಟುಪಾಡಿನ ಸಂದರ್ಭದಲ್ಲಿ ವಿಧವಾ ಮಹಿಳೆಯರ ಲೈಂಗಿಕ ಬಯಕೆಗಳನ್ನು ತಣಿಸಿಕೊಳ್ಳುವ ಮಾರ್ಗವು ಸಮಾಜದ ಸೋಲಾಗಿ ಲಂಕೇಶರ ಕಥನ ಸಾಹಿತ್ಯದಲ್ಲಿ ಮೂಡಿ ಬಂದಿದೆ. ಅನಂತಮೂರ್ತಿಯವರ ಕಥನ ಸಾಹಿತ್ಯದಲ್ಲಿ ಅದು ವ್ಯಕ್ತಿಯ ವೈಯಕ್ತಿಕ ಸೋಲಾಗಿ ಪರಿಣಮಿಸುತ್ತದೆ. ಮಹಿಳೆಯ ಲೈಂಗಿಕತೆಯು ಸಮಾಜದ ಎದುರು ಬಯಲಾಗಿ ಅನೈತಿಕತೆಯ ಛಾಯೆ ಪಡೆದುಕೊಳ್ಳುತ್ತದೆ. ಅನಂತ ಮೂರ್ತಿಯವರ 'ಘಟಶ್ರಾದ್ಧ' ದ ಯಮುನಕ್ಕ ತನ್ನ ಲೈಂಗಿಕ ವಾಂಛೆಗಳನ್ನು ತೀರಿಸಿಕೊಳ್ಳಲು ಮೇಷ್ಟ್ರರ ಸಂಬಂಧ ಮಾಡಿ ಗರ್ಭಿಣಿಯಾಗಿ ಸಮಾಜದ ಕೆಂಗಣ್ಣಿಗೆ ಗುರಿಯಾಗುತ್ತಾಳೆ. ಕೊನೆಗೆ ಯಾವ ತಪ್ಪನ್ನು ಮಾಡದ ಯಮುನಕ್ಕ ಸಮಾಜದಿಂದ ಬಹಿಷ್ಕಾರಕ್ಕೊಳಗಾಗುತ್ತಾಳೆ. ಅನಂತಮೂರ್ತಿಯವರ 'ತಾಯಿ' ಕತೆಯ ಅಬ್ಬಕ್ಕ ಗಂಡ ಸತ್ತ ನಂತರ ಕೂಡಿಕೆ ಮಾಡಿಕೊಂಡರೂ ಸಂದಿಗ್ಧತೆಗೆ ಸಿಲುಕುತ್ತಾಳೆ. ಸಮಾಜದ ಕಣ್ಣಿಗೆ ನೈತಿಕವಾಗಿ ಬಾಳುವ ಮಾರ್ಗ ಹಾಕಿಕೊಂಡ ಅಬ್ಬಕ್ಕನ ಬದುಕಿನ ಮಾರ್ಗದಿಂದ ಬೇಸತ್ತು ಸ್ವಂತ ಮಗ ಮನೆ ಬಿಟ್ಟು ಹೋಗಿರುವ ಸಂದರ್ಭ ಅಬ್ಬಕ್ಕನಿಗೆ ತನ್ನ ಕೂಡಿಕೆಯ ಮಾರ್ಗ ಸರಿಯೋ, ತಪ್ಪೋ, ಎಂಬ ಸಂದಿಗ್ಧತೆ ಉಂಟಾಗುವಂತೆ ಮಾಡುತ್ತದೆ. ಒಟ್ಟಾರೆ ಈ ಎರಡು ಸಂದರ್ಭಗಳಲ್ಲಿಯೂ ವ್ಯವಸ್ಥೆಯೇ ತನ್ನ ಗೆಲುವನ್ನು ಸಾಧಿಸಿದೆ. ಈ ಕಾರಣಕ್ಕಾಗಿಯೇ ಮಹಿಳೆ ಮತ್ತು ಆಕೆಯ ಲೈಂಗಿಕ

ಭಾವನೆಗಳ ವಿಚಾರದಲ್ಲಿ ಅನಂತಮೂರ್ತಿಯವರಿಗಿಂತ ಲಂಕೇಶರ ಅಭಿಪ್ರಾಯ ಮುಖ್ಯವೆನಿಸುತ್ತದೆ.

## ೯. ೩. ಸಾವಿನ ಪ್ರಜ್ಞೆ ಮತ್ತು ಮಹಿಳೆಯರು :

"ಕಾರ್ಲ್‌ಯುಂಗ್, ಹೆನ್ರಿಕ್ ಝಿಮರ್, ಅರ್ನ್ಸ್ಟ್ ಕೆಸ್ಸೀರರ್, ಲೇವೀಸ್ಟ್ರಾಸ್ ಮೊದಲಾದವರು ಪುರಾಣ ಭಾಷೆ-ಪ್ರಜ್ಞೆ-ಅಪ್ರಜ್ಞೆಗಳನ್ನು ಕುರಿತು ತೆರೆದಿಟ್ಟ ಹೊಚ್ಚ ಹೊಸ ಲೋಕಕ್ಕೆ, ಅಸ್ತಿತ್ವವಾದಿಗಳ ಹೊಸ ಚಿಂತನಾಕ್ರಮಕ್ಕೆ ಪುಳಕಿತಗೊಂಡ ಮನಸ್ಸು; ಬದುಕಿಗೆ ಅರ್ಥ ತಂದುಕೊಟ್ಟವರ ಸಾವಿನಿಂದ (ಮದುವೆಯಾದ ಕೆಲವು ವರ್ಷಗಳಲ್ಲೇ ತೀರಿಕೊಂಡ ಹಿರಿಯ ಅಣ್ಣನ ಆಕಸ್ಮಿಕ ಸಾವು, ಅಪ್ಪನ ಭೀಕರ ಆತ್ಮಘಾತ) ದಿಗಿಲುಗೊಂಡಾಗ ಕೇಳಿಕೊಂಡ ಪ್ರಶ್ನೆಗಳು...." (ರಾಜೇಂದ್ರ ಚೆನ್ನಿ (ಸಂ), ಯಶವಂತ ಚಿತ್ತಾಲರ ಸಾಹಿತ್ಯ ಲೋಕ, ೨೦೧೧, ಪುಟ ೭೪) ಈ ಕಾರಣಗಳಿಂದ ಚಿತ್ತಾಲರ ಕಥನ ಸಾಹಿತ್ಯದಲ್ಲಿ ಸಾವು ಪ್ರಮುಖ ಸ್ಥಾನ ಪಡೆದಿದೆ. ಮನುಷ್ಯನ ಅಸ್ತಿತ್ವದ ಹುಡುಕಾಟದಲ್ಲಿ ಚಿತ್ತಾಲರಿಗೆ 'ಸಾವು' ಬಹು ಕಾಡಿದೆ. ಸಾವಿನ ಸೌಂದರ್ಯವನ್ನು ನವ್ಯದಲ್ಲಿ ಚಿತ್ತಾಲರಷ್ಟು ಬೆರಗಿನಿಂದ ಬೇರೆ ಯಾವ ಲೇಖಕರೂ ನೋಡಿಲ್ಲ. ನಿರಪರಾಧಿಯಾದ ವ್ಯಕ್ತಿ ಕೊನೆಗೆ ವ್ಯವಸ್ಥೆಯ ಕೇಡಿನ ಕ್ರೌರ್ಯದ ತಾಪವನ್ನು ತಾಳಲಾರದೆ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಇಂತಹ ಆತ್ಮಹತ್ಯೆ ಮಾಡಿಕೊಳ್ಳುವ ಚಿತ್ತಾಲರ ವ್ಯಕ್ತಿಗಳು ಬಹುವಾಗಿ ಓದುಗರನ್ನು ಕಾಡುತ್ತಾರೆ. ಚಿತ್ತಾಲರ ಕಥನ ಸಾಹಿತ್ಯದಲ್ಲಿ ಮಹಿಳೆಯ ಸಾವಿನ ರೂಪಕ ಮತ್ತೆ ಮತ್ತೆ ಪುನರಾವರ್ತಿತವಾಗುತ್ತದೆ. ಅದು ಕೇವಲ ಮಹಿಳೆಯೊಬ್ಬಳ ಸಾವು ಮಾತ್ರವಲ್ಲ. ಮಹಿಳೆಯ ದುರಂತವನ್ನು ಸೂಚಿಸುವ ಪ್ರತೀಕವಾಗಿದೆ. ಚಿತ್ತಾಲರ ಕಥನ ಸಾಹಿತ್ಯದಲ್ಲಿ ತಾವು ಮಾಡದ ತಪ್ಪಿಗಾಗಿ ಮಹಿಳೆಯರು ನರಳುತ್ತಾರೆ. ವ್ಯಕ್ತಿ ಕ್ರೌರ್ಯದ ಜೊತೆಗೆ ವ್ಯವಸ್ಥೆಯ ಕ್ರೂರತನವು ಸೇರಿ ಅವರ ಅಸಹಾಯಕತೆ ಮತ್ತಷ್ಟು ಹೆಚ್ಚಾಗುತ್ತದೆ. ಅದೇ ಪರಿಸರದಲ್ಲಿ ಇರಲಾಗದೆ, ಹೊರಬರುವ ಧೈರ್ಯ ಸಾಲದ ನಿರಪರಾಧಿ ಮಹಿಳೆಯರು ಸಾವಿನ ಮೊರೆ ಹೋಗುತ್ತಾರೆ. ಇವರ 'ಮೂರು ದಾರಿಗಳು' ಕಾದಂಬರಿಯ ನಿರ್ಮಲೆ, 'ಆಬೋಲೀನ' ಕತೆಯ ಆಬೋಲೀನ, 'ಉದ್ಧಾರ' ಕತೆಯ ಅಹಲ್ಯೆ, 'ಪುರುಷೋತ್ತಮ' ಕಾದಂಬರಿಯ ಸೀತೆ ಇವರೆಲ್ಲ ಒಂದಲ್ಲಾ ಒಂದು ಕಾರಣಕ್ಕಾಗಿ ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ಅಪರಾಧಿಗಳ ಸ್ಥಾನದಲ್ಲಿ ನಿಲ್ಲುತ್ತಾರೆ. ಕೊನೆಗೆ ಸಾವನ್ನು ತಂದುಕೊಳ್ಳುತ್ತಾರೆ. ಇವರು ತಂದುಕೊಳ್ಳುವ ಸಾವು ಅವರ ಅಸಹಾಯಕತೆಯನ್ನು ಬಿಂಬಿಸುತ್ತದೆ. ವ್ಯಕ್ತಿ ಮತ್ತು ಸಮಾಜದ ಕ್ರೌರ್ಯ ಮಹಿಳೆಯನ್ನು ಅಸಹಾಯಕರನ್ನಾಗಿಸುವ ರೀತಿಯನ್ನು ಚಿತ್ತಾಲರ

'ಸಾವಿನ' ರೂಪಕ ಗುರುತಿಸುತ್ತದೆ. ತಮಗೆ ಒದಗಿದ ಸಮಸ್ಯೆಯನ್ನು ಬಿಡಿಸುವಲ್ಲಿ ವಿಫಲರಾದ ಈ ಮಹಿಳೆಯರು ಸಾವೇ ತಮಗೆ ಉಳಿದಿರುವ ಕೊನೆಯ ದಾರಿ ಎಂದು ತೀರ್ಮಾನಿಸುತ್ತಾರೆ. ಸಮಸ್ಯೆಯನ್ನು ಬಿಡಿಸುವಲ್ಲಿ ಚಿತ್ತಾಲರ ಕಥನ ಸಾಹಿತ್ಯದ ಮಹಿಳೆಯರು ವಿಫಲರಾದರು ಎನ್ನುವುದಕ್ಕಿಂತ ವ್ಯಕ್ತಿ ಮತ್ತು ಸಮಾಜದ ಕ್ರೌರ್ಯ ಅವರ ಅಸಹಾಯಕತೆಗೆ ಕಾರಣವಾಯಿತು ಎಂದು ತಿಳಿದು ಬರುತ್ತದೆ. ವ್ಯಕ್ತಿ ಮತ್ತು ಸಮಾಜದ ಕ್ರೌರ್ಯವು ಇಲ್ಲಿನ ಮಹಿಳೆಯರ ಸಾವಿನಲ್ಲಿ ವೈಭವೀಕರಿಸಿದೆ. ವ್ಯಕ್ತಿ ಮತ್ತು ಸಮಾಜದ ಕ್ರೌರ್ಯವನ್ನು ಮತ್ತು ಮಹಿಳೆಯರ ಅಸಹಾಯಕತೆಯನ್ನು ಚಿತ್ತಾಲರು ಏಕಕಾಲಕ್ಕೆ ಸಾವಿನ ರೂಪಕದಲ್ಲಿ ತಂದಿದ್ದಾರೆ. 'ಸತ್ತರೂ ಬಿಡುವುದಿಲ್ಲ ಭೂತವಾಗಿ ಕಾಡುತ್ತೇನೆ' ಎನ್ನುವ ನಿರ್ಮಲೆ ತಾನು ಬದುಕಿದ್ದಾಗ ತನಗೆ ತೊಂದರೆ ಕೊಟ್ಟವರ ವಿರುದ್ಧ ಸಾವಿನ ಮೂಲಕ ಕಾಡುವ ನಿರ್ಧಾರ ಮಾಡುತ್ತಾಳೆ. ತಾನು ಬದುಕಿದ್ದಾಗ ಮಾಡಲಾಗದ್ದನ್ನು ಸತ್ತ ನಂತರ ಮಾಡುವ ನಿರ್ಧಾರ ಮಾಡುತ್ತಾಳೆ. ಸಾವಿನ ಮೂಲಕ ಬಂಡಾಯ ಪ್ರಜ್ಞೆಯನ್ನು 'ಮೂರು ದಾರಿಗಳು' ಕೃತಿಯ ನಿರ್ಮಲೆಯಲ್ಲಿ ಚಿತ್ತಾಲರು ತಂದಿದ್ದಾರೆ. ಚಿತ್ತಾಲರ ಕಥನ ಸಾಹಿತ್ಯದಲ್ಲಿ ಮತ್ತೆ ಮತ್ತೆ ಬಳಕೆಯಾಗುವ ಸಾವು ಮಹಿಳೆಯರ ಅಸಹಾಯಕತೆಯನ್ನು ಮತ್ತು ಅವರ ಬಂಡಾಯವನ್ನು ಸೂಚಿಸುತ್ತದೆ.

### ೯.೪. ಸ್ಥಾಪಿತ ಮೌಲ್ಯಗಳು ಮತ್ತು ಮಹಿಳೆಯರು :

ಮಹಿಳೆಯರು ತಮ್ಮ ಗಂಡಂದಿರು ಅನೈತಿಕ ಹಾದಿ ತುಳಿಯುತ್ತಿದ್ದರೂ, ಅದನ್ನು ವಿರೋಧಿಸದೆ ಗಂಡಂದಿರನ್ನು ಒಪ್ಪಿ ಬಾಳುವ ಮಹಿಳೆಯರು ನವ್ಯ ಲೇಖಕರರಲ್ಲಿ ಕಾಣಸಿಗುತ್ತಾರೆ. ಗಂಡ ಹೆಂಡತಿಯ ಪರದೈವ, ಆತನ ಜೀವನವನ್ನು ಪ್ರಶ್ನಿಸುವ ಗೋಜಿಗೆ ಹೆಂಡತಿಯಾದವಳು ಹೋಗಬಾರದು ಎಂಬುದನ್ನು ಸಮಾಜದ ಸ್ಥಾಪಿತ ಮೌಲ್ಯವು ಹೇಳುತ್ತದೆ. ಗಂಡಂದಿರ ಅನೈತಿಕ ಬದುಕನ್ನು ಅನಂತಮೂರ್ತಿಯವರ ಕಥನ ಸಾಹಿತ್ಯದಲ್ಲಿ ಬರುವ ಹೆಂಡತಿಯರು ಒಪ್ಪಿ ಬಾಳುತ್ತಾರೆ. ಅನಂತಮೂರ್ತಿಯ 'ಆಕಾಶ ಮತ್ತು ಬೆಕ್ಕು' ಕತೆಯ ರುಕ್ಮಣಿಯಮ್ಮ ಮಡಿ-ಮೈಲಿಗೆ, ಮಾನ-ಮರ್ಯಾದೆ ಎಂದು ಮಾತನಾಡಿದರೂ ತನ್ನ ಗಂಡನ ಅನೈತಿಕತೆಯನ್ನು ವಿರೋಧಿಸದೆ "ಯಾವ ಜನ್ಮದ ಋಣವೋ ತೀರಬೇಕಲ್ಲ" (ಯು.ಆರ್.ಅನಂತಮೂರ್ತಿ, ಐದು ದಶಕದ ಕಥೆಗಳು, ೨೦೦೭, ಪುಟ ೩೫೮) ಎಂದು ಬಾಯಿ ಮುಚ್ಚಿಕೊಂಡಿರುತ್ತಾಳೆ. ಆಕೆಯ ಮಗಳು ಸಾವಿತ್ರಿ ಕೂಡ ತನ್ನ ತಂದೆಯ ಅನೈತಿಕತೆಯನ್ನು ವಿರೋಧಿಸದೆ "ಅವೆಲ್ಲ ಋಣಾನುಬಂಧ ಯಾರ ಕೈಯಿಂದಲೂ ತಪ್ಪಿಸಿಕೊಳ್ಳೋಕೆ ಆಗಲ್ಲ" (ಯು.ಆರ್.ಅನಂತಮೂರ್ತಿ, ಐದು ದಶಕದ ಕಥೆಗಳು, ೨೦೦೭,

ಪುಟ ೩೭೧) ಎಂದು ಹೇಳುವ ಮೂಲಕ ತಂದೆಯ ಅನೈತಿಕತೆಯನ್ನು 'ಋಣಾನುಬಂಧ' ಎಂಬಂತೆ ಒಪ್ಪಿಕೊಳ್ಳುತ್ತಾಳೆ. "ಈ ಲೋಕಕ್ಕೆ ಸೂಳೆಯಾಗಬೇಕು. ಪರಲೋಕಕ್ಕೆ ಮಾತ್ರ ಹೆಂಡತಿ ಬೇಕು" (ಯು.ಆರ್.ಅನಂತಮೂರ್ತಿ, ಐದು ದಶಕದ ಕಥೆಗಳು, ೨೦೦೭, ಪುಟ ೧೭೧) ಎಂಬ ನಿಯಮವನ್ನು ಅನಂತ ಮೂರ್ತಿಯವರ ಕಥನ ಸಾಹಿತ್ಯದ ಪುರುಷರು ತಮಗೆ ತಾವು ಹಾಕಿಕೊಂಡಿದ್ದಾರೆ. ಆದ್ದರಿಂದಲೇ ಅನಂತಮೂರ್ತಿಯವರ ಕಥನ ಸಾಹಿತ್ಯದ ಪುರುಷರು ತಾವು ಮದುವೆಯಾಗಿದ್ದರೂ ಚಂದ್ರಿ, ಲಚ್ಚಿ, ಗಂಗೂ ಬಾಯಿ, ಗಂಗೆ ಇಂತಹ ಮಹಿಳೆಯರ ಸಹವಾಸ ಮಾಡುತ್ತಾರೆ. ಇವರ ಹೆಂಡತಿಯರಿಗೆ ತಮ್ಮ ತಮ್ಮ ಗಂಡಂದಿರ ಅನೈತಿಕತೆಯ ಪರಿಚಯವಿದ್ದರೂ ಅದನ್ನು ಪ್ರತಿಭಟಿಸದೆ ತಮ್ಮ ಕೌಟುಂಬಿಕ ನೆಲೆಯಲ್ಲಿಯೇ ಅದನ್ನು ಒಪ್ಪಿ ಅತೃಪ್ತ ಜೀವಿಗಳಂತೆ ಬದುಕುತ್ತಾರೆ. ಸಂಪ್ರದಾಯನಿಷ್ಠ, ಸ್ಥಾಪಿತ ಮೌಲ್ಯಯುಕ್ತ ಸಮಾಜದಲ್ಲಿ ಹೆಂಡತಿಯಾದವಳಿಗೆ ಗಂಡನ ಅನೈತಿಕತೆಯನ್ನು ಪ್ರಶ್ನೆ ಮಾಡುವುದಕ್ಕಾಗಲೀ, ಪ್ರತಿಭಟಿಸುವುದಕ್ಕಾಗಲೀ ಅವಕಾಶವಿಲ್ಲ. ಆದ್ದರಿಂದಲೇ ಇಲ್ಲಿನ ಮಹಿಳೆಯರು ಪುರುಷರ ಅನೈತಿಕತೆಯನ್ನು ಸಹಜವೆಂಬಂತೆ ಒಪ್ಪಿ ಬಾಳುವೆ ಮಾಡುತ್ತಾರೆ. ಸಮಾಜದ ಸ್ಥಾಪಿತ ಮೌಲ್ಯವನ್ನು ಒಪ್ಪಿ ಬಾಳುವ ಮಾಡುವ ಮಹಿಳೆಯರು ಸಾಮಾನ್ಯವಾಗಿ ಸಮಾಜದ ಮೇಲ್ಜಾತಿಗೆ ಸೇರಿದವರಾಗಿರುತ್ತಾರೆ. ಅಥವಾ ತಮ್ಮ ಗಂಡನ ಅಥವಾ ತಂದೆಯ ಆಶ್ರಯವಿಲ್ಲದೆ ಹೋದರೆ ತಮ್ಮ ಮುಂದಿನ ಜೀವನ ಅತಂತ್ರವಾಗಬಹುದೆಂಬ ಅಸಹಾಯಕ ಪರಿಸ್ಥಿತಿಯಲ್ಲಿರುತ್ತಾರೆ. ಆರ್ಥಿಕವಾಗಿ, ಸಾಮಾಜಿಕವಾಗಿ ಗಂಡಿನ ಆಶ್ರಯವನ್ನೆ ಬಲವಾಗಿ ನಂಬಿರುವ ಮಹಿಳೆಯರು ಸಾಮಾನ್ಯವಾಗಿ ಗಂಡಿನ ಅನೈತಿಕತೆಯನ್ನು ಪ್ರಶ್ನಿಸಲು ಹೋಗುವುದಿಲ್ಲ. ಸಮಾಜದ ಸ್ಥಾಪಿತ ಮೌಲ್ಯವನ್ನು ಒಪ್ಪಿ ಬದುಕುತ್ತಾರೆ.

ಪಿ.ಲಂಕೇಶರ ಕಥನ ಸಾಹಿತ್ಯದಲ್ಲಿಯೂ ಪುರುಷರ ಅನೈತಿಕತೆಯನ್ನು ಒಪ್ಪಿಕೊಂಡು ಅವರ ಜೊತೆ ಬದುಕು ಸಾಗಿಸುವ ಮಹಿಳೆಯರು ಕಾಣಸಿಗುತ್ತಾರೆ. ಆರ್ಥಿಕವಾಗಿ ಸಬಲರಲ್ಲದ 'ಅಣ್ಣನ ನೆನಪು' ಕತೆಯ ಗಂಗುಚಿಕ್ಕಮ್ಮ ಮತ್ತು ಮೀನಾಕ್ಷಿ ಗಂಡಿನ ಅನೈತಿಕತೆಯ ವಿಚಾರ ಗೊತ್ತಾದರೂ ಪ್ರತಿಭಟಿಸುವುದಿಲ್ಲ. ಲಂಕೇಶರವರ 'ವಾಸ್ತವ' ಕತೆಯ ವನಜ ಆರ್ಥಿಕವಾಗಿ ಸಬಲಳಾದರೂ ಗಂಡಿನ ಅನೈತಿಕತೆಯನ್ನು ಪ್ರತಿಭಟಿಸುವುದಿಲ್ಲ. ಆಕೆ ಉದ್ಯೋಗ ಕ್ಷೇತ್ರದಲ್ಲಿ ಮತ್ತು ಕೌಟುಂಬಿಕ ನೆಲೆಯಲ್ಲಿ ಎರಡೂ ಕಡೆ ಗಂಡಿನ ಅನೈತಿಕತೆಯನ್ನು ಒಪ್ಪಿ ಬದುಕುತ್ತಾಳೆ. ವಿದ್ಯಾವಂತರಲ್ಲದವರು, ಆರ್ಥಿಕವಾಗಿ ಸಬಲರಲ್ಲದರು ಗಂಡಿನ ಅನೈತಿಕತೆಯನ್ನು ಪ್ರಶ್ನಿಸುವುದಿಲ್ಲ ಎಂದು ನಾವು ಭಾವಿಸಿದರೂ ಹೆಣ್ಣು ಆರ್ಥಿಕವಾಗಿ ಸಬಲಳಾಗಿದ್ದರೂ ಕೆಲವೊಮ್ಮೆ ಗಂಡಿನ

ಅನೈತಿಕತೆಯನ್ನು ಒಪ್ಪಿ ಬಾಳುತ್ತಾಳೆ. ಲಂಕೇಶ್ ಉದ್ಯೋಗಸ್ಥ ಮಹಿಳೆಯ ಈ ಅಸಹಾಯಕತೆಯನ್ನು ಗುರುತಿಸಿದ್ದಾರೆ. ಪ್ರತಿಭಟನೆ ಎನ್ನುವುದು ಒಂದು ಬಹುದೊಡ್ಡ ಮನೋಶಕ್ತಿ. ಈ ಮನೋಶಕ್ತಿ ಇಲ್ಲದ ಮಹಿಳೆಯರು ಗಂಡಿನ ಅನೈತಿಕತೆ ವಿರುದ್ಧ ಪ್ರತಿಭಟಿಸಲು ಸಾಧ್ಯವಿಲ್ಲ. ಸಮಾಜ ಮೊದಲಿನಿಂದಲೂ ಮಹಿಳೆಗೆ ಇಂತಹ ಮನೋಶಕ್ತಿ ನೀಡುವಲ್ಲಿ ಹಿಂದೇಟು ಹಾಕಿರುವುದರಿಂದಲೇ ಮಹಿಳೆ ಪ್ರತಿಭಟಿಸುವ ಹಂತಕ್ಕೆ ಹೋಗುವುದಿಲ್ಲ. ವ್ಯವಸ್ಥೆಯು ಇಂತಹ ಮನೋಶಕ್ತಿ ಇಲ್ಲದ ಮಹಿಳೆಯರನ್ನು ಸೃಷ್ಟಿಸುತ್ತಲೇ ಬಂದಿರುವುದರಿಂದ ಗಂಡಿನ ಅನೈತಿಕ ವಿರುದ್ಧ ಮಹಿಳೆ ಚಕಾರ ಎತ್ತಲು ಶಕ್ತಿ ಇಲ್ಲದಂತಾಗಿದೆ. ಇದು ವ್ಯವಸ್ಥೆಯ ಹುನ್ನಾರವಾಗಿದೆ. ವ್ಯವಸ್ಥೆಯ ಈ ಹುನ್ನಾರವನ್ನು ಅನಂತಮೂರ್ತಿ ಮತ್ತು ಲಂಕೇಶ್ ತಮ್ಮ ತಮ್ಮ ವ್ಯಾಪ್ತಿಯಲ್ಲಿ ಹೇಳುವ ಪ್ರಯತ್ನ ಮಾಡಿದ್ದಾರೆ.

ಸಾಂಪ್ರದಾಯಿಕ ಸಮಾಜದ ಸ್ಥಾಪಿತ ಮೌಲ್ಯಗಳನ್ನು ಒಪ್ಪಿಕೊಂಡು ಅದನ್ನು ಅನುಸರಿಸಿಕೊಂಡು ಬರುವ ಮಹಿಳೆಯರು ಇರುವಂತೆಯೇ ಆ ವ್ಯವಸ್ಥೆಯನ್ನು ಒಂದಲ್ಲಾ ಒಂದು ರೀತಿಯಲ್ಲಿ ದಾಟುವ ಪ್ರಯತ್ನವನ್ನು ಮಾಡುವ ಮಹಿಳೆಯರು ಇದ್ದಾರೆ. ಈ ದಾಟುವ ಪ್ರಕ್ರಿಯೆಯು ತೀವ್ರತರವಾದ ಪ್ರತಿಭಟನೆಯ ಸ್ವರೂಪವನ್ನು ಪಡೆದುಕೊಳ್ಳದಿದ್ದರೂ ಸಾಂಪ್ರದಾಯಿಕ ಸಮಾಜಕ್ಕೆ ಅವರು ತಮ್ಮ ದಾಟುವ ಪ್ರಕ್ರಿಯೆಯಿಂದಾಗಿ ಬಲವಾದ ಪೆಟ್ಟನ್ನು ನೀಡುತ್ತಾರೆ. "ಎಂಥ ಹಾಳು ಸಂಭಾವನೆಯೊ? ಒಳ್ಳೆ ಭಿಕ್ಷೆ ಬೇಡುವ ಕೆಲಸ" (ಯು.ಆರ್.ಅನಂತಮೂರ್ತಿ, ಐದು ದಶಕದ ಕಥೆಗಳು, ೨೦೦೭, ಪುಟ ೧೬೭) ಎಂದು ಅನಂತ ಮೂರ್ತಿಯವರ 'ಪ್ರಸ್ತ' ಕತೆಯ ನೇತ್ರಾವತಿ ತನ್ನ ಗಂಡ ಸಂಭಾವನೆಗಾಗಿ ಊರೂರು ಅಲೆಯುವುದನ್ನು ವಿರೋಧಿಸುತ್ತಾಳೆ. ಆದರೆ ಅಗ್ರಹಾರದ ಬ್ರಾಹ್ಮಣರು ಸಂಭಾವನೆ ಪಡೆಯುವುದನ್ನು ಬ್ರಾಹ್ಮಣಾರ್ಥ ಎಂಬಂತೆ ಭಾವಿಸುತ್ತಾರೆ. ಆದರೆ ಆಧುನಿಕ ಕಾಲದಲ್ಲಿಯೂ ಬ್ರಾಹ್ಮಣರು ಸಂಭಾವನೆಗಾಗಿ ಊರೂ ತಿರುಗುವುದು ಮತ್ತು ಅದನ್ನೇ ನಂಬಿ ಬಾಳುವುದನ್ನು ನೇತ್ರಾವತಿ ವಿರೋಧಿಸುತ್ತಾಳೆ. ತನ್ನ ಗಂಡ ಬ್ರಾಹ್ಮಣಾರ್ಥವನ್ನು ನಂಬದೆ ಗಣಪಯ್ಯನ ರೀತಿ ಹೋಟೆಲ್ ಇಡಬೇಕೆಂದು ಬಯಸುತ್ತಾಳೆ. ಜೊತೆಗೆ ಬ್ರಾಹ್ಮಣರು ಜುಟ್ಟು ಬಿಡುವುದರ ಬಗ್ಗೆಯೂ ತನ್ನ ವಿರೋಧ ವ್ಯಕ್ತಪಡಿಸುತ್ತಾಳೆ. ಗಂಡನಿಗೆ ಜುಟ್ಟನ್ನು ಕತ್ತರಿಸಿ ಹಾಕಿ ಸಂಪೂರ್ಣವಾಗಿ ಕ್ರಾಪು ಬಿಡುವಂತೆ ಹೇಳುತ್ತಾಳೆ. ಹೋಟೆಲ್ ಮತ್ತು ಕ್ರಾಪು ಬಿಡುವುದು ಅಗ್ರಹಾರದ ಜನರಿಗೆ ಆಧುನಿಕತೆಯ ಸಂಕೇತವಾಗಿದೆ. ಇಂತಹ ಆಧುನಿಕ ಮನೋಭಾವಕ್ಕೆ ಅಲ್ಲಿನ ಬ್ರಾಹ್ಮಣರು ಒಗ್ಗಿಕೊಳ್ಳಲು ಕಷ್ಟಪಡುತ್ತಾರೆ. ಏಕೆಂದರೆ ಅವರೆಲ್ಲಾ ಆಧುನಿಕ ಶಿಕ್ಷಣವನ್ನು ಕಲಿತರವರಲ್ಲ. ಜೊತೆಗೆ ಅವರು

ಪರಂಪರಾನುಗತವಾಗಿ ಬೆಳೆದು ಬಂದಿರುವ ಮೌಲ್ಯವನ್ನೇ ನಂಬಿ ಬಾಳುವ ಮನಸ್ಥಿತಿವುಳ್ಳಂತಹವರಾಗಿದ್ದಾರೆ. ಆದರೆ ಆಧುನಿಕ ಶಿಕ್ಷಣ ಪಡೆದ ನೇತ್ರಾವತಿಗೆ ಇಂತಹ ಮನಸ್ಥಿತಿ ಇಲ್ಲ. ಈ ಕಾರಣಕ್ಕಾಗಿಯೇ ಸಾಂಪ್ರದಾಯಿಕ ಸಮಾಜದ ಸ್ಥಾಪಿತ ಮೌಲ್ಯವನ್ನು ಈಕೆ ದಾಟುವ ಪ್ರಯತ್ನವನ್ನು ಮಾಡುತ್ತಾಳೆ. ಈಕೆ ಸ್ಥಾಪಿತ ಮೌಲ್ಯಗಳ ವಿರುದ್ಧ ಬಹಿರಂಗವಾಗಿ ಪ್ರತಿಭಟನೆ ಮಾಡದೆ ಇದ್ದರೂ ಹೊಸ್ತಿಲ ಒಳಗೆಯೇ ಅದನ್ನು ವಿರೋಧಿಸುವ ಒಂದು ಸಣ್ಣ ಪ್ರಯತ್ನವನ್ನು ಮಾಡುತ್ತಾಳೆ.

ಸಾಂಪ್ರದಾಯಿಕ ಸಮಾಜವು ವಿಧವಾ ವಿವಾಹದ ಬಗ್ಗೆ ವಿಶಾಲವಾದ ಮನೋಭಾವವನ್ನು ಹೊಂದಿಲ್ಲ. ಆಕೆ ಮತ್ತೊಮ್ಮೆ ಮದುವೆಯಾಗುವ ಅವಕಾಶವನ್ನು ವಿಧವಾ ಮಹಿಳೆಯರಿಗೆ ಸಮಾಜವು ಮಾಡಿಕೊಟ್ಟಿಲ್ಲ. ಆದರೆ 'ದಿವ್ಯ' ಕಾದಂಬರಿಯ ವಿಮಲ ವಿಧವೆಯಾದರೂ ಬೇರೆ ಜಾತಿಯ ಹುಡುಗನೊಂದಿಗೆ ಸಂಬಂಧ ಇಟ್ಟುಕೊಂಡು ಒಂದು ಮಗುವನ್ನು ಪಡೆಯುತ್ತಾಳೆ. ವಿಮಲ ತನ್ನ ಗಂಡ ಸತ್ತ ಮೇಲೆ ತಲೆ ಬೋಳಿಸಿಕೊಳ್ಳದೆ, ಕುಂಕುಮವಿಟ್ಟು ಬೇರೆ ಸುಮಂಗಲಿಯರಂತೆ ಒಡವೆ, ಸೀರೆ ತೊಟ್ಟು ಮೈಸೂರಿನಲ್ಲಿ ಬಿ.ಎ. ಮುಗಿಸಿ ಮದ್ರಾಸ್‌ನ ಕಾಲೇಜೊಂದರಲ್ಲಿ ಲಾ ಓದುವ ಆಕೆಯ ಪ್ರಯತ್ನ ಸಮಾಜದ ಸ್ಥಾಪಿತ ಮೌಲ್ಯವನ್ನು ದಾಟುವುದನ್ನು ಸಂಕೇತಿಸುತ್ತದೆ. ವಿಧವೆಯಾದ ವಿಮಲ ವಿಧವೆಯಂತಿರದೆ ತನ್ನ ವಿದ್ಯಾಭ್ಯಾಸ ಮುಂದುವರೆಸುವುದು ಮತ್ತು ಕೆಳ ಜಾತಿಯ ಹುಡುಗನೊಂದಿಗೆ ಸಂಬಂಧ ಬೆಳೆಸಿ ಮಗುವನ್ನು ಪಡೆದು ನಂತರದ ದಿನಗಳಲ್ಲಿ ಆತನನ್ನು ಬಹಿರಂಗವಾಗಿ ಗಂಡನನ್ನಾಗಿ ಸ್ವೀಕರಿಸುವುದು ಕ್ರಾಂತಿಕಾರಿಯಾದ ಪ್ರಯತ್ನವಾಗಿದೆ.

"ಹುಚ್ಚೆದ್ದು ಕುಣಿಯುವ ಇಂದ್ರಿಯಗಳನ್ನು ತೆಪ್ಪಗಿರು ನನ್ನ ಕಂಕುಳಲ್ಲಿ ಎಂದು ಅದುಮಿಡಲು ಸಾಧ್ಯವಿಲ್ಲ". (ಯು.ಆರ್.ಅನಂತಮೂರ್ತಿ, ಐದು ದಶಕದ ಕಥೆಗಳು, ೨೦೦೭, ಪುಟ ೯೭) ಆದರೆ ಸಮಾಜವು ಮಹಿಳೆಯರು ಅದರಲ್ಲೂ ವಿಧವೆಯರು ತಮ್ಮ ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕೆಂದು ಬಯಸುತ್ತದೆ. ಅನಂತ ಮೂರ್ತಿಯವರ 'ಪ್ರಕೃತಿ' ಕಥೆಯಲ್ಲಿನ ಲಕ್ಷ್ಮಿ ಚಿಕ್ಕ ವಯಸ್ಸಿಗೆ ವಿಧವೆಯಾಗಿ ತಂದೆಯ ಆಶ್ರಯದಲ್ಲಿದ್ದಾಳೆ. ಆಕೆಗೆ ಪ್ರಕೃತಿ ಸಹಜವಾದ ಬಯಕೆ ತೀರಿಸಿಕೊಳ್ಳಲು ಶಾನುಭೋಗನ ಮಗ ಕಿಟ್ಟನ ಸಂಬಂಧವನ್ನು ಬೆಳೆಸುತ್ತಾಳೆ. ಸಮಾಜದ ನಿಯಮವನ್ನು ಈ ಮೂಲಕ ಲಕ್ಷ್ಮಿ ಮೀರುವ ಪ್ರಯತ್ನ ಮಾಡುತ್ತಾಳೆ. ಅವಳ ಈ ಕ್ರಿಯೆಯಲ್ಲಿ ಅನೈತಿಕತೆಯ ಅಂಶವು ಎಳ್ಳಷ್ಟು ಇಲ್ಲದಿರುವುದು ಸೂಕ್ಷ್ಮವಾಗಿ ಗಮನಿಸಿದಾಗ ತಿಳಿಯುತ್ತದೆ.

ಹೆಣ್ಣೊಬ್ಬಳು ತನ್ನ ಮನಸ್ಸಿಗೆ ಹಿಡಿಸಿದವನನ್ನು ಮದುವೆಯಾಗುವುದರ ಬಗೆಗೆ ಸಾಂಪ್ರದಾಯಿಕ ಸಮಾಜದಲ್ಲಿ ವಿರೋಧವಿದೆ. ಅಂತರ ವಿರೋಧವನ್ನೇ ತನ್ನ ಸ್ಥಾಪಿತ ಮೌಲ್ಯವನ್ನಾಗಿ ಮಾಡಿಕೊಂಡ ಸಮಾಜವನ್ನು ಲೆಕ್ಕಕ್ಕೆ ತೆಗೆದುಕೊಳ್ಳದ ಲಂಕೇಶರ 'ಕೆರೆಯ ನೀರನ್ನು ಕೆರೆಗೆ ಚೆಲ್ಲಿ ಮತ್ತು ಕಲ್ಲು ಕರಗುವ ಸಮಯ' ಕತೆಯ ಗೌರಿ ಮತ್ತು ಶ್ಯಾಮಲ ವಿಭಿನ್ನವಾಗಿ ಕಾಣಿಸಿಕೊಳ್ಳುತ್ತಾರೆ. ಗೌರಿಯ ಅಗತ್ಯಗಳನ್ನು ಮನಗಂಡು ಆಕೆಗೆ ಇಷ್ಟವಾಗುವಂತೆ ನಡೆದುಕೊಳ್ಳುತ್ತಿದ್ದ ಶಿವರುದ್ರನ ನಡವಳಿಕೆಗೂ, ತನ್ನ ಜೊತೆ ಮದುವೆ ನಿಶ್ಚಯವಾಗಿರುವ ತನ್ನ ಮಾವನ ಸೋಗಲಾಡಿತನಕ್ಕೂ ಬಹು ಬೇಗ ವ್ಯತ್ಯಾಸ ಕಂಡುಕೊಂಡ ಗೌರಿ ತನ್ನ ಮಾವನನ್ನು ಮದುವೆಯಾಗಲು ಸಾರಾಸಗಟಾಗಿ ನಿರಾಕರಿಸುತ್ತಾಳೆ. "..... ನಿಜ ಅಮ್ಮ, ಇವರನ್ನಲ್ಲದೆ ನಾನು ಬೇರೆ ಯಾರನ್ನೂ ಜೊತೆಗಾರನಾಗಿ ಒಪ್ಪಲಾರೆ" (ಪಿ.ಲಂಕೇಶ್, ಸಮಗ್ರ ಕತೆಗಳು, ೧೯೯೨, ಪುಟ ೩೮೩) ಎನ್ನುವ ಶ್ಯಾಮಲಳ ಮಾತು ಆಕೆಯ ಗಟ್ಟಿತನದ ವ್ಯಕ್ತಿತ್ವವನ್ನು ತೋರಿಸುತ್ತದೆ. ವಿಭಿನ್ನ ಜಾತಿಯ ಗಂಡು-ಹೆಣ್ಣಿನ ಪ್ರೇಮ ಘರ್ಷಣೆಗೆ ಕಾರಣವಾಗಬಹುದೆಂದು ತಿಳಿದಿದ್ದರೂ ಶ್ಯಾಮಲಳ ಗಟ್ಟಿತನದ ನಿರ್ಧಾರ ಸಂಘರ್ಷವನ್ನು ಕಲ್ಲಿನಂತೆ ಕರಗಿಸಿ ಬಿಡುತ್ತದೆ. ಹೆಣ್ಣೊಬ್ಬಳು ತನ್ನ ಮನಸ್ಸಿಗೆ ಒಪ್ಪಿದವನನ್ನು ವರಿಸಬಹುದೆನ್ನುವ ಗೌರಿಯ ಸ್ವತಂತ್ರ ಆಲೋಚನೆ ಮತ್ತು ಬೇರೆ ಜಾತಿಯವನಾದರೂ ಆತನನ್ನೇ ತಾನು ಮದುವೆಯಾಗಬೇಕೆಂಬ ಶ್ಯಾಮಲಳ ಗಟ್ಟಿ ನಿರ್ಧಾರ ಎಲ್ಲವೂ ಸ್ಥಾಪಿತ ಮೌಲ್ಯವನ್ನು ದಾಟುವ ಪ್ರಕ್ರಿಯೆಯೇ ಆಗಿದೆ.

## ೯.೫. ಪ್ರತಿಭಟನೆ ಮತ್ತು ಮಹಿಳೆಯರು :

ತಮ್ಮ ಗಂಡನ ಅನೈತಿಕತೆಯನ್ನು ಬಹುತೇಕ ಮಹಿಳೆಯರು ಒಪ್ಪಿ ಬಾಳುತ್ತಾರೆ. ಆದರೆ ಅಲ್ಲೊಬ್ಬರು, ಇಲ್ಲೊಬ್ಬರು ಎಂಬಂತೆ ಆ ಅನೈತಿಕತೆಯನ್ನು ಪ್ರತಿಭಟಿಸುವ ಮಹಿಳೆಯರು ಸಿಗುತ್ತಾರೆ. 'ಸಂಸ್ಕಾರ'ದ ಅನುಸೂಯ ತನ್ನ ಅಳಿಯ ಶ್ರೀಪತಿಗೆ ವೇಶ್ಯೆಯರ ಸಂಪರ್ಕ ಇದೆಯೆಂದು ತಿಳಿದು ಆತನಿಗೆ ಬುದ್ಧಿ ಕಲಿಸಲು ಮುಂದಾಗುತ್ತಾಳೆ. ಆಕೆ ತನ್ನ ಮಗಳಿಗೆ "ನಿನ್ನ ಗಂಡನಿಗೆ ಒಪ್ಪ ಬೇಡ ಹೀಗೆ ತೊಡೆಯನ್ನು ಗಂಟು ಹಾಕಿಕೊಂಡು ಕೌಂಚಿ ಮಲಗಿ ಬಿಡು ಬುದ್ಧಿ ಬರಲಿ" (ಅನಂತಮೂರ್ತಿ ಯು.ಆರ್, ಸಂಸ್ಕಾರ, ೧೯೬೫, ಪುಟ ೩೬) ಎಂದು ಹೇಳಿ ಕೊಡುತ್ತಾಳೆ. ತಾಯಿಯ ಮಾತು ಕೇಳಿದ ಮಗಳು ಲೀಲಾವತಿ ಕೂಡ ಹಾಗೆಯೇ ಮಾಡುತ್ತಾಳೆ. ಗಂಡ ರಾತ್ರಿ ಅವಳ ಹತ್ತಿರ ಬದರೆ ಅವನನ್ನು ಬರಗೊಡದೆ ಆಕೆ ಚೂಟಿದರು, ಕಚ್ಚಿದರು ಎಂದು ನೆಪ ಹೇಳುತ್ತಾ ತಾಯಿಯ ಮಗ್ಗಲಲ್ಲಿ ಬಂದು ಮಲಗಲು

ಪ್ರಾರಂಭಿಸುತ್ತಾಳೆ. ಹೀಗೆ ತಾಯಿ, ಮಗಳು ಇಬ್ಬರು ಶ್ರೀಪತಿಯ ಅನೈತಿಕತೆಯನ್ನು ಅವರದೇ ಆದ ರೀತಿಯಲ್ಲಿ ಪ್ರತಿಭಟಿಸುತ್ತಾರೆ. ಶ್ರೀಪತಿಯ ಅನೈತಿಕತೆಯಿಂದಲೇ ಆತನ ಹೆಂಡತಿ ಆತನೊಡನೆ ದೈಹಿಕ ಸಂಬಂಧವನ್ನು ಕಳೆದು ಕೊಳ್ಳುತ್ತಾಳೆ. ಹೋರಾಟ ಮಾಡಿ ಬಹಿರಂಗವಾಗಿ ಧಿಕ್ಕಾರಗಳನ್ನು ಕೂಗಿದರೆ ಮಾತ್ರ ಪ್ರತಿಭಟನೆಯಾಗುವುದಿಲ್ಲ. ಅದನ್ನು ಮೌನವಾಗಿಯೂ ಮಾಡಬಹುದು. ಇದೇ ರೀತಿ ಗಂಡನ ಅನೈತಿಕತೆ ವಿರುದ್ಧ ಹೆಂಡತಿ ಲೀಲಾವತಿ ಈ ಕ್ರಿಯೆಯೂ ಸಹ ಪ್ರತಿಭಟನೆಯ ಒಂದು ಭಾಗವಾಗಿದೆ.

ಅನಂತಮೂರ್ತಿಯವರ 'ಕಾರ್ತಿಕ'ದ ಅಬ್ಬಕ್ಕ "ತುಕ್ರನ ಕಚ್ಚೆ ಒದರಿದರೆ ಮಕ್ಕಳು ಉದುರುತ್ತವೆ" (ಅನಂತಮೂರ್ತಿ ಯು.ಆರ್, ಐದು ದಶಕದ ಕಥೆಗಳು, ೨೦೦೭, ಪುಟ ೬೭) ಎಂದು ತನ್ನ ಗಂಡನ ಅನೈತಿಕತೆಯನ್ನು ಬಹಿರಂಗವಾಗಿಯೇ ಹಾಸ್ಯ ಮಾಡುತ್ತಾಳೆ. ತುಕ್ರನಿಗೆ ಹೆಣ್ಣಿನ ಚಟ. ತನಗೆ ಮದುವೆಯಾಗಿದ್ದರೂ ರಾಮಿ ಎಂಬ ಹೆಂಗಸಿನ ಜೊತೆ ಅನೈತಿಕ ಸಂಬಂಧವನ್ನು ಬೆಳೆಸಿದ್ದ ವಿಷಯ ತಿಳಿದ ಆತನ ಹೆಂಡತಿ ಅಬ್ಬಕ್ಕ ಆತ ಕಟ್ಟಿದ ತಾಳಿಯನ್ನು ಬಿಸಾಕಿ ಪ್ರತಿಭಟನೆಯನ್ನು ತೋರುತ್ತಾಳೆ. ತಾಳಿಯನ್ನು ಬಿಸಾಕುವಲ್ಲಿ ನೈತಿಕತೆ ಇಲ್ಲದ ಗಂಡನೇ ಬೇಡ ಎಂಬ ಅಬ್ಬಕ್ಕನ ನಿಲುವು ಪ್ರತಿಭಟನೆಯ ರೂಪವಾಗಿದೆ. ಗಂಡನ ಅನೈತಿಕತೆಯ ವಿರುದ್ಧ ಮೇಲ್ಜಾತಿಯ ಲೀಲಾವತಿಯಂತಹ ಮಹಿಳೆಯರು ಮನೆಯ ನಾಲ್ಕು ಗೋಡೆಗಳ ಮಧ್ಯೆ ತಮ್ಮ ಪ್ರತಿಭಟನೆಯನ್ನು ತೋರಿಸಿದರೆ, ಅಬ್ಬಕ್ಕನಂತಹ ಕೆಳಜಾತಿಯ ಮಹಿಳೆಯರು ಸಮಾಜದ ಎದುರಿಗೆಯೇ ತಮ್ಮ ಗಂಡನ ಅನೈತಿಕತೆಯನ್ನು ದಿಟ್ಟವಾಗಿ ಪ್ರತಿಭಟಿಸುತ್ತಾರೆ. ಅನಂತಮೂರ್ತಿಯವರ ಕಥನ ಸಾಹಿತ್ಯದಲ್ಲಿ ಮೇಲ್ಜಾತಿ ಮತ್ತು ಕೆಳಜಾತಿಯ ಮಹಿಳೆಯರ ಪ್ರತಿಭಟನೆಯಲ್ಲಿ ವ್ಯತ್ಯಾಸವಿರುವುದನ್ನು ನಾವು ಗಮನಿಸಬಹುದಾಗಿದೆ. ಮೇಲ್ಜಾತಿಯ ಮಹಿಳೆಯರು ಇಂತಹ ಬಹಿರಂಗ ಪ್ರತಿಭಟನೆಗೆ ಮುಜುಗರ ವ್ಯಕ್ತಪಡಿಸಿದರೆ, ಕೆಳಜಾತಿಯ ಮಹಿಳೆಯರು ಇಂತಹ ಯಾವುದೇ ಮನೋಭಾವವನ್ನು ಪ್ರಕಟಿಸುವುದಿಲ್ಲ. ಮೇಲ್ಜಾತಿ ಮತ್ತು ಕೆಳಜಾತಿಯ ಮಹಿಳೆಯರು ಬದುಕುವ ವಿಭಿನ್ನ ಪರಿಸರದ ಹಿನ್ನೆಲೆಯು, ಇವರಿಬ್ಬರ ಪ್ರತಿಭಟನೆಯು ವಿಭಿನ್ನವಾಗಿರುವುದಕ್ಕೆ ಮೂಲ ಕಾರಣವಾಗಿದೆ.

ದೇಸಾಯಿಯವರು ತಮ್ಮ ಕಥನ ಸಾಹಿತ್ಯದಲ್ಲಿ ಗಂಡನ ಅನೈತಿಕತೆ ಮತ್ತು ಬೇಜವಾಬ್ದಾರಿತನಗಳು ಮಹಿಳೆಯ ಪ್ರತಿಭಟನೆಗೆ ಕಾರಣವಾಗುವುದನ್ನು ಗಮನಿಸಿದ್ದಾರೆ. ಇವರ 'ಯಾಕೆ?' ಕತೆಯ ನಾಯಕ ತನ್ನ ಸೆಕ್ರೆಟರಿ ಮಾಲಿನಿ ಜೊತೆ ಅನೈತಿಕ ಸಂಬಂಧ ಇಟ್ಟುಕೊಂಡಿರುವುದು ಗೊತ್ತಿದ್ದರೂ ಹೆಂಡತಿ ಪ್ರಮೀಳೆ ಅದನ್ನು

ವಿರೋಧಿಸಲು ಹೋಗುವುದಿಲ್ಲ. ಆದರೆ ಇಂತಹ ಅನೈತಿಕ ಹಾದಿಯಲ್ಲಿರುವ ಗಂಡ ಹೆಂಡತಿ ಶೀಲದ ಬಗ್ಗೆ ಅನುಮಾನ ವ್ಯಕ್ತಪಡಿಸಿದಾಗ ನೊಂದ ಪ್ರಮೀಳೆ ಗಂಡನನ್ನು ಬಿಟ್ಟು ಹೋಗುವ ನಿರ್ಧಾರ ಮಾಡುತ್ತಾಳೆ. ಹೆಂಡತಿಯಾದವಳು ಗಂಡನ ಅನೈತಿಕತೆಯನ್ನು ಒಪ್ಪಿಕೊಳ್ಳಬೇಕೆಂಬ ಸಾಂಪ್ರದಾಯಿಕ ಮನೋಭಾವದಲ್ಲಿಯೇ 'ಕೂರ್ಮಾವತಾರ' ಕತೆಯ ಪತಂಗರಾವ್ ಕೆಲಸದಾಕೆಯಾದ ಸೋನುಬಾಯಿ ಜೊತೆ ಅನೈತಿಕ ಸಂಬಂಧವನ್ನು ಇಟ್ಟುಕೊಳ್ಳುತ್ತಾರೆ. ಗಂಡನ ಈ ರೀತಿಯ ಜೀವನದಿಂದ ರೋಸಿ ಹೋದ ಪತ್ನಿ ಜೀಜಾಬಾಯಿ ಆತನನ್ನು ತೊರೆದು ಬೇರೊಬ್ಬ ಸುಸಂಸ್ಕೃತ ವ್ಯಕ್ತಿಯ ಜೊತೆ ಇರಲು ನಿರ್ಧಾರ ಮಾಡುತ್ತಾಳೆ. ಈ ರೀತಿಯಾಗಿ ಶಾಂತಿನಾಥ ದೇಸಾಯಿಯವರು ಕೌಟುಂಬಿಕ ನೆಲೆಯಲ್ಲಿನ ಗಂಡಿನ ಅನೈತಿಕತೆ ಮತ್ತು ಬೇಜವಾಬ್ದಾರಿಗಳನ್ನು ಸೂಕ್ಷ್ಮವಾಗಿ ಗಮನಿಸಿದ್ದಾರೆ ಮತ್ತು ಗಂಡಿನ ಅನೈತಿಕತೆ ಮತ್ತು ಬೇಜವಾಬ್ದಾರಿ ತನಗಳಿಂದಲೇ ಅವರ ಹೆಂಡತಿಯರು ತೊರೆದು ಹೋಗುವ ಮೂಲಕ ಪ್ರತಿಭಟನೆಯನ್ನು ವ್ಯಕ್ತ ಪಡಿಸುತ್ತಾರೆ. ಮಧ್ಯಮ ವರ್ಗಕ್ಕೆ ಸೇರಿದ ಪ್ರಮೀಳೆ, ಜೀಜಾಬಾಯಿ ಇವರಿಬ್ಬರು ವಿದ್ಯಾವಂತರಾಗಿರುವುದುಂದಲೇ ಗಂಡಿನ ಅನೈತಿಕತೆಯ ವಿರುದ್ಧ ಅವರನ್ನೇ ತೊರೆಯುವ ಪ್ರತಿಭಟನೆ ಮಾಡುತ್ತಾರೆ. ಇದು ಅವರ ದಿಟ್ಟತನವನ್ನು ತೋರಿಸುತ್ತದೆ.

ಅಬ್ಬರಿಸಿ ಮಾತನಾಡಿದರೆ ಮಾತ್ರ ಅದು ಪ್ರತಿಭಟನೆಯಾಗುವುದಿಲ್ಲ. ಮೌನವಾಗಿ ಪರಿಸ್ಥಿತಿಯನ್ನು ಎದುರಿಸಿದರೂ ಅದು ಪ್ರತಿಭಟನೆಯಾಗುತ್ತದೆ ಎನ್ನುವುದಕ್ಕೆ ಯಶವಂತ ಚಿತ್ತಾಲರ 'ಪುರುಷೋತ್ತಮ' ಕಾದಂಬರಿಯ ಲಕ್ಷ್ಮಿ ಒಂದು ಒಳ್ಳೆಯ ಉದಾಹರಣೆಯಾಗಿದ್ದಾಳೆ. ಶಾಂತ ಗಂಭೀರ ಮುಖದ ತೇಜಸ್ಸನ್ನು ಹೊಂದಿದ ಲಕ್ಷ್ಮಿಯು ತನ್ನ ಗಂಡ ವೆಂಕಟದಾಸೂನ ದುರುಳತನಕ್ಕೆ ಪ್ರತಿಯಾಗಿ ತನ್ನ ಸ್ವಂತ ಇಚ್ಛೆಯಿಂದ ತನ್ನ ವಾಕ್‌ಶಕ್ತಿಯನ್ನೇ ನಿಯಂತ್ರಿಸಿಕೊಳ್ಳುತ್ತಾಳೆ. ಲಕ್ಷ್ಮಿಯ ಇಂತಹ ಮೌನ, ಆಕೆಯ ಪ್ರತಿಭಟನೆಯನ್ನು ತೋರಿಸುತ್ತದೆ. "ನೀವೆಲ್ಲ ಅಲ್ಲಿಂದ ಹೊರಟು ತನ್ನನ್ನು ಅಪಮಾನಗೊಳಿಸಲೆಂದೇ ನಾನು ನಿಮ್ಮೊಂದಿಗೆ ಶಾಮಿಲಾಗಿ ಹೂಡಿದ ನಾಟಕವದು ಎಂದು ಹೇಳಿ ನಮ್ಮನ್ನೆಲ್ಲ ಬೈದಾಡಿ ಹೆಂಡತಿಯ ಎದುರು ಬಯಲಾಟದ ಕುಣಿತ ಮಾಡಿಬಿಟ್ಟನಂತೆ. ಆ ಮನೆಯಲ್ಲಿ ಮಾತನಾಡಲಾರೆನೆಂದು ಪಣತೊಟ್ಟ ಹೆಂಡತಿಯ ಬಾಯಿಬಿಡಿಸುವ ಹಟದಲ್ಲಿ ಅವಳಿಗೆ ಮಾಡಿದ ಚಿತ್ರಹಿಂಸೆಯನ್ನು ಸಹಿಸಲಾಗದೇ ನಿನ್ನೆ ರಾತ್ರಿಯೇ ಒಬ್ಬಳೇ ಟ್ಯಾಕ್ಸಿ ಹಿಡಿದು ಗಂಡನ ಮನೆಯನ್ನು ಬಿಟ್ಟು ಇಲ್ಲಿಗೆ ಬಂದಳೆಂದರೆ ನೋಡಿ!" (ಯಶವಂತ ಚಿತ್ತಾಲ, ಪುರುಷೋತ್ತಮ, ೨೦೦೬, ಪುಟ ೧೭೯) ಎಂಬ ಮಾತುಗಳಲ್ಲಿ ಲಕ್ಷ್ಮಿಯ ಪ್ರತಿಭಟನೆಯನ್ನು ನೋಡಬಹುದಾಗಿದೆ.

ಲಕ್ಷ್ಮಿಯ ಮೌನ ಮತ್ತು ಗಂಡನ ಚಿತ್ರಹಿಂಸೆ ಹೆಚ್ಚಾದಾಗ ಗಂಡನ ಮನೆಯನ್ನು ತೊರೆಯುವ ಕ್ರಿಯೆಗಳಲ್ಲಿ ಆಕೆಯ ಪ್ರತಿಭಟನೆಯನ್ನು ಚಿತ್ತಾಲರು ವ್ಯಕ್ತಪಡಿಸಿದ್ದಾರೆ.

ತನ್ನ ಮತ್ತು ರಂಗಪ್ಪನ ನಡುವೆ ನಿಜವಾಗಿ ನಡೆದದ್ದನ್ನು ತಿಳಿಯದೆ ಬಾಯಿಗೆ ಬಂದಂತೆ ಮಾತಾಡಿ ತನ್ನನ್ನು ಅಪರಾಧಿಯ ಸ್ಥಾನದಲ್ಲಿ ನಿಲ್ಲಿಸಿರುವ ವ್ಯವಸ್ಥೆಯ ಬಗ್ಗೆ 'ಮೂರು ದಾರಿಗಳು' ಕಾದಂಬರಿಯ ನಿರ್ಮಲೆ ಅಪಾರವಾದ ಸಿಟ್ಟನ್ನು ವ್ಯಕ್ತಪಡಿಸುತ್ತಾಳೆ. ತಂದೆ ವಿಶ್ವನಾಥ ಶಾನುಭಾಗ, ಮದುವೆಯಾಗಲು ಬಂದಿದ್ದ ವಾಸುದೇವ, ರಂಗಪ್ಪ, ಸಾಮಾಜಿಕರು ಇವರೆಲ್ಲರಿಂದ ರೋಸಿ ಹೋಗಿದ್ದ ನಿರ್ಮಲೆ ಇವರ ಮೇಲೆ ಪ್ರತೀಕಾರ ತೀರಿಸಿಕೊಳ್ಳಲೆಂದೇ ರಂಗಪ್ಪನ ಜೊತೆ ಓಡಿಹೋಗುವ ನಿರ್ಧಾರ ಕೈಗೊಳ್ಳುತ್ತಾಳೆ. ಆದರೆ ರಂಗಪ್ಪನ ಜೊತೆ ಓಡಿ ಹೋಗಲು ಸಾಧ್ಯವಾಗದೆ ಇದ್ದಾಗ ನಿರ್ಮಲೆ ಪ್ರತೀಕಾರ ತೀರಿಸಿಕೊಳ್ಳಲೆಂದೇ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ತನ್ನ ತಂದೆ ವಿಶ್ವನಾಥ ಶಾನುಭಾಗ, ತನ್ನ ದೇಹವನ್ನು ಬಯಸಿ ಬಂದಿದ್ದ ರಂಗಪ್ಪ, ಅತಿರೇಕದ ಆದರ್ಶವನ್ನು ಮೈಗೂಡಿಸಿಕೊಂಡಿದ್ದ ವಾಸುದೇವ, ಬಾಯಿಗೆ ಬಂದಂತೆ ತನ್ನ ಶೀಲದ ಬಗ್ಗೆ ಮಾತಾಡಿ ಕೊಳ್ಳುತ್ತಿದ್ದ ಸಮಾಜ ಈ ಎಲ್ಲದರ ವಿರುದ್ಧ ಆತ್ಮಹತ್ಯೆ ಮಾಡಿಕೊಳ್ಳುವ ಮೂಲಕ ಸೇಡನ್ನು ಏಕಕಾಲಕ್ಕೆ ತೀರಿಸಿಕೊಳ್ಳುತ್ತಾಳೆ. ನಿರ್ಮಲೆಯ ಸಾವು ಪ್ರತಿಭಟನೆಯ ಸ್ವರೂಪವನ್ನು ಪಡೆದು ಕೊಳ್ಳುತ್ತದೆ. "ಸತ್ತರೂ ಬಿಡುವುದಿಲ್ಲ ಭೂತವಾಗಿ ಕಾಡುತ್ತೇನೆ" ಎನ್ನುವ ನಿರ್ಮಲ ತಾನು ಬದುಕಿದ್ದಾಗ ತನ್ನನ್ನು ಕಾಡಿದವರನ್ನು ತಾನು ಸತ್ತು ಕಾಡುವ ನಿರ್ಧಾರ ಮಾಡುತ್ತಾಳೆ. ವ್ಯಕ್ತಿ ಮತ್ತು ಸಮಾಜದ ಕ್ರೌರ್ಯದ ವಿರುದ್ಧದ ನಿರ್ಮಲೆಯ ಪ್ರತಿಭಟನೆ ರೊಚ್ಚಿನ ಸ್ವರೂಪ ಪಡೆದುಕೊಂಡಿದೆ.

ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆಯಲ್ಲಿ ಬೆಳೆದು, ಈಗ ಅದೇ ರೀತಿಯ ಕುಟುಂಬ ವ್ಯವಸ್ಥೆಯಲ್ಲಿ ಬದುಕುತ್ತಿರುವ ಕುಸುಮಾಕರರವರ 'ನಾಲ್ಕನೆಯ ಆಯಾಮ'ದ ನಾಯಕನ ತಾಯಿ ಸಾಂಪ್ರದಾಯಿಕ ಕುಟುಂಬದ ಬದುಕಿನಿಂದ ಅಸಹಾಯಕಳಾಗಿದ್ದಾಳೆ. ಮಗನ ಓದಿಗಾಗಿ ಕುಟುಂಬದಿಂದ ಹೊರ ಒಂದು ದುಡಿದು ಸಂಪಾದಿಸಬೇಕೆಂದು ಆಕೆಗೆ ಆಸೆ ಇದ್ದರೂ, ತ್ರಾಣವಿದ್ದರೂ, ಕಷ್ಟಕ್ಕೆ ಹೆದರದೆ ಇದ್ದರೂ ಸಂಪ್ರದಾಯಸ್ಥೆಯಾದ ಈಕೆ ಮನೆತನದ ಗೌರವಕ್ಕೆ ತಾನು ಹೊರಗೆ ಬಂದು ದುಡಿಯುವುದರಿಂದ ಕುಂದಾಗಬಹುದು ಮತ್ತು ಸಮಾಜದ ಮಾತುಗಳಿಗೆ ತಾನು ಗುರಿಯಾಗಬಹುದೆಂದು ಭಯಪಡುತ್ತಾಳೆ. ಆಕೆಯ ಭಯಕ್ಕೆ ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆಯು ಮೂಲಕಾರಣವಾಗಿದೆ.

ತಾನು ದುಡಿದು ಮಗನ ಓದಿಗೆ ಸಹಾಯ ಮಾಡಲಾಗದಿದ್ದರೂ ನಾಯಕನ ತಾಯಿ ತನ್ನ ಗಂಡನ ಹತ್ತಿರ ಆತನನ್ನು ಓದಿಗೆ ಕಳುಹಿಸಲೇಬೇಕೆಂದು ಪಟ್ಟು ಹಿಡಿಯುತ್ತಾಳೆ. "ಅವನನ್ನು ಕಾಲೇಜಿಗೆ ಹಾಕದಿದ್ದರೆ ನಾನು ಯಾವುದಕ್ಕೂ ಹಿಂದೆ ಸರಿಯುವುದಿಲ್ಲ. ಇಲ್ಲಿಯವರೆಗೆ ನಾನು ಯಾವುದಕ್ಕೂ ಪ್ರತಿಯಾಡಲಿಲ್ಲ. ಎಲ್ಲವನ್ನು ಸಹಿಸಿದ್ದೇನೆ. ಮನೆಯೊಡೆದರೂ ಚಿಂತೆಯಿಲ್ಲ. ನಾನು ಮಗನ ಬದಿಗೆ ನಿಲ್ಲುತ್ತೇನೆ. ರಟ್ಟೆಗಳಲ್ಲಿ ಬಲವಿರುವವರೆಗೆ ದುಡಿದು ಅವನನ್ನು ಕಲಿಸುತ್ತೇನೆ" (ಕುಸುಮಾಕರ ದೇವರಗೆಣ್ಣೂರು, ನಾಲ್ಕನೆಯ ಆಯಾಮ, ೨೦೧೩, ಪುಟ ೨೯) ಎಂದು ನಾಯಕನ ತಾಯಿ ಮಗನ ಓದಿಗೆ ಪ್ರೋತ್ಸಾಹ ನೀಡದ ಗಂಡನ ಎದುರು ಮೊದಲ ಬಾರಿಗೆ ಪ್ರತಿಭಟನೆ ವ್ಯಕ್ತಪಡಿಸುತ್ತಾಳೆ. ಸಂಪ್ರದಾಯಸ್ಥ ಹೆಣ್ಣು ಮಗಳೊಬ್ಬಳು ತನ್ನ ಗಂಡನ ಎದುರು ಮಗನನ್ನು ಓದಿಸಲೇಬೇಕೆಂಬ ಪಟ್ಟು ಹಿಡಿಯುವುದು ವಿಶೇಷವಾಗಿದೆ. ತನ್ನ ಹೆಂಡತಿಯ ಇಂತಹ ನಿರ್ಧಾರಕ ಮಾತುಗಳನ್ನು ಈ ಹಿಂದೆ ಎದುರಿಸಿರಲಿಲ್ಲದ ಗಂಡ ತನ್ನ ಹೆಂಡತಿಯ ಈ ಸ್ಥಿರತೆಯ ಮಾತುಗಳಿಂದ ಆಶ್ಚರ್ಯ ಪಡುತ್ತಾನೆ. ಹೆಂಡತಿಯ ಇಂತಹ ಮಾತುಗಳೇ ನಾಯಕನನ್ನು ಓದಿಗೆ ಕಳುಹಿಸದೆ ಇರುವ ಗಂಡನ ನಿರ್ಧಾರವನ್ನು ಬದಲಾಯಿಸುತ್ತದೆ. ಮಗನ ಭವಿಷ್ಯಕ್ಕೆ ತಂದೆಯಾದವನು ಎಲ್ಲಾ ರೀತಿಯ ಸೌಲಭ್ಯಗಳನ್ನು ಮಾಡಿಕೊಡಬೇಕು ಎಂಬುದನ್ನು ನಾಯಕನ ತಾಯಿ ತನ್ನ ಗಂಡನಿಗೆ ಎಚ್ಚರಿಸುತ್ತಾಳೆ. ಮಗನ ಓದಿನ ಪರವಾಗಿ ನಿಲ್ಲದ ಗಂಡನ ವಿರುದ್ಧ ಸಾಂಪ್ರದಾಯಿಕ ಕೌಟುಂಬಿಕ ವ್ಯವಸ್ಥೆಯಲ್ಲಿದ್ದ ನಾಯಕನ ತಾಯಿ ಮಗನ ಓದಿನ ಪರವಾಗಿ ನಿಲ್ಲುವುದು ಗಂಡನ ವಿರುದ್ಧ ಆಕೆಯು ತೋರಿಸುವ ಪ್ರತಿಭಟನೆಯಾಗಿದೆ.

ಗಿರಿಯವರ 'ಗತಿಸ್ಥಿತಿ'ಯ ನಾಯಕಿ ಉನ್ನತ ವಿದ್ಯಾಭ್ಯಾಸ ಪಡೆದು ಉಪನ್ಯಾಸಕಿಯಾಗಿ ಕೆಲಸ ಮಾಡುತ್ತಿದ್ದರೂ, ಕೆಲಸದ ಸ್ಥಳದಲ್ಲಿ ಅಧಿಕಾರ ಶಾಹಿಗಳಿಂದ ಮಾನಸಿಕವಾಗಿ ಬಹಳ ಒತ್ತಡಗಳನ್ನು ಅನುಭವಿಸುತ್ತಾಳೆ. "ನಿನಗೆ ಅಲಾಟ್ ಮಾಡಿದ ರೂಮನ್ನ ಇವತ್ತೇ ನೀನು ಬಂದು ಸೇರಬೇಕು. ನಿನಗೆ ಬೇರೆ ಮನೆ ಯಾವುದೂ ಕೊಡಕ್ಕಾಗಲ್ಲ ಅಲ್ಲದೆ ನೀನು ಕ್ಯಾಂಪಸ್‌ನಲ್ಲೇ ಇರಬೇಕು. ಹೊರಗಡೆ ಎಲ್ಲೋ ಇರ್ತಿನಿ, ಯಾರ್‍ಯಾರ ಜೊತೇನೋ ಇರ್ತೀನಿ ಅಂದ್ರೆ ಅವೆಲ್ಲ ಆಗೋಲ್ಲ. ಮದುವೆ ಆಗ್ದಿರೋ ಹುಡ್ಗಿ ಹೋಟೆಲಿನಲ್ಲಿ......" (ಗಿರಿ, ಗತಿಸ್ಥಿತಿ, ೧೯೯೯, ಪುಟ ೭೩) ಎಂಬ ಡೀನ್ ಮಾತುಗಳಿಗೆ ಪ್ರತಿಯಾಗಿ ಆಕೆ ನನ್ನ ವಸತಿ ಪ್ರಶ್ನೆ ನನ್ನದು, ನಿಮ್ಮ ರೂಮು ಬೇಕಿಲ್ಲ, ನಾನು ಎಲ್ಲಾದರೂ ಇರ್ತೀನಿ ಎಂದು ಹೇಳುವ ಮೂಲಕ ಆಕೆ ವಿರೋಧ ವ್ಯಕ್ತಪಡಿಸುತ್ತಾಳೆ. ಉನ್ನತ ಸ್ಥಾನದಲ್ಲಿದ್ದರೂ ಡೀನ್ ಮಹಿಳೆಯೊಬ್ಬಳ ಶೀಲದ ಬಗ್ಗೆ ಹಗುರವಾಗಿ ಮಾತನಾಡುವ ರೀತಿ ಬೇಸರವೆನಿಸಿದರೂ ಅವನ ಮಾತಿಗೆ

ಪ್ರತಿಯಾಗಿ ಆಕೆ ನೀಡುವ ಉತ್ತರ ಮೆಚ್ಚುಗೆಯೆನಿಸುತ್ತದೆ. ಅಂತಹ ಪುರುಷರ ನಡವಳಿಕೆ ವಿರುದ್ಧ ಮಹಿಳೆಯರ ಪ್ರತಿಭಟನೆ ಅನಿವಾರ್ಯವಾಗಿದೆ.

ಪುರುಷರ ಅನೈತಿಕತೆ ವಿರುದ್ಧ ಮಹಿಳೆಯರ ಪ್ರತಿಭಟನೆಯನ್ನು ಅನಂತಮೂರ್ತಿ ಮತ್ತು ಶಾಂತಿನಾಥ ದೇಸಾಯಿಯವರು ಗುರುತಿಸಿರುವ ರೀತಿಯಲ್ಲಿ ವ್ಯಕ್ತಿ ಮತ್ತು ಸಮಾಜದ ಕ್ರೌರ್ಯದ ವಿರುದ್ಧ ಮಹಿಳೆಯರ ಪ್ರತಿಭಟನೆಯನ್ನು ಚಿತ್ತಾಲರು ಗಮನಿಸಿದ್ದಾರೆ. ಗಿರಿಯವರು ಅಧಿಕಾರ ಶಾಹಿಯ ವಿರುದ್ಧ ಮಹಿಳೆಯ ಪ್ರತಿಭಟನೆಯನ್ನು, ಕುಸುಮಾಕರರು ಪುರುಷನ ಬೇಜವಾಬ್ದಾರಿಯ ವಿರುದ್ಧ ಮಹಿಳೆಯರ ಪ್ರತಿಭಟನೆಯನ್ನು ಅಭಿವ್ಯಕ್ತಿಸಿದ್ದಾರೆ.

ವೀಣಾಶಾಂತೇಶ್ವರರವರ 'ಹೀಗೊಂದು ಕಥೆ'ಯ ನಾಯಕಿ ಮದುವೆ ಎಂಬ ಸಾಮಾಜಿಕ ವ್ಯವಸ್ಥೆಗೆ ಒಳಗಾಗದೆ ತಾನು ಇಷ್ಟಪಟ್ಟವನ ಜೊತೆ ಬಾಳುವೆ ಮಾಡಿ ಗರ್ಭಿಣಿಯಾಗುತ್ತಾಳೆ, ಮದುವೆಯಾಗದೆ ತಾಯಿಯಾಗುವ ಸಂಗತಿ ಆಕೆಗೆ ಯಾವುದೇ ತೊಂದರೆಯ ವಿಷಯವಲ್ಲದಾದರೂ, ಆತನಿಗೆ ಮಾತ್ರ ಮದುವೆಯಾಗದೆ ತಂದೆಯಾಗುವ ಎದೆಗಾರಿಕೆಯಲ್ಲ. ಆ ಕಾರಣಕ್ಕಾಗಿ ಅವರ ಸಂಬಂಧಕ್ಕೆ ಹೆಸರಿಡುವ ಪ್ರಯತ್ನ ಮಾಡುತ್ತಾನೆ. ಅವನು ಮಾಡಿದ ಪ್ರಯತ್ನದ ಕಾರಣಕ್ಕಾಗಿ ನಾಯಕಿ ಆತನನ್ನೇ ನಿರಾಕರಿಸಿ ತಾಯ್ತನವನ್ನು ಆರಿಸಿಕೊಳ್ಳುತ್ತಾಳೆ. ಮಗುವನ್ನು ಹೆರುವುದು ನನ್ನ ಜನ್ಮ ಸಿದ್ದ ಹಕ್ಕು, ನನಗೆ ಯಾರ ಅವಶ್ಯಕತೆಯಿಲ್ಲ ಎಂದು ಹೇಳುವ ಆಕೆ ಮೆಚ್ಚಿದವನನ್ನು ನಿರಾಕರಿಸುತ್ತಾಳೆ.

'ಕವಲು' ಕತೆಯ ಮಿನಿ ವಿವಾಹಿತ ಪುರುಷನ ಜೊತೆ ಸಂಬಂಧ ಇಟ್ಟುಕೊಂಡು ಆತನ ನಯ ವಂಚನೆಯಿಂದ ಬೇಸತ್ತು ಹೋಗಿ ತಮ್ಮ ಸಂಬಂಧವನ್ನು ದೂರಮಾಡಿ ಹೊರ ದೇಶಕ್ಕೆ ಹೋಗುವ ನಿರ್ಧಾರ ಮಾಡುತ್ತಾಳೆ ಆ ಸಂದರ್ಭದಲ್ಲಿ ಆ ವ್ಯಕ್ತಿ ಆಕೆಗೆ ಪ್ರಾಮಾಣಿಕವಾಗಿರುತ್ತೇನೆಂದು ನುಡಿದರೂ ಆತನನ್ನು ಆಕೆ ನಿರಾಕರಿಸುತ್ತಾಳೆ.

ಈ ಎರಡು ಕತೆಗಳಲ್ಲಿ ವೀಣಾ ಶಾಂತೇಶ್ವರವರು ಸಂಗಾತಿಯನ್ನು ನಿರಾಕರಿಸುವ ನಾಯಕಿಯನ್ನು ಚಿತ್ರಿಸಿದ್ದಾರೆ. ನಿರಾಕರಿಸುವುದು ಕೂಡ ನಮ್ಮ ಆಯ್ಕೆಯ ಸ್ವಾತಂತ್ರವಾಗಿರುವಂತೆಯೇ ನಮ್ಮ ಎದುರುಗಡೆ ಇರುವ ವ್ಯಕ್ತಿಯ ವಿರುದ್ದ ನಾವು ತೋರಿಸುವ ಪ್ರತಿಭಟನೆಯೇ ಆಗಿದೆ. 'ಹೀಗೊಂದು ಕಥೆ' ಮತ್ತು 'ಕವಲು' ಕಥೆಯ ನಾಯಕಿಯ ನಿರಾಕರಣೆಯಲ್ಲಿ ಪ್ರತಿಭಟನೆಯ ಅಂಶವು ವ್ಯಕ್ತವಾಗಿದೆ.

## ೯. ೬. ಭಾಷೆ ಮತ್ತು ಮಹಿಳೆಯರು :

ಮನುಷ್ಯರು ತಮ್ಮ ಅಭಿವ್ಯಕ್ತಿಗಾಗಿ ಕಂಡುಕೊಂಡು ಬಹುಮುಖ್ಯ ಸಂವಹನ ಮಾಧ್ಯಮವೇ ಭಾಷೆಯಾಗಿದೆ. ಪ್ರತಿಯೊಂದು ಭಾಷೆಯ ಹಿಂದೆ ಆಯಾಯ ಸಮುದಾಯದ ಸಂಸ್ಕೃತಿಯ ನೆರಳು ಇದ್ದೇ ಇರುತ್ತದೆ. ಸಮುದಾಯದ ಸಂಸ್ಕೃತಿಯ ಪ್ರತಿಬಿಂಬವಾದ ಭಾಷೆಯಲ್ಲಿ ವರ್ಣಭೇದ, ವರ್ಗಭೇದ, ಜಾತಿ ಭೇದ, ಲಿಂಗಭೇದಗಳ ಸಹ ಸ್ಥಾನ ಪಡೆದಿವೆ. ಪುರುಷ ಸೃಷ್ಟಿಸಿದ ಸಾಮಾಜಿಕ ವ್ಯವಸ್ಥೆಯ ರೀತಿ ನೀತಿಗಳಂತೆ ಭಾಷೆಯಲ್ಲಿಯೂ ಪ್ರಧಾನ-ಅಧೀನ ಅಂಶಗಳನ್ನು ಕಾಣಬಹುದಾಗಿದೆ. ಸಮಾಜದಲ್ಲಿ ದ್ವಿತೀಯ ದರ್ಜೆ ಪ್ರಜೆಯಾಗಿರುವ ಮಹಿಳೆ ಭಾಷೆಯಲ್ಲಿಯೂ ಅದೇ ಸ್ಥಾನವನ್ನು ಕಾಯ್ದುಕೊಂಡಿದ್ದಾಳೆ. 'ಮ್ಯಾನ್ ಮೇಡ್ ಲಾಂಗ್ವೇಜ್' ಆಗಿರುವ ಇಂದಿನ ಭಾಷೆ ಮಹಿಳಾ ವಿರೋಧಿ ಧೋರಣೆಗಳನ್ನು ಒಳಗೊಂಡಿದೆ. ಇಂತಹ 'ಮ್ಯಾನ್ ಮೇಡ್ ಲಾಂಗ್ವೇಜ್'ನ್ನು ಸಾಹಿತ್ಯದಲ್ಲಿ ಬಳಸುತ್ತಾ ಬರಲಾಗುತ್ತಿದೆ. ನವ್ಯ ಕಥನ ಸಾಹಿತ್ಯದಲ್ಲಿಯೂ 'ಮ್ಯಾನ್ ಮೇಡ್ ಲಾಂಗ್ವೇಜ್' ಬಳಕೆಯು ಯಥೇಚ್ಛವಾಗಿ ಕಾಣಸಿಗುತ್ತದೆ.

ಆದರ್ಶಗಳನ್ನೇ ಮೂಲವನ್ನಾಗಿಟ್ಟುಕೊಂಡ ಸಮಾಜವು ತನ್ನ ಆದರ್ಶಗಳನ್ನು ಪುರುಷ ಮತ್ತು ಮಹಿಳೆಯರಿಬ್ಬರಿಗೆ ಒಂದೇ ರೀತಿ ಅನ್ವಯಿಸಿಲ್ಲ. ಸಾಂಪ್ರದಾಯಿಕ ಸಮಾಜವು ಪುರುಷ ಕೇಂದ್ರಿತವಾಗಿದ್ದು, ಅವನ ಹಿತಾಸಕ್ತಿಗಳಿಗೆ ಅನುಸಾರವಾಗಿ ವ್ಯವಸ್ಥೆಯಲ್ಲಿ ಮೌಲ್ಯಗಳು ಸ್ಥಾಪಿತಗೊಂಡಿವೆ. ಈ ಮೌಲ್ಯಗಳಲ್ಲಿ ಮಹಿಳೆ ದ್ವಿತೀಯ ಪ್ರಜೆಯಾಗಿ ಕಾಣಸಿಗುತ್ತಾಳೆ. ಶೀಲ, ಪಾತಿವ್ರತ್ಯ, ತಾಯ್ತನ ಮೊದಲಾದ ಆದರ್ಶದ ಮೌಲ್ಯಗಳು ಮಹಿಳೆಯನ್ನೇ ಕೇಂದ್ರವಾಗಿಟ್ಟುಕೊಂಡು ಬಳಕೆಯಾಗಿವೆ. ಆ ಮೂಲಕ ಪುರುಷನಿಗಿಲ್ಲದ ಈ ಆದರ್ಶಗಳು ಮಹಿಳೆಗೆ ಆರೋಪಿಸುವ ಮೂಲಕ ಆಕೆಯನ್ನು ಶೋಷಿಸುವ ಮಾಧ್ಯಮವಾಗಿದೆ. ಕನ್ನಡ ಭಾಷೆಯಲ್ಲಿ ದೊರಕುವ ಗಾದೆ, ಒಡಪುಗಳಂತೆ, ಬೈಗುಳಗಳು ಲಿಂಗ ತಾರತಮ್ಯವನ್ನು ಅಭಿವ್ಯಕ್ತಿಸುತ್ತದೆ. ಮಹಿಳೆಯನ್ನೇ ಕೇಂದ್ರವಾಗಿಟ್ಟುಕೊಂಡ ಬೈಗುಳಗಳು ಅಸಂಖ್ಯವಾಗಿದೆ. ಒಂದು ಅಧ್ಯಯನದ ಪ್ರಕಾರ ಲಂಪಟ ಮಹಿಳೆಯನ್ನು ವರ್ಣಿಸಲು ಭಾಷೆಯಲ್ಲಿ ೩೩೦ ಪದಗಳಿವೆ. ಆದರೆ ಅದೇ ಪುರುಷನನ್ನು ವರ್ಣಿಸಲು ಸಿಗುವ ಪದಗಳ ಸಂಖ್ಯೆ ಕೇವಲ ೩೦ ಮಾತ್ರವೆಂದು ಹೇಳಲಾಗಿದೆ. (ಸಿ.ಜಿ.ಮಂಜುಳಾ – ಲಿಂಗತಾರತಮ್ಯ ಧ್ವನಿಸುವ ಭಾಷೆ; ಪ್ರಜಾವಾಣಿ ದಿನಪತ್ರಿಕೆ, ದಿನಾಂಕ ೨೬-೦೪-೨೦೦೪) ಹೆಂಗಸರಿಗೆ ಬೈಯ್ಯುವ ಬೈಗುಳಗಳಾಗಿ, ಗಂಡಸರಿಗೆ ಬೈಯ್ಯುವ ಬೈಗುಳಗಳಾಗಿ ಸಾಮಾನ್ಯವಾಗಿ ಮಹಿಳೆಯನ್ನು ಕೇಂದ್ರವಾಗಿಟ್ಟುಕೊಂಡು

ರಚಿಸಲಾಗಿರುತ್ತದೆ. "ಹಾಳು ಮುಂಡೆ ಯಾಕೆ ಬಸುರಿಯಾಗಬೇಕಿತ್ತು", (ಯು.ಆರ್.ಅನಂತಮೂರ್ತಿ, ಐದು ದಶಕದ ಕಥೆಗಳು, ೨೦೦೭, ಪುಟ ೨೦೧) "ಚಂದ್ರಿಯಂಥ ಚೆಲುವೆ, ಗಟ್ಟಿಗೆ, ಒಳ್ಳೆಯ ಹೆಂಗಸು ಈ ನೂರು ಮೈಲಿಯಲ್ಲಿ ಇದ್ದಳಾ ಎಣಿಸಿ ಬಿಡಿ. ಇದ್ದರೆ ಜಾತಿ ಬಿಟ್ಟು ಬಿಡುವೆ. ಸೂಳೆಯಾದರೆ ಏನಯ್ಯ? ನಾರಣಪ್ಪನಿಗೆ ಅವಳು ಹೆಂಡತಿಗಿಂತ ಹೆಚ್ಚಾಗಿ ನಡಕೊಂಡಳೋ ಇಲ್ಲವೋ ಹೇಳಿ ನೋಡುವ. ಅವನು ಕುಡಿದು ವಾಂತಿ ಮಾಡಿಕೊಂಡರೆ ಬಾಚಿದಳು. ಅಲ್ಲದೆ ನಮ್ಮ ವಾಂತೀನೂ ಬಾಚಿದಳಲ್ಲಯ್ಯ!. ಅರ್ಧ ರಾತ್ರಿ ಅವನು ಬಂದು ಎಬ್ಬಿಸಲಿ ತುಟಿಪಿಟಕ್ಕೆನ್ನದೆ ನಗ್ತ ನಗ್ತ ಅಡಿಗೆ ಮಾಡಿ ಬಡಿಸ್ತಿದ್ದಳು. ಯಾವ ಬ್ರಾಹ್ಮಣ ಹೆಂಗಸು ಅಷ್ಟು ಮಾಡ್ತಾಳಯ್ಯ? ಎಲ್ಲಾ ಪಿರಿ ಪಿರಿ ಮುಂಡೇರು ಥತ್" (ಯು.ಆರ್.ಅನಂತಮೂರ್ತಿ, ಸಂಸ್ಕಾರ, ೧೯೬೫, ಪುಟ ೬೩) ಎನ್ನುಂತಹ ಅನಂತಮೂರ್ತಿಯವರು ಬಳಸುವ ಬೈಗುಳಗಳು ಮತ್ತು ಲಂಕೇಶರು ಬಳಸುವ ಬೇವಾರ್ಸಿ, ಸೂಳೆ ಮಗ, ಹುಚ್ಚು ಮುಂಡೆ, ಬೋಳಿಮಗ, ಹಲ್ಕಾ ಮುಂಡೆ, ಲೌಡಿ, ಹಡಪಾಮುಂಡೆಯಂತಹ ಬೈಗುಳಗಳು ಮಹಿಳಾ ವಿರೋಧಿ ಧ್ವನಿಗಳನ್ನೇ ಅಭಿವ್ಯಕ್ತಿಸುತ್ತವೆ. ಹೆಂಗಸರಿಗೆ ಬೈಯ್ಯುವ ಬೈಗುಳಗಳಾಗಲಿ, ಗಂಡಸರಿಗೆ ಬಳಸುವ ಬೈಗುಳಗಳಾಗಲಿ ಮಹಿಳೆಯನ್ನೇ ಕೇಂದ್ರವಾಗಿಟ್ಟುಕೊಂಡು ಪುರುಷ ಕೇಂದ್ರಿತ ನೆಲೆಯಲ್ಲಿ ರಚಿತವಾಗಿರುವುದನ್ನೇ ನವ್ಯ ಲೇಖಕರು ಯಥಾವತ್ತಾಗಿ ಬಳಸಿದ್ದಾರೆ. ಈ ಮೂಲಕ ಭಾಷೆಯ ಮೂಲಕ ಲಿಂಗ ರಾಜಕಾರಣವನ್ನು ನವ್ಯ ಲೇಖಕರು ಮಾಡಿದ್ದಾರೆ.

ಮಾತು ಬೆಳ್ಳಿ, ಮೌನ ಬಂಗಾರ ಎಂಬ ಗಾದೆಯನ್ನು ಗಮನಿಸಿದರೆ ಹೆಣ್ಣು ಎಂದರೆ ಹೀಗೇ ಇರಬೇಕು ಎಂದು ನಿಯಮಗಳನ್ನು ಆಕೆಯ ಮೇಲೆ ಹೇರಿದಂತಿದೆ. ಹೆಣ್ಣಿನ ಮಾತು ಬೆಳ್ಳಿಯಂತಿದ್ದು ಕಡಿಮೆ ಇರಬೇಕು. ಇಲ್ಲ ಬಂಗಾರದಂತಹ ಮೌನವನ್ನು ಆಕೆ ತಳೆದಿರಬೇಕು. ಅದಕ್ಕೆ ವಿರುದ್ಧವಾದ ಗುಣ ಆಕೆಯಲ್ಲಿದ್ದರೆ ಆಕೆಯನ್ನು ಗಯ್ಯಾಳಿ, ಬಾಯ್ಬಡಕಿ ಎಂದು ಪುರುಷ ಕೇಂದ್ರ ಸಮಾಜ ಮುಲಾಜಿಲ್ಲದೆ ಕರೆಯುತ್ತದೆ. ತೇಜಸ್ವಿಯವರು ತಮ್ಮ ಕೃತಿವೊಂದಕ್ಕೆ 'ಕಿರಗೂರಿನ ಗಯ್ಯಾಳಿಗಳು' ಎಂಬ ಶೀರ್ಷಿಕೆಯನ್ನೇ ನೀಡಿ ಮಹಿಳೆಯ ಮಾತಿನ ಲಕ್ಷಣವನ್ನು ಅಭಿವ್ಯಕ್ತಿಸಿದ್ದಾರೆ. ಮಹಿಳೆಯರ ಗಯ್ಯಾಳಿತನ ಬಳಕೆಯಾಗುವ ರೀತಿ ಆ ಕೃತಿಯಲ್ಲಿ ಕಾಣಸಿಕ್ಕರೂ ಲೇಖಕರು ಬಳಸಿರುವ ಗಯ್ಯಾಳಿ ಎಂಬ ಪದ ಮಹಿಳಾ ವಿರೋಧಿಯ ಭಾಷಾ ಬಳಕೆಯನ್ನು ಸೂಚಿಸುತ್ತದೆ. ಕಿರಗೂರಿನ ಗಯ್ಯಾಳಿಗಳು ಎಂಬ ಪದದಲ್ಲಿರುವ ಗಯ್ಯಾಳಿ ಎಂಬ ಪದಕ್ಕೆ ನಿಘಂಟಿನಲ್ಲಿ ದುಷ್ಟ ಸ್ವಭಾವದ ಹೆಂಗಸು, ಧೂರ್ತೆ ಎಂಬ ಅರ್ಥವಿದೆ. ಈ ಕೃತಿಯಲ್ಲಿನ ಮಹಿಳೆಯರು ಸುಶಿಕ್ಷಿತ, ವಿದ್ಯಾವಂತ ವಿಚಾರವಂತರಲ್ಲ.

ಇವರೆಲ್ಲಾ ಪಕ್ಕಾ ಗ್ರಾಮೀಣ ಅನಕ್ಷರಸ್ಥ ಮಹಿಳೆಯರು. ಇವರು ಪುರುಷ ಸಮಾಜದವರು ತಮ್ಮ ಮೇಲೆ ಎಸಗುವ ದಬ್ಬಾಳಿಕೆ, ಶೋಷಣೆಯನ್ನು, ಗಂಡಸರ ಲೈಂಗಿಕ ಅಸಮರ್ಥತೆಯನ್ನು ನಿರ್ಭಿಡೆಯಿಂದ ಪ್ರತಿಭಟಿಸುತ್ತಾರೆ. ಇದೇ ಅವರ ನಿಜವಾದ ಶಕ್ತಿ. ಆ ಶಕ್ತಿಯನ್ನು ತೇಜಸ್ವಿಯವರು ಗಯ್ಯಾಳಿತನವೆಂದು ಕರೆಯುತ್ತಾರೆ. "....... ಒಬ್ಬೊಬ್ರು ಹತ್ತು ಹತ್ತು ಹಡಿಯೊ ಹಂಗೆ ಮಾಡಬೇಕು. ಪುರುಸೊತ್ತೇ ಕೊಡಬಾರ್ದು. ಹಂಗಿದ್ರೆ ನೋಡಪ್ಪಾ ಈ ಹಾಳ್ಮುಂಡೇರನ್ನ ಹದ್‌ಬಸ್ತಿಗೆ ತರಬೌದು" (ಪೂರ್ಣಚಂದ್ರ ತೇಜಸ್ವಿ, ಕಿರಗೂರಿನ ಗಯ್ಯಾಳಿಗಳು, ೨೦೦೬, ಪುಟ ೧೫) ಎಂದು ಸಿದ್ಧನು ಮಹಿಳೆಯನ್ನು ನಿಯಂತ್ರಣಕ್ಕೆ ಒಳಪಡಿಸಬಹುದಾದ ಉಪಾಯ ಹೇಳುತ್ತಾನೆ. ತಾಯ್ತನ ಎನ್ನುವುದು ಮಹಿಳೆಯರನ್ನು ಪುರುಷರು ಶೋಷಿಸುವ ಮಾರ್ಗವಾಗಿದೆ. ಹೆರುವ ಯಂತ್ರವನ್ನಾಗಿಸಿ ಮಹಿಳೆಯರನ್ನು ಹದ್ದುಬಸ್ತಿನಲ್ಲಿಡುವ ಪುರುಷ ವ್ಯವಸ್ಥೆಯ ಅನಾವರಣ ಇಲ್ಲಿ ಆಗಿದೆ.

ಹೆಣ್ಣಿನ ದೈಹಿಕ ಸೌಂದರ್ಯವನ್ನು ಭಾಷೆಯ ಮೂಲಕ ಹಿಡಿಯ ಹೊರಟ ನವ್ಯ ಲೇಖಕರು ಆ ಭಾಷೆ ಅಶ್ಲೀಲವೆನಿಸುವಂತೆ ಬಳಸಲು ಮುಂದಾದರು. ಮಹಿಳೆಯ ನುಣುಪಾದ ಮಾಂಸಲ, ಬೆತ್ತಲೆ ತೊಡೆ, ಮೊಲೆ ಇವೆಲ್ಲಾ ಚಿತ್ತಾಲ, ಲಂಕೇಶ್, ಅನಂತಮೂರ್ತಿಯವರ ಕಥನ ಸಾಹಿತ್ಯದಲ್ಲಿ ಸ್ಥಾನ ಗಿಟ್ಟಿಸಿದವು. "Do you know the girl with worlds most beautiful legs?" (ಕುಸುಮಾಕರ ದೇವರಗಣ್ಣೂರ, ನಾಲ್ಕನೆಯ ಆಯಾಮ, ೨೦೧೩, ಪುಟ ೧೧೬) ಎನ್ನುವ ಕುಸುಮಾಕರ ಮಾತಿಗೂ, ಚಂದ್ರಿ ಮತ್ತು ಪ್ರಾಣೇಶಚಾರ್ಯರ ಸಮಾಗಮದ ವಿಷಯವನ್ನು ವಿವರವಾಗಿ ಹೇಳುವ ಅನಂತ ಮೂರ್ತಿಯ ಮಾತಿಗೂ ಕೇವಲ ಭಾಷೆಯ ವ್ಯತ್ಯಾಸವಿದೆ ಅಷ್ಟೆ. ಕುಸುಮಾಕರು ಹೆಣ್ಣಿನ ದೈಹಿಕ ಸೌಂದರ್ಯವನ್ನು ಇಂಗ್ಲಿಷ್ ಭಾಷೆಯಲ್ಲಿ ಮಾಡಿದರೆ, ಅನಂತಮೂರ್ತಿಯವರು ಸವಿವರವಾಗಿ ಕನ್ನಡದಲ್ಲಿ ಬಿಚ್ಚಿಡುತ್ತಾರೆ. ಒಟ್ಟಾರೆ ಇವರೆಲ್ಲಾ ಹೆಣ್ಣಿನ ಸೌಂದರ್ಯವನ್ನು ಭಾಷೆಯ ಮೂಲಕ ಬೆತ್ತಲೆಗೊಳಿಸಿ ಲಿಂಗ ತಾರತಮ್ಯ ಮಾಡಿದ್ದಾರೆ. ದೈಹಿಕ ಸೌಂದರ್ಯ ಎನ್ನುವುದು ಹೆಣ್ಣಿಗೆ ಮಾತ್ರವೇ? ಅದು ಗಂಡಿಗಿರುವುದಿಲ್ಲವೇ? ಇರುವುದಾದರೆ ಗಂಡಿನ ದೈಹಿಕ ಸೌಂದರ್ಯ ವರ್ಣನೆ ಏಕಿಲ್ಲ? ಇರುವ ಹೆಣ್ಣಿನ ದೈಹಿಕ ಸೌಂದರ್ಯ ವರ್ಣನೆ ಅಷ್ಟು ಅಶ್ಲೀಲ ಏಕೆ? ಎಂಬಂತಹ ನಾನಾ ಪ್ರಶ್ನೆಗಳು ನಮ್ಮನ್ನು ಕಾಡುತ್ತವೆ. "ಸಮಸ್ತ ಮನುಕುಲವೇ ಗಂಡಾಗಿ ಬಿಟ್ಟಿವೆ. ಆತ ಹೆಣ್ಣನ್ನು, ಹೆಣ್ಣಿನ ಸ್ವಾಯತ್ತತೆಯಲ್ಲಿ ವಿವರಿಸದೆ, ತನಗೆ ಸಂಬಂಧಿಸಿದಂತೆ, ತನ್ನ ದೃಷ್ಟಿಕೋನಕ್ಕೆ ಅನುಗುಣವಾಗಿ ವ್ಯಾಖ್ಯಾನಿಸುತ್ತಾನೆ. ಹೆಣ್ಣು ಸ್ವತಂತ್ರ ವ್ಯಕ್ತಿಯಲ್ಲ. ಆಕೆಯ ಅಸ್ತಿತ್ವ ಗಂಡಸಿನ ಅಪ್ಪಣೆಯಲ್ಲಿದೆ. ಆದ್ದರಿಂದಲೇ

ಆಕೆಯನ್ನು ಲೈಂಗಿಕತೆ ಎನ್ನಲಾಗಿದೆ. ಅಂದರೆ ಅವಳು ಗಂಡಿಗೆ ಕಾಮದ ಜೀವ ಮಾತ್ರ, ಅವನ ದೃಷ್ಟಿಯಲ್ಲಿ ಆಕೆ ಕಾಮದ ಮುದ್ದೆ. ಆಕೆಯನ್ನೆಂದೂ ಆಕೆಗೆ ಸಂಬಂಧಿಸಿದಂತೆ ಇದುವರೆಗೆ ವ್ಯಾಖ್ಯಾನಿಸಲೇ ಇಲ್ಲ. ಆಕೆ ಬಹುಮಟ್ಟಿಗೆ ಕೇವಲ ಒಂದು ಆಕಸ್ಮಿಕ" (ಮನುಚಕ್ರವರ್ತಿ, ಉದ್ಧೃತ, ೨೦೦೫, ಪುಟ ೩) ಇಂತಹ ಮನೋಭಾವವು ಸುಪ್ತವಾಗಿ ವ್ಯವಸ್ಥೆಯಲ್ಲಿ ಹರಿದು ಬಂದುದರ ಪರಿಣಾಮವಾಗಿ ಮಹಿಳೆಯನ್ನು ಕುರಿತಾದ ಭಾಷೆಯು ಸಹ ಆಕೆಯನ್ನು ಅಸ್ತಿತ್ವ ರಹಿತಳಾಗಿ ಮಾಡಿತು.

'ಸಂಸ್ಕಾರ'ದ ಭಾಗೀರಥಿ, 'ಮೌನಿ'ಯ ಗೌರಮ್ಮ, 'ಪ್ರಸ್ತ'ದ ವೆಂಕಮ್ಮ ಮೊದಲಾದವರ ಮೂಲಕ ಅನಂತ ಮೂರ್ತಿಯವರು ಬ್ರಾಹ್ಮಣ ಸ್ತ್ರೀಯರು ರಸಹೀನರು ಎಂಬಂತೆ ಹೇಳಿದ್ದಾರೆ. ಬಚ್ಚಗಲ್ಲದ, ಬತ್ತಿದ ಎದೆಯ, ಬೇಳೆ ಹುಳಿ ವಾಸನೆ ಬರುವ ಬಾಯಿಯ, ಮೊಂಡು ಜಡೆಯ, ಸೊರಗಿದ ಮೊರೆಯ ಮುತ್ತೈದೆಯರು ಬ್ರಾಹ್ಮಣ ಮಹಿಳೆಯರು. ಆದರೆ 'ಪ್ರಶ್ನೆ'ಯ ಲಚ್ಚಿ, ನಂಜಿ 'ಸಂಸ್ಕಾರ'ದ ಚಂದ್ರಿ, ಬೆಳ್ಳಿ ಮೊದಲಾದ ಶೂದ್ರ ಮಹಿಳೆಯರು ಕೈಗೆ, ತೊಡೆಗೆ ಭರ್ತಿಯಾಗಿ ಸಿಗುವ, ಮರಳಿನಲ್ಲಿ ಮಣ್ಣಿನಲ್ಲಿ ಎಣೆಯಾಡುವ ಹಾವಿನಂತೆ ಹೊರಳಾಡುವಂತಹವರು. ಇವರು ರಸಬಾಳೆಯಂತೆ ರಸವತ್ತಾಗಿರುವಂತೆ ಅನಂತ ಮೂರ್ತಿಯವರು ವರ್ಣಿಸಿದ್ದಾರೆ. ಈ ವರ್ಣನೆಗಳಲ್ಲಿ ಅವರು ಬಳಸುವ ಭಾಷೆ ಶೈಲಿ ಮಹಿಳಾ ವಿರೋಧಿಯಾಗಿರುತ್ತದೆ. ಬೇರೆ ನವ್ಯ ಲೇಖಕರರಿಗಿಂತ ತುಸು ಹೆಚ್ಚು ಎನಿಸುವ ಹೆಣ್ಣಿನ ದೈಹಿಕ ಸೌಂದರ್ಯದ ವರ್ಣನೆಯನ್ನು ಇವರಲ್ಲಿ ಗಮನಿಸಬಹುದಾಗಿದೆ.

### ೯.೭. ಜೀವ ವಿರೋಧಿತನದ ಆಚರಣೆ ಮತ್ತು ಮಹಿಳೆಯರು :

ಸಾಮಾಜಿಕ ವ್ಯವಸ್ಥೆಯಲ್ಲಿರುವ ಅಂಧ ಆಚರಣೆಗಳು ಮಹಿಳೆಯ ವೈಯಕ್ತಿಕ ಬದುಕನ್ನು ಸರ್ವನಾಶ ಮಾಡುವುದನ್ನು ನವ್ಯ ಲೇಖಕರು ಗಮನಿಸಿದ್ದಾರೆ. ಕೆಚ್ಚಲು ಬತ್ತಿದ ಹಸುವಿನಂತೆ ಯಾವುದೇ ಲೈಂಗಿಕ ವಾಂಛೆಗಳೂ ಇಲ್ಲದ 'ಪ್ರಸ್ತ' ಕತೆಯ ಸೀತಕ್ಕನನ್ನು ವ್ಯವಸ್ಥೆ 'ಪ್ರಸ್ತ' ಎನ್ನುವ ಆಚರಣೆ ಮೂಲಕ ಶೋಷಿಸಲು ಮುಂದಾಗುತ್ತದೆ ಎಂಬುದನ್ನು ಅನಂತಮೂರ್ತಿಯವರು ಅನಾವರಣ ಮಾಡುತ್ತಾರೆ. ಅದೇ ರೀತಿ ಅನಂತ ಮೂರ್ತಿಯವರು 'ಘಟಶ್ರಾದ್ಧ' ಎಂಬ ಕತೆಯಲ್ಲಿ ಸಣ್ಣ ವಯಸ್ಸಿನಲ್ಲಿ ಗಂಡನನ್ನು ಕಳೆದ, ಕೊಂಡಿದ್ದ ಯಮುನಕ್ಕನ ಲೈಂಗಿಕ ತುಡಿತಕ್ಕೆ ಪ್ರತಿಯಾಗಿ 'ಶ್ರಾದ್ಧ' ಎನ್ನುವ ಆಚರಣೆಯನ್ನು ವ್ಯವಸ್ಥೆ ಯಮುನಕ್ಕನ ವಿರುದ್ಧ

ನಡೆಸುತ್ತದೆ. ಇದೇ ಕಥೆಯಲ್ಲಿ ಯಮುನಕ್ಕಳ ಗರ್ಭಪಾತದ ವಿವರಗಳು ಮಹಿಳಾ ಜೀವ ವಿರೋಧಿ ಅಂಶಗಳ ಕಡೆಗೆ ನಮ್ಮ ಗಮನವನ್ನು ಸೆಳೆಯುತ್ತದೆ.

"ಅಲ್ಲಿ ಯಮುನಕ್ಕನನ್ನು ಬೆತ್ತಲೆಯಾಗಿ ಮಲಗಿಸಿದ್ದರು. ಉಚ್ಚೆ ಹೊಯ್ಯುವ ಜಾಗವನ್ನು ಮಾತ್ರ ಮುಚ್ಚಿದ್ದರು. ಹೊಟ್ಟೆಯ ಮೇಲೆ ಸಗಣಿಯನ್ನು ಮೆತ್ತಿ ಮೇಲೊಂದು ಹಣತೆಯಲ್ಲಿ ದೀಪವನ್ನು ಇಟ್ಟಿದ್ದರು. ನಾನು ನೋಡುತ್ತ ನಿಂತಂತೆ ಪರ್ಬು ಬಂದು ಬೋಗುಣಿಯನ್ನು ಅದರ ಮೇಲೆ ನಿಧಾನಕ್ಕೆ ಮುಚ್ಚಿ 'ಹಾಗೇ ಬಿಡಿ, ಎಳೆದುಕೊಳ್ಳಲಿ' ಎಂದ". (ಯು.ಆರ್.ಅನಂತಮೂರ್ತಿ, ಐದು ದಶಕದ ಕಥೆಗಳು, ೨೦೦೭, ಪುಟ ೧೯೮) ಹೀಗೆ ವಿವರವಾಗಿ ವಿಷಯವನ್ನು ಹೇಳ ಹೊರಟ ಅನಂತ ಮೂರ್ತಿಯವರು ಜೀವ ವಿರೋಧಿತನದ ಆಚರಣೆಗಳು ಮಹಿಳೆಯರನ್ನು ಶೋಷಿಸುವ ಬಗೆಯನ್ನು ಓದುಗರಿಗೆ ತಿಳಿಸುವ ಪ್ರಯತ್ನ ಮಾಡುತ್ತಾರೆ. ಪ್ರಸ್ತ, ಶ್ರಾದ್ಧ ಇಂತಹ ಆಚರಣೆಗಳು ದ್ವಿತೀಯ ದರ್ಜೆಯ ಪ್ರಜೆಯಾದ ಮಹಿಳೆಯ ಬದುಕನ್ನು ನರಕ ಸದೃಶವಾಗಿಸುವುದನ್ನು ತೋರಿಸುತ್ತವೆ. ಮೊದಲೆ ಒಂದಲ್ಲಾ ಒಂದು ಕಾರಣಕ್ಕಾಗಿ ಶೋಷಣೆಗೆ ಒಳಗಾಗಿದ್ದ ಮಹಿಳೆಯ ಬದುಕು ಇಂತಹ ಜೀವ ವಿರೋಧಿತನದ ಆಚರಣೆಗಳ ಮೂಲಕ ಮತ್ತಷ್ಟು ಅಸಹನೀಯವಾಗುತ್ತದೆ. ಬೇರೆ ನವ್ಯ ಲೇಖಕರು ಅನಂತ ಮೂರ್ತಿಯವರಂತೆ ಮಹಿಳೆಯ ಜೀವ ವಿರೋಧಿತನದ ಆಚರಣೆಯ ಬಗ್ಗೆ ತಮ್ಮ ಗಮನ ಕೇಂದ್ರೀಕರಿಸಲಿಲ್ಲ. ಬದಲಿಗೆ ಮಹಿಳೆಯರ ಸಮಸ್ಯೆ ಸಮಾಜ ಅವರ ಬಗ್ಗೆ ತಾಳಿರುವ ದಿವ್ಯ ನಿರ್ಲಕ್ಷ್ಯ ಇಂತಹ ವಿಷಯಗಳ ಬಗ್ಗೆ ಓದುಗರ ಗಮನ ಸೆಳೆಯುತ್ತಾರೆ. ಅನಂತಮೂರ್ತಿಯವರು ಈ ಮೇಲಿನ ವಿಷಯಗಳ ಜೊತೆಗೆ ಜೀವ ವಿರೋಧಿ ಆಚರಣೆಗಳು ಮಹಿಳೆಯ ಅಸಹನೀಯ ಬದುಕನ್ನು ಮತ್ತಷ್ಟು ಅಸಹನೀಯವಾಗಿಸುವ ಪ್ರಕ್ರಿಯೆಯನ್ನು ಮತ್ತು ಮಹಿಳೆಯ ಮೇಲಿನ ತೀವ್ರ ತರವಾದ ಶೋಷಣೆಯ ಸ್ವರೂಪವನ್ನು ಏಕಕಾಲಕ್ಕೆ ಅನಾವರಣ ಮಾಡುತ್ತಾರೆ.

**೯. ೮. ಸಾಂಕೇತಿಕತೆ ಮತ್ತು ಮಹಿಳೆಯರು :**

ವ್ಯಕ್ತಿಯ ಮಾನಸಿಕ ಅನುಭವಗಳನ್ನು ಸಂಪೂರ್ಣವಾಗಿ ಅರ್ಥೈಸುವ ಸಾಮರ್ಥ್ಯ ಸಂಕೇತಗಳಿ ಗಿರುವುದನ್ನು ನವ್ಯ ಸಾಹಿತಿಗಳು ಗಮನಿಸಿ ಅವುಗಳನ್ನು ತಮ್ಮ ಸಾಹಿತ್ಯ ಕೃತಿಗಳಲ್ಲಿ ತರುವ ಪ್ರಯತ್ನ ಮಾಡಿದರು. ಸಾಂಕೇತಿಕತೆಯು ಧ್ವನಿಸುವ ಅರ್ಥಗಳು ಕೃತಿಯ ಮೂಲ ವಿನ್ಯಾಸಕ್ಕೆ ಧಕ್ಕೆಯಾಗದಂತೆ ಕೃತಿಯ ಭಾಗವನ್ನಾಗಿಸುವ ಶೈಲಿಯನ್ನು ನವ್ಯ ಸಾಹಿತಿಗಳು ರೂಢಿಸಿಕೊಂಡರು. "ಮಾನಸಿಕ ವ್ಯಾಪಾರಗಳ ಸೂಕ್ಷ್ಮ ವಿಷಯಗಳನ್ನೆಲ್ಲ ಬೆದಕಿನೋಡಿ ಅವುಗಳಿಗೆ ಮೂರ್ತ ಸ್ವರೂಪ ಕೊಡುವುದಕ್ಕೆ

ಸಂಕೇತಗಳು ಅವಶ್ಯವಾದವು." (ಗಿರಡ್ಡಿ ಗೋವಿಂದರಾಜ, ಕನ್ನಡ ಸಣ್ಣ ಕಥೆಯಲ್ಲಿ ನವ್ಯತೆ, ೧೯೯೯, ಪುಟ ೩೭) ಹೀಗೆ ನವ್ಯ ಸಾಹಿತಿಗಳು ಹೇಳುವ ವಿಷಯಗಳ ಅರ್ಥವಂತಿಕೆಯನ್ನು ಶ್ರೀಮಂತಗೊಳಿಸುವ ಕೆಲಸವನ್ನು ಸಂಕೇತಗಳು ಸಮರ್ಥವಾಗಿ ನಿರ್ವಹಿಸಿದವು. ಸಾಂಕೇತಿಕತೆಯನ್ನು ಹೆಚ್ಚು ಸಮರ್ಥವಾಗಿ ಅನಂತಮೂರ್ತಿ, ಯಶವಂತ ಚಿತ್ತಾಲ, ಮೊದಲಾದವರು ಬಳಸಿಕೊಂಡರೂ ಮಹಿಳೆಯ ಮಾನಸಿಕ ಸ್ಥಿತಿಯ, ಸೂಕ್ಷ್ಮ ವಿಷಯಗಳನ್ನು ಸಾಂಕೇತಿಕತೆ ರೂಪದಲ್ಲಿ ಅನಂತಮೂರ್ತಿಯವರು ಸಮರ್ಥವಾಗಿ ತಂದಿದ್ದಾರೆ. ಹಾವು, ಹುಲಿ, ಪ್ರವಾಹ, ಸೂರ್ಯನ ಕುದುರೆ, ಪ್ರಕೃತಿ ಈ ಮೊದಲಾದವುಗಳನ್ನು ಮೂರ್ತಿಯವರು ಸಂಕೇತಗಳಾಗಿ ತಂದಿದ್ದಾರೆ. 'ತಾಯಿ' ಕತೆಯಲ್ಲಿ ಬರುವ ಹುಲಿ, 'ಘಟಶ್ರಾದ್ಧ' ಕತೆಯಲ್ಲಿ ಬರುವ ಹಾವು ಕ್ರಮವಾಗಿ ಅಬ್ಬಕ್ಕ, ಯಮುನಕ್ಕನ ಮಾನಸಿಕ ಸಂದಿಗ್ಧ ಸ್ಥಿತಿಯನ್ನು ವಿವರಿಸುವ ಪ್ರಯತ್ನ ಮಾಡುತ್ತದೆ. 'ದಿವ್ಯ' ಕಾದಂಬರಿಯಲ್ಲಿರುವ ಹಾವು, ನಾಯಿ, ಹುಲಿ ಮೊದಲಾದವುಗಳೆಲ್ಲಾ ಆಯಾ ಸಂದರ್ಭಗಳಲ್ಲಿ ಸಂಕೇತಗಳಾಗಿ ಬಳಕೆಯಾಗಿವೆ. ವನದೇವತೆಯಂತಿರುವ ಗೌರಿಗೆ ಕರಿಯನಂತಹ ಸಾಮಾನ್ಯನೂ ಕೃಷ್ಣನ ಹಾಗೆ ಕಾಣಿಸುವ ವಿವರಗಳು, 'ಸಂಸ್ಕಾರ' ಕಾದಂಬರಿಯ ದೂರ್ವಾಸಪುರಕ್ಕೆ ಬಂದ ಪ್ಲೇಗು ಕೇವಲ ಖಾಯಿಲೆಯಾಗಿರದೆ ಸಂಪ್ರದಾಯಸ್ಥ ಸಮಾಜದ ಪ್ರತಿಬಿಂಬವಾಗಿರುವುದು ಈ ಮೊದಲಾದವುಗಳೆಲ್ಲಾ ವ್ಯಕ್ತಿಯ ಅದರಲ್ಲೂ ಮಹಿಳೆಯ ಮಾನಸಿಕ ಸ್ಥಿತಿಯನ್ನು ಅಧ್ಯಯನ ಮಾಡುವುದಕ್ಕೆ ಪೂರಕವಾದ ಸಂಕೇತಗಳಾಗಿವೆ. ಮಹಿಳೆಯ ತಲ್ಲಣದ ಸಂದಿಗ್ಧತೆಗಳನ್ನು ಅಭಿವ್ಯಕ್ತಿಸಲು ಅನಂತ ಮೂರ್ತಿಯವರು ಸಂಕೇತಗಳನ್ನು ಬಳಸಿದ್ದಾರೆ. ಇದರಿಂದ ಬದುಕಿನ ಕೆಲವೊಂದು ಸೂಕ್ಷ್ಮಗಳನ್ನು ಅರಿಯಲು ಸಾಧ್ಯವಾಗುತ್ತದೆ.

ಚಿತ್ತಾಲರ 'ಅಹಲ್ಯೆ' ಕತೆಯಲ್ಲಿ ಬರುವ ನಾಯಿಯ ಸಂಕೇತ ಅವಳ ದುರದೃಷ್ಟಕ್ಕೊಂದು ಮುನ್ಸೂಚನೆಯಂತೆ ಅಭಿವ್ಯಕ್ತವಾಗಿದೆ. ಅವಳ ಬದುಕಿನಲ್ಲಿ ನಡೆದ ಎರಡು ಅನಾಹುತಗಳ ಘಟನೆಗಳ ಸಂದರ್ಭದಲ್ಲೂ ಕಪ್ಪು ನಾಯಿ ಆಕೆಯ ಕನಸಿನಲ್ಲಿ ಕಾಣಿಸಿಕೊಳ್ಳುತ್ತದೆ. ಮೊದಲ ಸಲ ಬಂದ ಕೆಲವೇ ದಿನಗಳಲ್ಲಿ ಅವಳ ಮದುವೆ ನಡೆದು ಗಂಡ ಓಡಿ ಹೋಗುತ್ತಾನೆ. ಎರಡನೇ ಸಲ ಅಂಥ ಕನಸು ಬಿದ್ದ ಮರುದಿನದ ರಾತ್ರಿ ಅಮ್ಮನಿಲ್ಲದ ಸಂದರ್ಭದಲ್ಲಿ ಆಕೆ ಕೀರ್ತನಕಾರನ ಜೊತೆ ಬೆರೆಯುತ್ತಾಳೆ ಆದರೆ ಆತ ಮರುದಿನ ಓಡಿಹೋಗುತ್ತಾನೆ. ಹೀಗೆ ಈ ಎರಡೂ ಸಂದರ್ಭದಲ್ಲಿಯೂ ಕಪ್ಪು ನಾಯಿಯ ಸಂಕೇತ ಅಹಲ್ಯೆಯ ಬಾಳಿಗೆ ದುರಂತದ ಮುನ್ಸೂಚನೆಯಾಗಿದೆ. ಕೊನೆಗೆ ದುರಂತದ ನೆನಪು ವರ್ತಮಾನದಲ್ಲಿ ಭಯವಾಗಿ ಕಾಡಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ಚಿತ್ತಾಲ ಕಥನ ಸಾಹಿತ್ಯವನ್ನು ಗಮನಿಸಿದರೆ ಅವರ ಕೃತಿಗಳ ಶೀರ್ಷಿಕೆಯಿಂದ ಹಿಡಿದು ಅಲ್ಲಿನ ಪಾತ್ರಗಳ ಹೆಸರು, ಅವರ ಮಾತುಗಳು ಸಾಂಕೇತಿಕತೆಯಿಂದ ಕೂಡಿವೆ. ಪುರುಷೋತ್ತಮ ಜಾನಕಿ, ಸೀತೆ, ಸಾವಿತ್ರಿ, ಸರಸ್ವತಿ, ಲಕ್ಷ್ಮಿ, ರೋಹಿಣಿ ಈ ಮೊದಲಾದ ಹೆಸರುಗಳೆಲ್ಲ ಪೌರಾಣಿಕ ಪ್ರತಿಮೆಗಳ ಸ್ಥಾನ ಪಡೆಯುತ್ತವೆ. "ಗರುಡನಪ್ಪಾ ನೀನು! ಪಕ್ಕ ಕತ್ತರಿಸಿ ಬಿದ್ದ ಗುಬ್ಬಿಯ ಹಾಗೆ ತೆವಲ ಬೇಡ. ಗರಿ ಬಿಚ್ಚು. ನೆಗೆ ! (ಯಶವಂತ ಚಿತ್ತಾಲ, ಪುರುಷೋತ್ತಮ, ೨೦೦೬, ಪುಟ ೩೮೮) ಇಂತಹ ಮಾತು ಕಾದಂಬರಿಯ ಸಾಂಕೇತಿಕತೆಯನ್ನು ಸಾರುತ್ತದೆ. ಇವರ 'ಮೂರು ದಾರಿಗಳು' ಕಾದಂಬರಿಯ ನಿರ್ಮಲೆ ಒಂದು ಪ್ರತಿಮಾತ್ಮಕ ಹೆಸರಾಗಿದೆ. ನಿರ್ಮಲೆ ಎಂಬ ಪದ ಪರಿಶುದ್ಧಳು ಎನ್ನುವ ಅರ್ಥ ನೀಡುತ್ತದೆ. ಆದರೆ ಕೃತಿಯು ನಿರ್ಮಲೆ ಪರಿಶುದ್ಧಳು ಅಲ್ಲ ಎನ್ನುವ ಸುದ್ದಿಯೇ ಕಾದಂಬರಿಯ ಪ್ರಧಾನ ವಾಹಕವಾಗಿದೆ. ಚಿತ್ತಾಲರು ವ್ಯಕ್ತಿಯ ಸಾವು, ಭಯ, ಲೈಂಗಿಕ ಪ್ರಜ್ಞೆ, ಪಾಪಪ್ರಜ್ಞೆಯಂತಹ ಬದುಕಿನ ಸಂಕೀರ್ಣತೆಗಳನ್ನು ವಿವರಿಸುವ ಸಲುವಾಗಿ ಹಾವು, ಮಂಗ, ಕತ್ತಲೆ ಮೊದಲಾದ ಸಂಕೇತಗಳನ್ನು ಬಳಸಿದ್ದಾರೆ. ನವ್ಯ ಬರಹಗಾರನ ಉದ್ದೇಶ ಒಂದು ಅನುಭವವನ್ನು ವರ್ಣಿಸುವುದಿಲ್ಲ. ಬದಲಿಗೆ ಆ ಅನುಭವದ 'ಎಕ್ಸ್‌ಪ್ಲೋರೇಷನ್' ಅಂದರೆ ಆ ಅನುಭವದ ವಿವಿಧ ಸ್ತರಗಳನ್ನು ಬಿಡಿಸಿ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುವುದು. ಈ ಪ್ರಯತ್ನಕ್ಕೆ ಭಾಷೆ, ಸಂಕೇತ, ಪ್ರತಿಮೆ ಈ ಮೊದಲಾದವು ಅನಿವಾರ್ಯವಾಗುತ್ತದೆ. ಇವುಗಳನ್ನು ಚಿತ್ತಾಲರು ಸಮರ್ಥವಾಗಿ ಬಳಸಿಕೊಂಡಿದ್ದಾರೆ.

ಸ್ವಾತಂತ್ರೋತ್ತರದ ಸಂದರ್ಭದಲ್ಲಿ ಈ ಹಿಂದೆ ಭಾರತದಲ್ಲಿನ ಆದರ್ಶವು ಮರೆಯಾಗಿ ಮನುಷ್ಯನ ಜೀವನದಲ್ಲಿ ಹಿಂದೆ ಇಲ್ಲದ ಗೊಂದಲಗಳು ಮೂಡಿತು ನಗರೀಕರಣವು ಹೊಸ ಜೀವನ ಶೈಲಿ ಮನುಷ್ಯ ಬದುಕನ್ನು ಪ್ರವೇಶಿಸಿತು. ಸಮಾಜದಲ್ಲಾದ ಬದಲಾವಣೆ ಸಾಹಿತ್ಯದಲ್ಲೂ ಪ್ರತಿಬಿಂಬಿತವಾಗ ತೊಡಗಿತು. ಕನ್ನಡ ಸಾಹಿತ್ಯದ ಈ ಕಾಲಘಟ್ಟದ ಬರಹಗಾರರು ಆಧುನಿಕತೆ ಪ್ರಭಾವಕ್ಕೆ ಒಳಗಾದವರು, ತಮ್ಮ ಕೃತಿಗಳಲ್ಲೂ ಅಂತಹ ಆಧುನಿಕತೆಯ ಅಂಶಗಳನ್ನು ಸೃಷ್ಟಿಸಿದರು. ಗೋಪಾಲಕೃಷ್ಣ ಅಡಿಗ, ಅನಂತಮೂರ್ತಿ, ಲಂಕೇಶ್ ಮೊದಲಾದ ನವ್ಯಸಾಹಿತಿಗಳ ತಮ್ಮ ಜಾತಿ, ಧಾರ್ಮಿಕ, ಆಚರಣೆಗಳ ಮೂಢತೆಯನ್ನು ಪ್ರಶ್ನಿಸುತ್ತಾರೆ. ಶಾಂತಿನಾಥ ದೇಸಾಯಿ, ಯಶವಂತ ಚಿತ್ತಾಲ ಮೊದಲಾದ ನವ್ಯ ಲೇಖಕರು ತಮ್ಮ ತಮ್ಮ ಸಂಸ್ಕೃತಿಯಲ್ಲಿ ನಿಂತರೂ ಪಾಶ್ಚಾತ್ಯರ ಆಧುನಿಕ ಜೀವನ ಶೈಲಿಗೆ ಮಾರು ಹೋಗಿ ಅದನ್ನು ತಮ್ಮ ಕೃತಿಗಳಲ್ಲಿ ತರಲು ಪ್ರಯತ್ನಿಸಿದ್ದಾರೆ.

ವ್ಯಕ್ತಿ ಮೂಲದಿಂದ ಸಮಾಜವನ್ನು ಗ್ರಹಿಸುವ ಪ್ರಯತ್ನವನ್ನು ಇತರ ನವ್ಯಲೇಖಕರಂತೆ ಶಾಂತಿನಾಥ ದೇಸಾಯಿಯವರು ಮಾಡುತ್ತಾರೆ. ಮೌಢ್ಯವನ್ನು ಪ್ರಶ್ನಿಸಿ ಹೊಸ ಬಗೆಯ ನಂಬಿಕೆಯ ಬದುಕನ್ನು ನೀಡುವಲ್ಲಿ ದೇಸಾಯಿಯವರು ಪ್ರಯತ್ನಿಸಿದ್ದಾರೆ. ದೇಸಾಯಿಯವರ ಎಲ್ಲಾ ಕಾದಂಬರಿಗಳಲ್ಲೂ ಮಹಿಳೆ ಒಂದು ಪ್ರಮುಖ ಪಾತ್ರ ವಹಿಸುತ್ತಾಳೆ. ಕೌಟುಂಬಿಕ ವ್ಯವಸ್ಥೆ ಮತ್ತು ಸಾಮಾಜಿಕ ವ್ಯವಸ್ಥೆ ಈ ಎರಡು ಕಡೆ ಪುರುಷನಿಗೆ ಚೈತನ್ಯವನ್ನು ತುಂಬುವ ಕೆಲಸ ಮಹಿಳೆ ಮಾಡುತ್ತಾಳೆ. ಮಹಿಳೆಯು ದೇಸಾಯಿಯವರ ಕಥನ ಸಾಹಿತ್ಯದಲ್ಲಿ ಬದಲಾವಣೆಯನ್ನು ತರುವ ಮೂಲಕ ಪುರುಷನ ವಿಕಾಸಕ್ಕೆ ಕಾರಣಳಾಗುತ್ತಾಳೆ. ಈ ಕಾರಣಕ್ಕಾಗಿ ಕಾಮಿನಿ, ಮಾಧವಿ, ರಾಧಿಕೆ, ಲಿಝಿ ಈ ಮೊದಲಾದ ಮಹಿಳೆಯರು ಅಲ್ಲಿನ ಪುರುಷರಿಗಿಂತ ಈ ಮಹಿಳೆಯರು ಪ್ರಮುಖರು ಎನಿಸುತ್ತಾರೆ. ದೇಸಾಯಿಯವರ ಕಥನ ಸಾಹಿತ್ಯದ ಮಹಿಳೆಯರು ಪುರುಷರ ಜೊತೆ ಸಮಾನತೆಗೆ ಹಾತೊರೆದು, ಹೊಸ ದೃಷ್ಟಿ ಕೋನವನ್ನು ಬೆಳೆಸಿಕೊಂಡವರಾಗಿದ್ದಾರೆ.

ದೇಸಾಯಿಯವರ ಕಥನ ಸಾಹಿತ್ಯವು ಮಧ್ಯಮ ವರ್ಗದ ವಿದ್ಯಾವಂತ ಸಮುದಾಯದ ನಡುವೆ ಮೈತಳೆದಿದೆ. ನಗರ ಜೀವನದಲ್ಲಿನ ಅನುಭವ ಮತ್ತು ಸಮಸ್ಯೆಗಳಿಗೆ ಹೆಚ್ಚು ಪ್ರಾಧಾನ್ಯತೆಯನ್ನು ದೇಸಾಯಿಯವರು ನೀಡುತ್ತಾರೆ. ಇದಕ್ಕೆ ಅವರ ಇಂಗ್ಲಿಷ್ ವಿದ್ಯಾಭ್ಯಾಸ ಮತ್ತು ಮುಂಬೈ ಜೀವನ ಕಾರಣವಾಗಿದೆ. ಮನುಷ್ಯ ಸ್ವತಂತ್ರನಾಗಿದ್ದು, ವಿಚಾರಶೀಲ ಪ್ರಜ್ಞೆ ಬೆಳೆಸಿಕೊಂಡು, ನೈತಿಕ ಪ್ರಜ್ಞೆ ಉಳ್ಳವನಾಗಿರಬೇಕೆಂದು ಪ್ರತಿಪಾದಿಸುವ ನವಮಾನವತಾವಾದ ದಿಂದ ಪ್ರೇರೇಪಿತರಾದ ದೇಸಾಯಿಯವರು, ಅದನ್ನೇ ತಮ್ಮ ಸಾಹಿತ್ಯದಲ್ಲೂ ತಂದಿದ್ದಾರೆ. ಆದ್ದರಿಂದಲೇ ಮಹಿಳೆಯ ಮೇಲೆ ಆಗುವ ಶೋಷಣೆಯನ್ನು ದೇಸಾಯಿಯವರು ತಿರಸ್ಕರಿಸಿ, ಮಹಿಳೆ ಮತ್ತು ಪುರುಷರ ನಡುವಿನ ಅಂತರವನ್ನು ಹೋಗಲಾಡಿಸುವ ಪ್ರಯತ್ನ ಮಾಡುತ್ತಾರೆ. ನವಮಾನವತಾವಾದದ ಪ್ರಭಾವದಿಂದ ದೇಸಾಯಿಯವರು ಮಹಿಳೆಯನ್ನು ಮನುಷ್ಯಳನ್ನಾಗಿ ನೋಡಿ ಆಕೆಗೊಂದು ಉನ್ನತ ಸ್ಥಾನ ನೀಡಿದರು.

ಮಧ್ಯಮ ವರ್ಗದ ವಿದ್ಯಾವಂತ ಸಮುದಾಯದ ಮಹಿಳೆ ಮತ್ತು ಪುರುಷರ ಜೀವನ ಎಷ್ಟೇ ಆಧುನಿಕವಾಗಿದ್ದರೂ ಲೈಂಗಿಕ ವಿಷಯದಲ್ಲಿ ಇಲ್ಲಿನ ಪುರುಷ ಸಾಂಪ್ರದಾಯಿಕ ಮನೋಭಾವವನ್ನೇ ತಳೆದಿದ್ದಾನೆ. ಇದನ್ನು ವಿರೋಧಿಸುವ ದೇಸಾಯಿಯವರು ಇಂಥ ಸಂದರ್ಭಗಳಲ್ಲಿ ಮಹಿಳೆಯರು ಪ್ರತಿಭಟಿಸುವ ಧ್ವನಿಯನ್ನು ಪಡೆಯಬೇಕೆಂಬ ನೆಲೆಯನ್ನು ಅನಾವರಣಗೊಳಿಸುತ್ತಾರೆ. ಕೌಟುಂಬಿಕ ಸ್ತರದಲ್ಲಿ

ಪುರುಷನ ಬೇಜವಾಬ್ದಾರಿ ನಡವಳಿಕೆ, ಅನೈತಿಕತೆಯನ್ನು ಇಲ್ಲಿ ಮಹಿಳೆಯು ಪ್ರತಿಭಟಿಸುತ್ತಾಳೆ. ತನ್ನ ಮೇಲಾಗುವ ಇಂಥ ಶೋಷಣೆಯನ್ನು ಮಹಿಳೆಯು ವಿರೋಧಿಸುವ ಕಡೆಗೆ ಹೆಚ್ಚಿನ ಒತ್ತು ನೀಡುವ ದೇಸಾಯಿಯವರಿಗೆ ಇದು ಕೂಡ ನವಮಾನವತಾವಾದದ ಪ್ರೇರಣೆಯಾಗಿದೆ. ಒಂದು ಕಡೆ ಮಹಿಳೆಯರು, ಪುರುಷರಿಗೆ ಚೈತನ್ಯ ಶಕ್ತಿಯಾದರೆ ಮತ್ತೊಂದು ಕಡೆ ಮಹಿಳೆಯರು, ತಮ್ಮ ಮೇಲಾಗುವ ಶೋಷಣೆಯ ವಿರುದ್ಧ ಪ್ರತಿಭಟಿಸುವ ಶಕ್ತಿಯಾಗುತ್ತಾರೆ. ಈ ಕಾರಣಕ್ಕಾಗಿಯೇ ದೇಸಾಯಿಯವರ ಕಥನ ಸಾಹಿತ್ಯದಲ್ಲಿನ ಮಹಿಳೆಯರು ಮುಖ್ಯರೆನಿಸುತ್ತಾರೆ.

ದೇಸಾಯಿಯರ ಪ್ರಾದೇಶಿಕ ಹಿನ್ನೆಲೆ ಚಿತ್ತಾಲರಿಗೆ ಇದ್ದರೂ ಇವರಿಬ್ಬರ ಅನುಭವ ವಿಶಿಷ್ಟ ಮತ್ತು ಸಂಪೂರ್ಣ ಭಿನ್ನವಾಗಿದೆ. ಮಾಸ್ತಿಯವರಿಂದ ಸ್ಫೂರ್ತಿ ಪಡೆದು ಕಥೆಗಳನ್ನು ಬರೆಯಲು ಪ್ರಾರಂಭಿಸಿದ ಚಿತ್ತಾಲರು ಓದುಗನೊಂದಿಗೆ ನಿರಂತರವಾಗಿ ಸಂಭಾಷಣೆಯಲ್ಲಿ ತೊಡಗುವ ಪ್ರಕ್ರಿಯೆ ವಿಶಿಷ್ಟವಾಗಿದೆ. ದೇಸಾಯಿಯವರಿಗೆ ಇಂಗ್ಲಿಷ್ ವಿದ್ಯಾಭ್ಯಾಸ ಮತ್ತು ಮುಂಬೈ ಜೀವನ ಸಾಹಿತ್ಯ ರಚನೆಗೆ ಪ್ರೇರಣೆಯನ್ನು ಒದಗಿಸಿದಂತೆ ಚಿತ್ತಾಲರಿಗೆ ಅವರ ಬಾಲ್ಯದ ಅನುಭವಗಳು, ಹನೆಹಳ್ಳಿ, ಅಪ್ಪನ ನೆನಪು, ಸಾವು ಈ ಮೊದಲಾದವು ಪ್ರೇರಣೆಯನ್ನು ಒದಗಿಸಿವೆ. ಚಿತ್ತಾಲರ ಸಾಹಿತ್ಯದ ಪ್ರಧಾನ ವಿಷಯಗಳಾದ ನಿರಪರಾಧಿಯ ಯಾತನೆ, ಸಾವು ಇವುಗಳ ಮೂಲ ನೆಲೆ ಹನೇಹಳ್ಳಿ, ಚಿತ್ತಾಲರ ಮತ್ತು ಅವರ ಅಪ್ಪನ ಸಂಬಂಧ ಹಾಗೂ ಮೃತ್ಯು ಪ್ರಜ್ಞೆಯಲ್ಲಿದೆ. ಸಾವು, ಕಾಮ, ಮುಗ್ಧತೆ ಮತ್ತು ಕ್ರೌರ್ಯ ಇವು ಚಿತ್ತಾಲರ ಸಾಹಿತ್ಯದ ಪ್ರಧಾನ ವಸ್ತು ವಿನ್ಯಾಸವಾಗಿದೆ. ಜೀವನದ ಬಗ್ಗೆ ಅದಮ್ಯವಾದ ಪ್ರೀತಿ ವ್ಯಕ್ತಪಡಿಸುವವಷ್ಟೇ ಸಹಜವಾಗಿ ಸಾವಿನ ಸತ್ಯವನ್ನು ಚಿತ್ತಾಲರು ಅನಾವರಣಮಾಡುತ್ತಾರೆ. ಸಾವನ್ನು ಕೂಡ ಕಲಾವಂತಿಕೆಯ ಚೌಕಟ್ಟಿನಲ್ಲಿ ಇಟ್ಟು ನೋಡುವ ಚಿತ್ತಾಲರು ಇತರ ನವ್ಯ ಲೇಖಕರಿಗಿಂತ ಭಿನ್ನರಾಗಿ ನಿಲ್ಲುತ್ತಾರೆ.

ಚಿತ್ತಾಲರ 'ಪುರುಷೋತ್ತಮ' ಕಾದಂಬರಿಯ ಸಾವಿತ್ರಿಯಲ್ಲಿ ಅದಮ್ಯವಾದ ತಾಯ್ತನದ ತುಡಿತಗಳು ಕಾಣಿಸಿಕೊಂಡಿವೆ. ಪುರುಷೋತ್ತಮನು ಸಾವಿತ್ರಿಯನ್ನು ಹೆತ್ತ ಮಗನಾಗದಿದ್ದರೂ ಯಾವುದಕ್ಕೂ ಕೊರತೆಯಾಗದಂತೆ ಆತನನ್ನು ಆಕೆ ಬೆಳೆಸಿದ್ದಾಳೆ. ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಾದ ಪುರುಷೋತ್ತಮನನ್ನು ಸಾಕಿ ಸಲಹುವುದಕ್ಕಷ್ಟೇ ಅವಳ ಪಾತ್ರ ಸೀಮಿತವಾಗಿಲ್ಲ. ಮಾತೃತ್ವವನ್ನು ತೋರಿಸುವ ತಾಯಿಯಾಗಿ ಮಾತ್ರವಲ್ಲದೆ ಇಲ್ಲಿ ಸಾವಿತ್ರಿ ಸಂದಿಗ್ಧ ಹಾಗೂ ಸಂಕಟದ ಸಮಯದಲ್ಲಿ ತೆಗೆದುಕೊಳ್ಳುವ ದಿಟ್ಟ ನಿರ್ಧಾರವು ಓದುಗರ ಗಮನ ಸೆಳೆಯುತ್ತದೆ. ಬಿಕ್ಕಟ್ಟಿನ

ಸಂದರ್ಭದಲ್ಲಿ ಪುರುಷೋತ್ತಮನ ಬೆಂಗಾವಲಾಗಿ ಸಾವಿತ್ರಿ ನಿಲ್ಲುತ್ತಾಳೆ. ಅದೇ ರೀತಿ ಸೀತೆ, ಕಲಾವತಿ, ಕಲ್ಯಾಣಿ, ಮೀನಾಕ್ಷಿಯರನ್ನು ಮಾನಸಿಕವಾಗಿ ಗಟ್ಟಿಗೊಳಿಸುವ ಕೆಲಸವನ್ನು ಆಕೆ ಮಾಡುತ್ತಾಳೆ. "ಅಮ್ಮ! ನೀನು ನಿಜಕ್ಕೂ ಗ್ರೇಟ್", (ಯಶವಂತ ಚಿತ್ತಾಲ, ಪುರುಷೋತ್ತಮ, ೨೦೦೬, ಪುಟ ೩೮೯) "ಇಷ್ಟು ಮುಂದುವರಿದ ವಿಚಾರಗಳ ಹೆಣ್ಣು ನೀನು" (ಯಶವಂತ ಚಿತ್ತಾಲ, ಪುರುಷೋತ್ತಮ, ೨೦೦೬, ಪುಟ ೩೯೩) ಎನ್ನುವ ಮಾತುಗಳಲ್ಲಿಯೇ ಸಾವಿತ್ರಿಯ ವ್ಯಕ್ತಿತ್ವವನ್ನು ಗುರುತಿಸಬಹುದಾಗಿದೆ. ಪುರುಷೋತ್ತಮ ಕಾದಂಬರಿಯ ನಾಯಕ ಪುರುಷೋತ್ತಮನಾದರೂ ವಾಸ್ತವದಲ್ಲಿ ಸಾವಿತ್ರಿ ಆ ಸ್ಥಾನವನ್ನು ತುಂಬುತ್ತಾಳೆ ಸಾವಿತ್ರಿ ಮೂಲಕ ಚಿತ್ತಾಲರು ಮಾತೃತ್ವದ ಪರಿಕಲ್ಪನೆಗೆ ವಿಶಿಷ್ಟ ಆಯಾಮವನ್ನು ನೀಡಿದ್ದಾರೆ.

ಪುರುಷ ಪ್ರಧಾನ ಸಮಾಜದಲ್ಲಿ ಶೋಷಣೆಗೆ ಒಳಗಾಗಿರುವ ಮಹಿಳೆ ಸೂಕ್ಷ್ಮ ಸಂವೇದನೆಯುಳ್ಳ ಚಿತ್ತಾಲರಿಂದ ಸಹಾನುಭೂತಿ ಗಿಟ್ಟಿಸುತ್ತಾಳೆ. ಮೂರು ದಾರಿಗಳು ಕಾದಂಬರಿಯನ್ನು ವಿಮರ್ಶೆ ಮಾಡುತ್ತಾ ಜಿ.ಎಸ್.ಆಮೂರ್ ಹೇಳಿದ "ಸಮಾಜ ಈ ಕಾದಂಬರಿಯಲ್ಲಿ ಖಳನಾಯಕನ ಸ್ಥಾನದಲ್ಲಿದೆ" ಎಂಬ ಮಾತು ಕೇವಲ ಕಾದಂಬರಿಗೆ ಮಾತ್ರ ಸೀಮಿತವಾಗಿಲ್ಲ. ಬದಲಿಗೆ ಅವರ ಕಥನ ಸಾಹಿತ್ಯದ ಎಲ್ಲಾ ಕೃತಿಗಳಿಗೂ ಅನ್ವಯವಾಗುತ್ತದೆ. ಸಮಾಜ ಯಾವತ್ತಿಗೂ ಮಹಿಳೆಯ ಪಾಲಿಗೆ ಖಳನಾಕನಾಗಿರುತ್ತದೆ. ಮಹಿಳೆಯ ಬದುಕನ್ನು ಅಸಹನೀಯ ಮಾಡಿದ ಸಮಾಜದ ಬಗ್ಗೆ ಸಿಟ್ಟನ್ನು ನಿಗ್ರಹಿಸಿಕೊಂಡಿರುವ ಚಿತ್ತಾಲರು ಆ ಮಹಿಳೆಯರ ಬಗ್ಗೆ ತಮ್ಮ ಸಹಾನುಭೂತಿ ವ್ಯಕ್ತಪಡಿಸುತ್ತಾರೆ. ಆಬೋಲೀನ, ನಿರ್ಮಲೆ, ಜಾನಕಿ ಈ ಕಾರಣಕ್ಕಾಗಿ ಮತ್ತೆ ಮತ್ತೆ ಕಾಡುತ್ತಾರೆ. ಸಮಾಜದ ಸ್ತ್ರೀ ವಿರೋಧಿ ಧೋರಣೆ ವಿರುದ್ಧ ಹೋರಾಡುತ್ತಲೇ ತನ್ನತನವನ್ನು ಸ್ಥಾಪಿಸಿಕೊಳ್ಳಲು ಹೆಣಗಾಡುವ ಮಹಿಳೆಯರು ಚಿತ್ತಾಲರ ಕಥನ ಸಾಹಿತ್ಯದಲ್ಲಿ ಕಾಣಿಸುತ್ತಾರೆ. ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಸಾಧ್ಯವಾಗದೆ ಹೋದಾಗ ಆತ್ಮಹತ್ಯೆ ಮೂಲಕವಾದರೂ ತಮ್ಮ ಅಸ್ತಿತ್ವವನ್ನು ತೋರಿಸಿಕೊಳ್ಳುತ್ತಾರೆ. ಸಮಾಜದ ಕ್ರೌರ್ಯವನ್ನು ಬಿಂಬಿಸುತ್ತಲೇ ಅದರಲ್ಲಿ ನಲುಗಿ ಹೋಗುವ ಮಹಿಳೆಯರನ್ನು ಮಾರ್ಮಿಕವಾಗಿ ತೋರಿಸಿದ್ದಾರೆ. ಚಿತ್ತಾಲರ ಕಥನ ಸಾಹಿತ್ಯದಲ್ಲಿನ ಮಹಿಳೆಯರು ಓದುಗರಲ್ಲಿ ಸಹಾನುಭೂತಿ ಹುಟ್ಟು ಹಾಕುತ್ತಾರೆ. ಇದು ಚಿತ್ತಾಲರ ಯಶಸ್ಸನ್ನು ತೋರಿಸುತ್ತದೆ.

ಬ್ರಾಹ್ಮಣ ಸಮಾಜದಲ್ಲಿರುವ ಮನುಷ್ಯ ವಿರೋಧಿ ಧೋರಣೆಯನ್ನು ಬಲು ನಿಷ್ಠುರ ನೆಲೆಯಲ್ಲಿ ಅನಂತಮೂರ್ತಿಯವರು ಗಮನಿಸುತ್ತಾರೆ. ಇವರ ಕಥನ ಸಾಹಿತ್ಯದಲ್ಲಿ

ಬ್ರಾಹ್ಮಣ ಸಮಾಜವನ್ನು ವಿಮರ್ಶೆಗೆ ಒಳಪಡಿಸಲಾಗಿದೆ. ದೇಸಾಯಿ ಮತ್ತು ಚಿತ್ತಾಲರ ಕಥನ ಸಾಹಿತ್ಯದ ಮಹಿಳೆಯರು ಪುರುಷರಿಗೆ ಸ್ಫೂರ್ತಿಯ ನೆಲೆಯಾಗುತ್ತಾರೆ. ಆದರೆ ಅಂತಹ ಮಹಿಳೆಯರನ್ನು ಅನಂತಮೂರ್ತಿಯವರ ಕಥನ ಸಾಹಿತ್ಯದಲ್ಲಿ ನಾವು ಕಾಣಲು ಸಾಧ್ಯವಿಲ್ಲ. ಇವರ ಸಾಹಿತ್ಯದಲ್ಲಿ ಮಹಿಳೆ ಬಹುತೇಕವಾಗಿ ಭೋಗದ ವಸ್ತುವಾಗಿದ್ದಾಳೆ. ಇಲ್ಲಿನ ಪುರುಷರು ಮದುವೆಯಾಗಿದ್ದರೂ ಬೇರೆ ಹೆಣ್ಣುಗಳನ್ನು ಅದರಲ್ಲೂ ಶೂದ್ರ ಹೆಣ್ಣುಗಳನ್ನು ತಮ್ಮ ಲೈಂಗಿಕ ತೃಷೆಗಾಗಿ ಬಳಸಿಕೊಳ್ಳುತ್ತಾರೆ. ಅನಂತಮೂರ್ತಿಯವರು ಬ್ರಾಹ್ಮಣ ಸ್ತ್ರೀಯರನ್ನು ಪುಂಖಾನುಪುಂಖವಾಗಿ ದೈಹಿಕ ಸೌಂದರ್ಯದ ಅಡಿಯಲ್ಲಿ ಅನಾವರಣ ಮಾಡುತ್ತಾರೆ. ಆಗೆಲ್ಲಾ ಹೆಣ್ಣು ಗಂಡಿನ ಪಾಲಿಗೆ ಲೈಂಗಿಕ ತೃಷೆ ತೀರಿಸುವ ಸಾಧನ ಎನ್ನುವ ಸಾಂಪ್ರದಾಯಿಕ ಸಮಾಜದ ಮಾತನ್ನೇ ಇವರು ಮತ್ತೆ ಪುನರುಚ್ಚರಿಸುತ್ತಿದ್ದಾರೆ ಎನಿಸುತ್ತದೆ. ಅತಿರೇಕ ಎನ್ನುವಷ್ಟರ ಮಟ್ಟಿಗೆ ಹೆಣ್ಣಿನ ದೈಹಿಕ ಸೌಂದರ್ಯದ ವಿವರಗಳು ಅನಂತಮೂರ್ತಿಯವರ ಕಥನ ಸಾಹಿತ್ಯದಲ್ಲಿ ಕಣ್ಣಿಗೆ ರಾಚುತ್ತವೆ. ಲೈಂಗಿಕ ಸ್ವಾತಂತ್ರ್ಯದ ಮನೋಭಾವವನ್ನು ಪಾಶ್ಚಿಮಾತ್ಯ ವಿದ್ಯಾಭ್ಯಾಸದಿಂದ ಬೆಳೆಸಿಕೊಂಡ ನವ್ಯ ಬರಹಗಾರರು ಸಾಂಪ್ರದಾಯಿಕ ಲೈಂಗಿಕ ಪ್ರಜ್ಞೆಯನ್ನು ಮೀರಲು ಪ್ರಯತ್ನಿಸಿದರು. ಆಗ ಮಹಿಳೆಯು ಪುರುಷರ ಲೈಂಗಿಕತೆಗಾಗಿ ಬಳಕೆಯಾದಳು. ಆಗ ಅವಳ ಅಸ್ತಿತ್ವ, ಮನಸ್ಥಿತಿ, ಸ್ವಾತಂತ್ರ್ಯ ಯಾವುದು ಗಣನೆಗೆ ಬಾರದೆ ಹೋಯಿತು. ಪುರುಷರ ಸಾಧನೆಗೆ ಮಹಿಳೆಯರು ಶೋಷಣೆಗೆ ಒಳಗಾದರು. ಪುರುಷರಿಗಿರುವ ಲೈಂಗಿಕ ಸ್ವಾತಂತ್ರ್ಯ ಮಹಿಳೆಯರಿಗೆ ಇಲ್ಲದಿರುವುದು, ಕೇವಲ ಪುರುಷರ ಲೈಂಗಿಕತೆಗೆ ಅನಿವಾರ್ಯವಾಗಿ ಬಳಕೆಯಾಗುವುದು ಈ ಮೊದಲಾದವು ಮಹಿಳೆಯರನ್ನು ಶೋಷಕರನ್ನಾಗಿಸಿದವು. ಅಷ್ಟೇ ಅಲ್ಲದೆ ಸಾಂಪ್ರದಾಯಿಕ ಸ್ತ್ರೀ ವಿರೋಧಿ ಧೋರಣೆ ಇಲ್ಲೂ ಕೂಡ ಮುಂದುವರಿದಂತಾಯಿತು.

ಅನಂತಮೂರ್ತಿಯವರ ಕಥನ ಸಾಹಿತ್ಯದಲ್ಲಿ ಮೂಡಿಬಂದ ಮಹಿಳಾ ಮಾದರಿಗಳನ್ನು ಗಮನಿಸಿದರೆ ಆಕೆಯ ವ್ಯಕ್ತಿತ್ವ ಆಕೆಯ ದೇಹದಲ್ಲಿದೆ ಎನಿಸುತ್ತದೆ. ಜೀವಂತವಾಗಿದ್ದ ಅಗ್ರಹಾರದ ಜನರಿಗೆ ನುಂಗಲಾರದ ತುತ್ತಾಗಿದ್ದ ನಾರಣಪ್ಪ ತಾನು ಸತ್ತಾಗಲೂ ಅಗ್ರಹಾರಕ್ಕೆ ಸಮಸ್ಯೆಯಾಗುತ್ತಾನೆ. ಆತನ ಸಾವಿನಿಂದ ಉಂಟಾದ ಸಮಸ್ಯೆಗೆ ಅಗ್ರಹಾರದ ಬ್ರಾಹ್ಮಣರು, ಕೊಡಲಾಗದ ಉತ್ತರವನ್ನು ಚಂದ್ರಿ ನೀಡುತ್ತಾಳೆ. ಶೂದ್ರ ಹೆಣ್ಣೊಬ್ಬಳು ಅಗ್ರಹಾರದ ಸಮಸ್ಯೆಗೆ ಉತ್ತರ ನೀಡುವುದು ಗಮನಾರ್ಹ ಸಂಗತಿಯಾಗಿದೆ. ಚಂದ್ರಿ ತನ್ನ ವ್ಯಕ್ತಿತ್ವ, ದಿಟ್ಟ ನಡೆಯಿಂದ ವಿದ್ವಾಂಸ ಪ್ರಾಣೇಶಚಾರ್ಯರಿಗಿಂತ ಹೆಚ್ಚಾಗಿ ಗಟ್ಟಿ ವ್ಯಕ್ತಿತ್ವವುಳ್ಳ ಹೆಣ್ಣಾಗಿ ಕಾದಂಬರಿಯನ್ನು ಆವರಿಸಿಕೊಳ್ಳುತ್ತಾಳೆ. ಆದರೆ ಈ ಸಂಗತಿ ಹೆಚ್ಚು ಪ್ರಖರಕ್ಕೆ ಬಾರದೆ ಆಕೆಯ ದೈಹಿಕ

ಸೌಂದರ್ಯ ಮತ್ತು ಪ್ರಾಣೇಶಚಾರ್ಯ ಈಕೆಯ ಸಮಾಗಮದ ಸಂಗತಿಗಳೇ ಅನಂತಮೂರ್ತಿಯವರಲ್ಲಿ ಮುಖ್ಯವಾಗಿದೆ. ಅಂತಹ ಸಂದರ್ಭಗಳಲ್ಲಿ ಇವರು ಸಾಂಪ್ರದಾಯಿಕ ಸಮಾಜದ ಪ್ರತಿನಿಧಿಯೆಂಬಂತೆ ಕಾಣಿಸಿಕೊಳ್ಳುತ್ತಾರೆ.

ಸಂಪ್ರದಾಯ ಆಧುನಿಕತೆ ಮತ್ತು ಶೂದ್ರ ಬ್ರಾಹ್ಮಣ ಈ ವಿಚಾರಗಳು ಅನಂತಮೂರ್ತಿಯವರ ಕಥನ ಸಾಹಿತ್ಯದ ಪ್ರಧಾನ ಧಾರೆಗಳಾಗಿವೆ. ಆಧುನಿಕ ಮನಸ್ಸಿನ ಮಹಿಳೆ, ಶೂದ್ರ ಮಹಿಳೆಯರು ಸಂಪ್ರದಾಯ ಮನಸ್ಸಿನ ಮತ್ತು ಬ್ರಾಹ್ಮಣ ಪುರುಷರಿಗಿಂತ ಹೆಚ್ಚು ಗಮನ ಸೆಳೆಯುತ್ತಾರೆ. ವ್ಯವಸ್ಥೆಯಲ್ಲಿ ಯಾವುದೂ ಸರಿಯಿಲ್ಲ ಎಂದು ತಿಳಿಯುವ ದ್ವಂದ್ವ ಮನಸ್ಸಿನ ನಾಯಕನ ಎದುರು ಬದುಕಿನ ಸಮಸ್ಯೆಯನ್ನು ಬಿಡಿಸಲು ಮುಂದಾಗುವ ಗೌರಿದೇಶಪಾಂಡೆ, ಶಾರದೆ, ಲಚ್ಚಿ, ಚಂದ್ರಿ ಈ ಮೊದಲಾದವರು ಓದುಗರ ಗಮನ ಸೆಳೆಯುತ್ತಾರೆ. ಆದರೂ ಕೊನೆಯಲ್ಲಿ ಇಂತಹ ಮಹಿಳೆಯರು ವ್ಯವಸ್ಥೆಯಲ್ಲಿ ನಾಯಕನ ಎದುರು ಗುರುತಿಸಿಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ. ದುರ್ಬಲ ಮನಸ್ಸಿನ ನಾಯಕ ಮಹಿಳೆಯನ್ನು ತನ್ನ ಸಾಧನೆಯ ದಾರಿಯಲ್ಲಿ ಮೆಟ್ಟಲಂತೆ ಬಳಸಿಕೊಂಡು ಕೊನೆಗೆ ಆಕೆಯನ್ನು ಇದ್ದು ಇಲ್ಲವಾಗಿಸುವ ತಂತ್ರವನ್ನು ಬಳಸುತ್ತಾನೆ. ಬಚ್ಚಗಲ್ಲದ, ಬತ್ತಿದ ಎದೆಯ, ಬೇಳೆ ಹುಳಿ ವಾಸನೆ ಬರುವ ಬಾಯಿಯ, ಮೊಂಡ ಜಡೆಯ ಸೊರಗಿದ ಮೋರೆಯ ಮುತ್ತೈದೆಯರು ಎಂದು ಬ್ರಾಹ್ಮಣ ಮಹಿಳೆಯರನ್ನು ಸೂಕ್ಷ್ಮವಾಗಿ ಗಮನಿಸಿದ ಅನಂತಮೂರ್ತಿಯ ಗೌರಿದೇಶಪಾಂಡೆ ಶಾರದೆ, ಚಂದ್ರಿ, ಲಚ್ಚಿಯಂತಹ ಮಹಿಳೆಯ ಸಾಧನೆಗಳನ್ನು ಉನ್ನತಿಕರಣಗೊಳಿಸುವುದೇ ಇಲ್ಲ.

ಅನಂತಮೂರ್ತಿಯವರ ಕಥನ ಸಾಹಿತ್ಯದಲ್ಲಿ ಬ್ರಾಹ್ಮಣ ಪರಿಸರ ಹಿನ್ನೆಲೆಯಾಗಿ ಬರುವುದರಿಂದ ಅವರಿಗೆ ಜನಾಂಗೀಯ ಮತ್ತು ಸಮುದಾಯದ ಪ್ರಜ್ಞೆ ನಿಕಟವಾಗಿದೆ ಎಂದು ತಿಳಿಯಬಹುದಾಗಿದೆ. ಬ್ರಾಹ್ಮಣರ ಮೌಲ್ಯ ಪ್ರಜ್ಞೆಯ ಅರ್ಥಹೀನತೆಯನ್ನು ಎತ್ತಿ ಹಿಡಿಯುವ ಅನಂತಮೂರ್ತಿಯವರು ಬ್ರಾಹ್ಮಣ ಮಹಿಳೆಯರಿಗಿಂತ ಶೂದ್ರ ಮಹಿಳೆಯರು ಬದುಕಿನ ಸಮಸ್ಯೆಯನ್ನು ಬಿಡಿಸುವುದರಲ್ಲಿ ಹೆಚ್ಚು ಸಮರ್ಥರೆನ್ನುವಂತೆ ಚಿತ್ರಿಸಿದ್ದಾರೆ ಬಾಲವಿಧವೆರಾಗಿದ್ದ ಲಕ್ಷ್ಮಿ, ಪಾರ್ವತಿ, ಯಮುನಕ್ಕನಂತಹ ಬ್ರಾಹ್ಮಣ ಮಹಿಳೆಯರು ಗುಪ್ತವಾಗಿ ತಮ್ಮ ದೈಹಿಕ ವಾಂಛೆಗಳನ್ನು ತೀರಿಸಿಕೊಳ್ಳಲು ಮುಂದಾಗುತ್ತಾರೆ. ಆದರೆ ಸಾಂಪ್ರದಾಯಿಕ ವ್ಯವಸ್ಥೆ ಎದುರು ಇವರ ಗುಪ್ತ ವ್ಯವಹಾರ ಬಯಲಾದಾಗ ಅದನ್ನು ಎದುರಿಸುವ ದಿಟ್ಟತನ ಅವರಲ್ಲಿ ಇಲ್ಲದೆ ಹೋಗುತ್ತದೆ. ಆದರೆ ಲಚ್ಚಿ, ಚಂದ್ರಿ, ಬೆಳ್ಳಿಯಂತಹ ಶೂದ್ರ ಮಹಿಳೆಯರು ನಿರ್ಭಯದಿಂದ ಮೇಲ್ಜಾತಿಯ

ಅಥವಾ ಮೇಲ್ವರ್ಗದ ಪುರುಷನ ಜೊತೆ ದೈಹಿಕ ಸಂಪರ್ಕ ಹೊಂದುತ್ತಾರೆ. ಇವರ ಸಂಪರ್ಕಕ್ಕೆ ಬಂದ ಮೇಲ್ಜಾತಿ ಅಥವಾ ಮೇಲ್ವರ್ಗ ಪುರುಷ ಧನ್ಯತೆಯನ್ನು, ಬದುಕಿನ ಸಾರ್ಥಕತೆಯನ್ನು ಹೊಂದುವಂತೆ ಬ್ರಾಹ್ಮಣ ಮಹಿಳೆಯ ಜೊತೆ ದೈಹಿಕ ಸಂಪರ್ಕ ಹೊಂದಿದ ಪುರುಷ ಸಾರ್ಥಕತೆ ಹೊಂದುವುದಿಲ್ಲ. ಶಂಕರಯ್ಯ, ಶಾಮಭಟ್ಟ, ಪ್ರಾಣೇಶಾಚಾರ್ಯ, ಸೀನಪ್ಪಯ್ಯ, ದುರ್ಗಾಭಟ್ಟ ಈ ಮೊದಲಾದ ಬ್ರಾಹ್ಮಣ ಪುರುಷರು, ತಮಗೆ ಮದುವೆಯಾಗಿದ್ದರೂ ಶೂದ್ರ ಮಹಿಳೆಯ ಸಂಬಂಧ ಬೆಳೆಸುತ್ತಾರೆ. ತಮ್ಮ ಹೆಂಡತಿಯರಿಂದ ಸಿಗದ ಸುಖವನ್ನು ಅವರು ಇಲ್ಲಿ ಅರಸಿ ಪಡೆಯುತ್ತಾರೆ. ವಯಸ್ಸಿನ ಸಹಜ ಆಸೆಯಿಂದ ಬ್ರಾಹ್ಮಣ ಮಹಿಳೆಯರು ಗುಪ್ತ ವ್ಯವಹಾರ ನಡೆಸಿದರೆ ಅದು ಅನೈತಿಕತೆ, ಶೂದ್ರ ಹೆಣ್ಣುಮಕ್ಕಳ ಜೊತೆ ಮದುವೆಯಾದರೂ ಸಂಬಂಧ ಇಟ್ಟುಕೊಳ್ಳುವುದು ಅನೈತಿಕತೆ ಅಲ್ಲ ಎಂಬಂತೆ ಚಿತ್ರಿಸಲಾಗಿದೆ. ತಮ್ಮ ಸಂಪರ್ಕಕ್ಕೆ ಬಂದ ಪುರುಷರಿಗೆ ಒಳಿತನ್ನೇ ಬಯಸುವ ಅವರ ಜೀವನದಲ್ಲಿ ಉತ್ಸಾಹ ತುಂಬುವ ಶೂದ್ರ ಮಹಿಳೆಯರು ಮತ್ತು ಬಾಲ ವಿಧವೆಯರಾಗಿ ಸಮಾಜದ ಕಣ್ಣು ತಪ್ಪಿಸಿ ತನ್ನ ಆಸೆ ಪೂರೈಸಿಕೊಳ್ಳುವ ಮೇಲ್ಜಾತಿಯ ಮಹಿಳೆಯರು ಇಬ್ಬರೂ ಅವರವರ ಸಂದರ್ಭಗಳಲ್ಲಿ ಪುರುಷನಿಂದ ಶೋಷಣೆಗೊಳಗಾದವರೇ ಆಗಿದ್ದಾರೆ. ಬ್ರಾಹ್ಮಣ ಜಾತಿಯೊಳಗಿನ ಜೀವ ವಿರೋಧಿ ಮೌಲ್ಯಗಳ ಅರ್ಥಹೀನಗಳನ್ನು, ಸಣ್ಣತನಗಳನ್ನು ಅದ್ಭುತವಾಗಿ ಹೊರಹಾಕುವ ಅನಂತಮೂರ್ತಿಯವರು ಮಹಿಳೆಯ ವಿಚಾರದಲ್ಲಿ ಸಂಪ್ರದಾಯವಾದಿಗಳಂತೆ ಆಕೆಯನ್ನು ಕಾಮದ ವಸ್ತುವಾಗಿಯೇ ನೋಡಿದ್ದಾರೆ.

ಬದುಕಿನ ಅನುಭವಗಳಿಗೆ ಅತ್ಯಂತ ನಿಷ್ಠುರವಾಗಿ ಪ್ರತಿಕ್ರಿಯೆ ನೀಡುವ ಲಂಕೇಶರು ಮಹಿಳೆಯನ್ನು ಸ್ವತಂತ್ರವಾಗಿ ಸೃಷ್ಟಿಸಿದ್ದಾರೆ. ಲಂಕೇಶರ ಸಮಕಾಲೀನ ನವ್ಯ ಲೇಖಕರು ಮಹಿಳೆಯನ್ನು ಪುರುಷನಿಗೆ ಪೂರಕವಾಗಿ ಬಳಸಿಕೊಳ್ಳುತ್ತಿದ್ದ ಸಂದರ್ಭದಲ್ಲಿಯೇ ಇವರು ಮಹಿಳೆಗೆ ಸ್ವತಂತ್ರ ಅಸ್ತಿತ್ವವನ್ನು, ವ್ಯಕ್ತಿತ್ವವನ್ನು ದೊರಕಿಸಿಕೊಟ್ಟರು. ಲಿಪ್‌ಸ್ಟಿಕ್, ಕಾಡಿಗೆಗಳಿಂದ ಕಂಗೊಳಿಸುವ ಮಹಿಳೆಯನ್ನು ಲಂಕೇಶ್‌ರವರು ಗೊಂಬೆಯಾಗಿ ನೋಡದೆ ಆಕೆಗೊಂದು ಗಟ್ಟಿಯಾದ ಅಸ್ತಿತ್ವವನ್ನು ಆರೋಪಿಸಿದರು. ಲಂಕೇಶರ ಕಥನ ಸಾಹಿತ್ಯದಲ್ಲಿ ಮಹಿಳೆ ಪುರುಷರ ದೌರ್ಜನ್ಯಗಳನ್ನು ಅರಿತು ಅದಕ್ಕೆ ಪ್ರತಿಯಾಗಿ ತನ್ನದೇ ಆದ ಪೆಟ್ಟನ್ನು ನೀಡುತ್ತಾಳೆ ಮತ್ತು ಗಂಡಿನ ಸಹಾಯವಿಲ್ಲದೆ ಸ್ವತಂತ್ರ ಬದುಕನ್ನು ಕಟ್ಟಿಕೊಳ್ಳುತ್ತಾಳೆ. ಸ್ವತಂತ್ರ ವ್ಯಕ್ತಿತ್ವದ ಮಹಿಳೆಯರಲ್ಲಿ ನಾವು ವಿದ್ಯಾವಂತ ಮತ್ತು ಅವಿದ್ಯಾವಂತ ಮಹಿಳೆಯರಿಬ್ಬರನ್ನು ಕಾಣಬಹುದಾಗಿದೆ. ಇವರಿಬ್ಬರು ತಮ್ಮದೇ ಆದ ಬದುಕಿನ ಚೌಕಟ್ಟಿನಲ್ಲಿ ಬರುವ ಸವಾಲುಗಳನ್ನು ಸಮರ್ಥವಾಗಿ ಎದುರಿಸಿ ಯಾವುದೇ ಭಯವಿಲ್ಲದೆ ಸ್ವತಂತ್ರ ಬದುಕನ್ನು ಕಟ್ಟಿಕೊಳ್ಳುತ್ತಾರೆ.

ಸಮಕಾಲೀನ ನವ್ಯ ಲೇಖಕರಿಗಿಂತ ಭಿನ್ನವಾದ ರೀತಿಯಲ್ಲಿ ಮಹಿಳೆಯನ್ನು ಕಂಡಿರುವ ಲಂಕೇಶರು ಮಹಿಳೆಗಿರುವ ಅದ್ಭುತವಾದ ಮಾನಸಿಕ ಶಕ್ತಿಯನ್ನು ಅನಾವರಣ ಮಾಡಿದ್ದಾರೆ. ಬದುಕಿನ ಸಮಸ್ಯೆ ಮತ್ತು ಮಹಿಳೆಯನ್ನು ಪ್ರತ್ಯೇಕವಾಗಿ ಕಾಣುತ್ತಿದ್ದ ಸಂದರ್ಭದಲ್ಲಿ ಲಂಕೇಶರು ಬದುಕಿನ ಸಮಸ್ಯೆಯನ್ನು ಮಹಿಳೆ ಹೇಗೆ ಬಿಡಿಸಬಲ್ಲಳು ಎಂಬುದನ್ನು ಅಭಿವ್ಯಕ್ತಿಸಿದರು. ಮಹಿಳೆಯ ಒಳಗಿರುವ ಅಭೂತವಾದ ಜೀವನೋತ್ಸಾಹವನ್ನು ಲಂಕೇಶರು ಅಭಿವ್ಯಕ್ತಿಸಿದ್ದಾರೆ. ಸ್ವತಂತ್ರವಾಗಿ ಆಲೋಚಿಸುವ, ಸ್ವತಂತ್ರವಾಗಿ ಬದುಕುವ ಮಹಿಳೆಯರು ಲಂಕೇಶ್‌ರ ಕಥನ ಸಾಹಿತ್ಯದಲ್ಲಿ ಕಾಣಸಿಗುತ್ತಾರೆ. ಸಾವಂತ್ರಿ, ರಂಗವ್ವ, ದೇವೀರಿ, ಈರವ್ವ, ಶ್ಯಾಮಲ, ಗೌರಿ ಇಂತಹ ಗಟ್ಟಿತನ ಇರುವ ಮಹಿಳೆಯರನ್ನು ಇತರ ನವ್ಯ ಲೇಖಕರಲ್ಲಿ ನಾವು ಕಾಣಲು ಸಾಧ್ಯವಿಲ್ಲ. ಪುರುಷನ ಸಣ್ಣತನ, ಮುಗ್ಧತೆ, ಪೊಳ್ಳುತನಗಳ ನಡುವೆ ಸ್ವತಂತ್ರ ಆಲೋಚನೆಯ, ಸ್ವತಂತ್ರ ಅಸ್ತಿತ್ವ ಇರುವ ಮಹಿಳೆ ಲಂಕೇಶರ ಕಥನ ಸಾಹಿತ್ಯದಲ್ಲಿ ನಿಜವಾದ ನಾಯಕನ ಸ್ಥಾನವನ್ನು ತುಂಬುತ್ತಾಳೆ.

ಪುರುಷನ ಲೈಂಗಿಕ ಪ್ರಜ್ಞೆಗೆ ಪೂರಕವಾಗಿ ಬಳಕೆಯಾಗುತ್ತಿದ್ದ ಮಹಿಳೆಯನ್ನು ನವ್ಯ ಲೇಖಕರು ನಿಜವಾದ ನವ್ಯ ಪ್ರಜ್ಞೆಯಲ್ಲಿ ನೋಡಲೇ ಇಲ್ಲ. ಆದರೆ ಲಂಕೇಶ್‌ರವರು ಮಹಿಳೆಯು ನವ್ಯ ಪ್ರಜ್ಞೆಯಲ್ಲಿ ನೋಡಲು ಪ್ರಯತ್ನಿಸಿದರು. ಮಹಿಳೆಯ ಸೌಂದರ್ಯ, ಆಕೆಯ ಸಿಡಿದೇಳುವ ಗುಣ ಎರಡನ್ನೂ ತಮ್ಮ ಕಥನ ಸಾಹಿತ್ಯದಲ್ಲಿ ಲಂಕೇಶರವರು ತರುತ್ತಾರೆ. ಅದರ ಜೊತೆಗೆ ಪುರುಷನ ನಾನತ್ವವು ಮಹಿಳೆಯ ಮುಂದೆ ಇಲ್ಲವಾಗುವುದನ್ನು ಅಭಿವ್ಯಕ್ತಿಸಿರುವ ಲಂಕೇಶರು ಈ ಕಾರಣಕ್ಕಾಗಿ ನವ್ಯ ಲೇಖಕರಲ್ಲಿ ಭಿನ್ನವಾಗಿ ನಿಲ್ಲುತ್ತಾರೆ. ಲಂಕೇಶ್‌ರವರ ಸಾಹಿತ್ಯ ರಚನೆಗೆ ಸಂದರ್ಭದಲ್ಲಿ ಸ್ತ್ರೀವಾದವನ್ನು ಕನ್ನಡ ಸಾಹಿತ್ಯ ಅಪ್ಪಿಕೊಳ್ಳಲು ಮುಂದಾಗಿತ್ತು. ಜೊತೆಗೆ ಭಾರತೀಯ ಸಮಾಜದಲ್ಲಿನ ಉದ್ಯೋಗಸ್ಥ ಮಹಿಳೆ ಸಂಘರ್ಷ ಸೂಕ್ಷ್ಮ ಸ್ಥಿತಿಯನ್ನು ತಲುಪಿತ್ತು. ಈ ಅಂಶಗಳನ್ನು ಕೇಂದ್ರವಾಗಿಟ್ಟುಕೊಂಡು ಲಂಕೇಶ್ ತಮ್ಮ ಸಾಹಿತ್ಯ ರಚನೆಯನ್ನು ವಿಶಿಷ್ಟವಾಗಿಸಿಕೊಳ್ಳಬೇಕೆಂಬ ಹಂಬಲಕ್ಕೆ ಬಿದ್ದರು. ಇದರ ಫಲವಾಗಿ ಮಹಿಳೆಯ ಬಗೆಗಿನ ಭಿನ್ನವಾದ ಸಂವೇದನೆಯೊಂದು ಅವರ ಕಥನ ಸಾಹಿತ್ಯದಲ್ಲಿ ಅಭಿವ್ಯಕ್ತಗೊಂಡಿತು.

ಲೈಂಗಿಕ ಪ್ರಜ್ಞೆ ಎಂಬುದು ಬಹುತೇಕವಾಗಿ ಪುರುಷನ ವಿಷಯ ಲೋಲುಪತೆಯಾಗಿದೆ. ಇಂತಹ ಸಂದರ್ಭದಲ್ಲಿ ಪುರುಷನಿಗೆ ಇಲ್ಲದ ಅನೈತಿಕತೆಯನ್ನು ಮಹಿಳೆಗೆ ಆರೋಪಿಸಲಾಗಿದೆ. ನೈತಿಕತೆ ಮತ್ತು ಅನೈತಿಕತೆಯ ಚರ್ಚೆ ನವ್ಯ ಲೇಖಕರ

ಕಥನ ಸಾಹಿತ್ಯದ ವಸ್ತುವಿನಲ್ಲಿ ಕಾಣಬಹುದಾಗಿದೆ. ಬಹುತೇಕ ಎಲ್ಲಾ ಸಂದರ್ಭಗಳಲ್ಲೂ ಇದು ನೈತಿಕತೆ ಇದು ಅನೈತಿಕತೆ ಎಂಬಂತಹ ಅಂಶಗಳನ್ನು ಅಲ್ಲಿ ಬಿಂಬಿಸಲಾಗಿದೆ. ಆದರೆ ಲಂಕೇಶರ ಕಥನ ಸಾಹಿತ್ಯದಲ್ಲಿ ನಾವು ಅನೈತಿಕತೆ ಎಂದು ಭಾವಿಸುತ್ತೇವೆಯೋ ಅದಕ್ಕೆ ಮುಖ್ಯ ಕಾರಣ ಏನು ಎಂಬುದನ್ನು ಶೋಧಿಸುವುದು ಮುಖ್ಯವಾಗುತ್ತದೆ. ಆ ಮೂಲಕ ಅನೈತಿಕತೆ ಹೆಸರಿನಲ್ಲಿ ಮಹಿಳೆಯನ್ನು ಶೋಷಿಸುತ್ತಿದ್ದ ವ್ಯವಸ್ಥೆಯನ್ನು ಲಂಕೇಶ್ ವಿಮರ್ಶೆಗೆ ಒಳಪಡಿಸುತ್ತಾರೆ. 'ಮುಸ್ಸಂಜೆಯ ಕಥಾ ಪ್ರಸಂಗ'ದ ರಂಗವ್ವ ವಿಧವೆಯಾಗಿದ್ದು ಪರಗಂಡಿನ ಜೊತೆ ಮಲಗುವುದು, 'ಅಕ್ಕ'ದ ದೇವೀರಿ ವೇಶ್ಯೆಯಂತೆ ಬದುಕುವುದು ಇವೆಲ್ಲಾ ಅನೈತಿಕತೆಯ ಛಾಯೆಯಿಂದ ಹೊರಗೆ ಉಳಿಯುತ್ತವೆ. ವ್ಯವಸ್ಥೆ ಹೇಳುವ ಅನೈತಿಕತೆಯ ಅಂಶಕ್ಕಿಂತ ರಂಗವ್ವ, ದೇವೀರಿಯ ಬದುಕಿನ ನಿಷ್ಠುರತೆ, ತಲ್ಲಣಗಳು, ಮುಖ್ಯ ಕೇಂದ್ರಕ್ಕೆ ಬಂದು ನಿಲ್ಲುತ್ತವೆ. ಬದುಕಿನ ಯಾವುದೇ ಪರಿಸ್ಥಿತಿಯಲ್ಲಿಯೂ ಬದುಕಿನ ಬಗ್ಗೆ ಅಪರಿಮಿತವಾದ ಹಂಬಲ ಇಟ್ಟುಕೊಂಡಿರುವ ಲಂಕೇಶ್ ಕಥನ ಸಾಹಿತ್ಯದ ಮಹಿಳೆಯರ ಈ ಅನೈತಿಕತೆ ಎಂದಿಗೂ ಅನೈತಿಕತೆ ಎನಿಸುವುದಿಲ್ಲ. ಆ ಮೂಲಕ ಮಹಿಳೆಯ ಚೈತನ್ಯ, ಗಟ್ಟಿತನ ಲಂಕೇಶರ ಕಥನ ಸಾಹಿತ್ಯದಲ್ಲಿ ವಿಭಿನ್ನ ಆಯಾಮ ಪಡೆದುಕೊಳ್ಳುತ್ತದೆ.

"ಲಂಕೇಶರಲ್ಲಿ ಹೆಣ್ಣನ್ನು ಕುರಿತ ಹೊಸ ಸಂವೇದನೆಯೊಂದು ಇತ್ತು ಎನ್ನುವುದೇ ಮುಖ್ಯವಾಗಿದೆ. ಎಲ್ಲಾ ಬಗೆಯ ಉಪಾದಿಗಳಿಂದ ಮುಕ್ತವಾದ ಅವಳು ಅವಳೇ ಆಗಿರುವ ಸ್ವತಂತ್ರ ವ್ಯಕ್ತಿತ್ವದ ಹಿನ್ನೆಲೆಯಲ್ಲಿಯೇ ಅವರು ಹೆಣ್ಣನ್ನು ಗುರುತಿಸಿದರು. ಅವರ ಒಟ್ಟು ಸಾಹಿತ್ಯದ ಮಟ್ಟಿಗೂ ಇದು ನಿಜ. ಹೆಣ್ಣನ್ನು ಅವಳ ನಿಜದಲ್ಲಿ ನೋಡುವ ಹುಡುಕುವ, ಅವಳ ವ್ಯಕ್ತಿತ್ವನ್ನು ಘನವಾಗಿ ಕಟ್ಟಿಕೊಡುವ ನಿರಂತರ ಪ್ರಯತ್ನವೊಂದು ಒಳ ಬದುಕನ್ನು ಶೋಧಿಸುವ ಅದಕ್ಕೆ ಅಧಿಕೃತತೆಯನ್ನು ಕೊಡುವ ಅವರ ಹಂಬಲಕ್ಕೆ ಹಲವಾರು ಪಾತ್ರಗಳ ಸಾಕ್ಷ್ಯವಿದೆ" (ಎಂ.ಎಸ್.ಆಶಾದೇವಿ, ಸ್ತ್ರೀಮತನುತ್ತರಿಸಲಾಗದೆ?, ೨೦೦೬, ಪುಟ ೪೬-೪೭) ಎನ್ನುವ ಮಾತುಗಳು ಲಂಕೇಶ್ ಮಹಿಳೆಯನ್ನು ಕಂಡರಿಸಿರುವ ರೀತಿ ಇತರ ನವ್ಯ ಲೇಖಕರಿಗಿಂತ ಭಿನ್ನವಾದದ್ದು ಎಂಬುದನ್ನು ಅಭಿವ್ಯಕ್ತಿಸುತ್ತದೆ. ಈ ಕಾರಣಕ್ಕಾಗಿ ಲಂಕೇಶರವರು ಮಹಿಳೆಯ ಗಟ್ಟಿತನ, ಸಾಮರ್ಥ್ಯವನ್ನು ಅನಾವರಣ ಮಾಡುವುದರಲ್ಲಿ ಇತರ ನವ್ಯ ಲೇಖಕರಿಗಿಂತ ವಿಭಿನ್ನವಾಗಿ ನಿಲ್ಲುತ್ತಾರೆ.

ದೇಸಾಯಿಯವರ ಕಥನ ಸಾಹಿತ್ಯದಲ್ಲಿನ ಮಹಿಳೆ ಪುರುಷನ ಪಾಲಿಗೆ ಚೈತನ್ಯವನ್ನು ತುಂಬುವ ಶಕ್ತಿಯಾಗಿದ್ದಾಳೆ. ಮೇಲ್ನೋಟಕ್ಕೆ ಇಲ್ಲಿನ ಮಹಿಳೆಯರು ಪುರುಷರಿಗಿಂತ ಪ್ರಮುಖ ಎನಿಸಿದರೂ ಪ್ರಮುಖ ಸ್ಥಾನವನ್ನು ಪಡೆದುಕೊಂಡಿಲ್ಲ. ಪುರುಷ ಪ್ರಧಾನ

ವ್ಯವಸ್ಥೆಯ ಕ್ರೌರ್ಯಕ್ಕೆ ಬಲಿಯಾಗುವ ಚಿತ್ತಾಲರ ಕಥನ ಸಾಹಿತ್ಯದ ಮಹಿಳೆಯರು ಓದುಗರ ಸಹಾನುಭೂತಿಯನ್ನು ಗಳಿಸುವಲ್ಲಿ ಯಶಸ್ವಿಯಾಗುತ್ತಾರೆ ಹೊರತು ವ್ಯವಸ್ಥೆಯ ಕ್ರೌರ್ಯದ ವಿರುದ್ಧ ತಮ್ಮ ಪ್ರತಿಭಟನೆ ವ್ಯಕ್ತಪಡಿಸುವುದಿಲ್ಲ. ಬ್ರಾಹ್ಮಣ ಸಮಾಜದಲ್ಲಿರುವ ಮನುಷ್ಯ ವಿರೋಧಿ ಧೋರಣೆಯನ್ನು ಅನಂತ ಮೂರ್ತಿಯವರು ವಿರೋಧಿಸುತ್ತಾರೆ. ಬ್ರಾಹ್ಮಣ ಸಮಾಜದಲ್ಲಿರುವ ಮನುಷ್ಯ ವಿರೋಧಿ ಧೋರಣೆಯು ಅಲ್ಲಿನ ಮಹಿಳೆಯನ್ನು ಶೋಷಿಸುವ ರೀತಿಯನ್ನು ಇವರು ಗಮನಿಸಿದ್ದಾರೆ. ಇಲ್ಲೂ ಕೂಡ ಶೋಷಣೆಯ ವಿರುದ್ಧದ ಧ್ವನಿ ಕೇಳಿಸುವುದಿಲ್ಲ. ನವ್ಯ ಕಾಲ ಘಟ್ಟದಿಂದ ಹೊರ ಬಂದ ಮೇಲೆ ಲಂಕೇಶ್, ಪೂರ್ಣಚಂದ್ರ ತೇಜಸ್ವಿಯವರ ಕಥನ ಸಾಹಿತ್ಯದಲ್ಲಿ ಸ್ವತಂತ್ರ, ಅಸ್ತಿತ್ವದ ವ್ಯಕ್ತಿತ್ವವುಳ್ಳ ಮಹಿಳೆಯರನ್ನು ನಾವು ಕಾಣಬಹುದಾಗಿದೆ. ಒಟ್ಟಾರೆ ನವ್ಯ ಕಥನ ಸಾಹಿತ್ಯದಲ್ಲಿ ಪ್ರಾತಿನಿಧಿಕ ಲೇಖಕರ ಸಾಹಿತ್ಯದಲ್ಲಿ ಮಹಿಳೆಯು ಗಿಟ್ಟಿಸಿಕೊಂಡಿರುವ ಸ್ಥಾನವನ್ನು ಗಮನಿಸಿದರೆ ಅದು ಹಿಂದಿನ ಸಾಹಿತ್ಯಕ್ಕಿಂತ ಭಿನ್ನವಾಗಿ ನಿಲ್ಲುವುದಿಲ್ಲ. ನವ್ಯ ಲೇಖಕರು ಸಮಸ್ಯೆಯ ದಾಖಲೀಕರಣ ಮಾಡಿದರೇ ಹೊರತು ಮಹಿಳೆಯ ಆ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ದಾರಿ ತೋರಿಸಲಿಲ್ಲ. ಇದನ್ನು ನವ್ಯ ಕಥನ ಸಾಹಿತ್ಯದ ಸೋಲು ಎಂದೇ ನಾವು ಪರಿಭಾವಿಸಬೇಕಾಗುತ್ತದೆ.

# ಅಧ್ಯಾಯ – ೧೦

# ಉಪ ಸಂಹಾರ

## ೧೦.೦ ಪೀಠಿಕೆ :

ಅನಾದಿ ಕಾಲದಿಂದಲೂ ಪುರುಷರಿಗಿಂತ ಮಹಿಳೆಯರೇ ಹೆಚ್ಚಾಗಿ ಮಾನವ ಕ್ರೌರ್ಯಕ್ಕೆ, ಹಿಂಸೆಗೆ ಬಲಿಯಾಗಿರುವುದನ್ನು ನಾವು ಇತಿಹಾಸದಲ್ಲಿ ಗಮನಿಸಬಹುದಾಗಿದೆ. ಮನುಷ್ಯ ನಾಗರೀಕತೆಯ ಪ್ರಧಾನ ಪೋಷಕಿ ಮಹಿಳೆ. ದೈಹಿಕ ಸಂರಚನೆಯ ವಿಷಯದಲ್ಲಿ ಮಹಿಳೆ ಪುರುಷನಿಗಿಂತ ಭಿನ್ನಳಾದರೂ, ಸಾಮಾಜಿಕ ಮತ್ತು ಸಾಂಸಾರಿಕ ವ್ಯವಸ್ಥೆಯಲ್ಲಿ ಆಕೆ ಪುರುಷನಿಗಿಂತ ಹೆಚ್ಚಿನ ಜಾಣ್ಮೆ, ಸಮಯ ಪ್ರಜ್ಞೆಗಳಿಂದ ವರ್ತಿಸುತ್ತಾಳೆ. ಹೆಣ್ಣಿನ ಈ ಅದಮ್ಯ ಶಕ್ತಿ ಕಂಡ ಪುರುಷನಿಗೆ ಆಕೆ ಅದ್ಭುತ ಶಕ್ತಿಯ ಸಾಕಾರವೆಂಬಂತೆ ಕಂಡಿದ್ದಾಳೆ. ಈ ಹಿನ್ನೆಲೆಯಲ್ಲಿಯೇ ಮಾತೃದೇವತೆಯ ಪರಿಕಲ್ಪನೆ ಮೂಡಿ ಬಂದು ಮಹಿಳೆ ಆದಿಶಕ್ತಿ ಎನಿಸಿದಳು. ಇದರ ಜೊತೆಗೆ ತನಗಿಂತ ವಿಶಿಷ್ಟ ವ್ಯಕ್ತಿತ್ವವುಳ್ಳ ಮಹಿಳೆಯನ್ನು ತಾನು ಹತೋಟಿಯಲ್ಲಿಟ್ಟುಕೊಳ್ಳಬೇಕೆಂದು ಪುರುಷ ಆಲೋಚಿಸಿ ಸಂಪ್ರದಾಯ, ಧರ್ಮ ಇವುಗಳನ್ನು ಜಾರಿಗೆ ತಂದು ಮಹಿಳೆಯನ್ನು ದ್ವಿತೀಯ ದರ್ಜೆ ಸ್ಥಾನಕ್ಕೆ ತಳ್ಳಿ ತಾನು ಮುನ್ನೆಲೆಗೆ ಬಂದನು. ಇಲ್ಲಿಂದ ಪುರುಷ ಮತ್ತು ಮಹಿಳೆಯ ನಡುವಿನ ಅಸಮಾನತೆ ದಿನದಿಂದ ದಿನಕ್ಕೆ ಬೆಳೆಯಲಾರಂಭಿಸಿತು. ಪುರುಷ ಮಹಿಳೆಯರ ತಾರತಮ್ಯವು ಮಹಿಳೆಯ ಶೋಷಣೆಯಾಗಿ ಬದಲಾಯಿತು. ಅಂದಿನಿಂದ ಇಂದಿನವರೆಗೆ ಮಹಿಳೆ ಮೇಲಿನ ಪುರುಷನ ಶೋಷಣೆ ಮುಂದುವರಿಯುತ್ತಲೇ ಇದೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆ ಮೇಲೆ ಹೇರಲಾಗಿದ್ದ ನಿರ್ಬಂಧಗಳು ಮೌಖಿಕವಾಗಿದ್ದವು. ಇದೇ ನಿರ್ಬಂಧಗಳು ಧಾರ್ಮಿಕ ವ್ಯವಸ್ಥೆಯಲ್ಲಿ ಲಿಖಿತರೂಪವನ್ನು ಪಡೆದವು. ಈ ನಿಟ್ಟಿನಲ್ಲಿ ಮಹಿಳೆಯ ಮೇಲಿನ ಶೋಷಣೆಗೆ ಕಾಲಕ್ರಮೇಣ ಲಿಖಿತ ಮುದ್ರೆ ದೊರೆತು ಆಕೆಯ ಸ್ಥಿತಿ ಮತ್ತಷ್ಟು ಶೋಚನೀಯವಾಯಿತು. ಮಹಿಳೆಯನ್ನು ನಿರ್ಬಂಧಿಸಲೆಂದೇ ಹುಟ್ಟಿದ ಧರ್ಮಶಾಸ್ತ್ರಗಳು ಹಂತ ಹಂತವಾಗಿ ಮಹಿಳೆಯ ಅಸ್ತಿತ್ವವನ್ನೇ ಬುಡಮೇಲು ಮಾಡಿತು. ಮಹಿಳೆಯರಿಗಾಗಿಯೇ ಧರ್ಮಶಾಸ್ತ್ರಗಾರರು ಕೆಲವೊಂದು ಆದರ್ಶಗಳನ್ನು ನಿರ್ಮಿಸಿದರು. ಉದಾ.ಗೆ ಮನು ತನ್ನ ಧರ್ಮಶಾಸ್ತ್ರವಾದ 'ಸ್ಮೃತಿ' ಯಲ್ಲಿ ಸತಿ ಕರ್ತವ್ಯಗಳನ್ನು ಉಲ್ಲೇಖಿಸಿ ಆ ಮೂಲಕ ಮಹಿಳೆಯರು ಅನುಸರಿಸಲೇ ಬೇಕಾದ

ಆದರ್ಶಗಳನ್ನು ವಿಶ್ಲೇಷಿಸುತ್ತಾನೆ. ಅಂದಿನಿಂದ ಆಧುನಿಕ ಕಾಲ ಘಟ್ಟವಾದ ಇಂದಿನವರೆಗೂ ಮಹಿಳೆಯನ್ನು ಶೋಷಿಸಲು ಇದೇ ಆದರ್ಶವನ್ನು ಪುರುಷ ತನ್ನ ಅಸ್ತ್ರವಾಗಿ ಬಳಸುತ್ತಿದ್ದಾನೆ. ಶೀಲದ ಪ್ರಶ್ನೆ , ಪಾತಿವ್ರತ್ಯದ ಪ್ರಶ್ನೆ, ತಾಯ್ತನದ ಪ್ರಶ್ನೆ, ವೈಧವ್ಯದ ಪ್ರಶ್ನೆ ಈ ಮೊದಲಾದ ಸನಾತನದ ಆದರ್ಶಗಳು ಮಹಿಳೆಯ ಶೋಷಣೆಯ ಅಸ್ತ್ರವಾಗಿದೆ ಎಂದು ಈಗಾಗಲೇ ವಿದ್ವಾಂಸರು ಗುರುತಿಸಿದ್ದಾರೆ. ಸನಾತನ ಧರ್ಮದ ಈ ಆದರ್ಶಗಳು ಸಮಾಜದಲ್ಲಿನ ಪುರುಷರಲ್ಲಿ ಮೊದಲೇ ಇದ್ದಂತಹ ಕೇಡಿನ (Evil) ಭಾವನೆಯನ್ನು ಜಾಗೃತಗೊಳಿಸಿ ಮಹಿಳೆಯ ಮೇಲಿನ ಅವರ ಕ್ರೌರ್ಯ ಮತ್ತಷ್ಟು ಹೆಚ್ಚಾಗಲು ಕಾರಣವಾಗುತ್ತಿದೆ. ಸಾಮಾಜಿಕವಾಗಿ ಅಷ್ಟೇ ಅಲ್ಲದೆ ಸಾಹಿತ್ಯಿಕವಾಗಿಯೂ ಈ ಆದರ್ಶಗಳು ಲೇಖಕರ ಮೂಲಕ ನುಸುಳಿವೆ. ಲೇಖಕರು ತಮಗೆ ಅರಿವಿಲ್ಲದಂತೆ ಈ ಆದರ್ಶಗಳನ್ನು ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ವರ್ಗಾಯಿಸುವ ಕೆಲಸ ಮಾಡಿದ್ದಾರೆ. ಈಗಾಗಲೇ ಹಿಂದಿನ ಅಧ್ಯಾಯಗಳಲ್ಲಿ ಶಾಂತಿನಾಥ ದೇಸಾಯಿ, ಯಶವಂತ ಚಿತ್ತಾಲ, ಅನಂತಮೂರ್ತಿ, ಲಂಕೇಶ್, ಪೂರ್ಣಚಂದ್ರ ತೇಜಸ್ವಿ, ಕುಸುಮಾಕರ ದೇವರಗೆಣ್ಣೂರು, ಗಿರಿ, ಟಿ.ಜಿ.ರಾಘವ, ರಾಜಲಕ್ಷ್ಮಿ ಎನ್.ರಾವ್, ವೀಣಾಶಾಂತೇಶ್ವರ ಈ ನವ್ಯ ಲೇಖಕರ ಕಥನ ಸಾಹಿತ್ಯದಲ್ಲಿ ಮಹಿಳೆ ಪರಿಕಲ್ಪನೆ ಅಭಿವ್ಯಕ್ತವಾಗಿರುವುದನ್ನು ಅಧ್ಯಯನ ಮಾಡಲಾಗಿದೆ. ಈ ಅಧ್ಯಯನದ ಆಧಾರದ ಮೇಲೆ ವಸ್ತು, ತಂತ್ರ, ಭಾಷೆ ಈ ಮೊದಲಾದವುಗಳಲ್ಲಿ ಹೊಸತನ ಮೈಗೂಡಿಸಿಕೊಂಡ ನವ್ಯ ಕಥನ ಸಾಹಿತ್ಯದಲ್ಲಿ ಸನಾತನ ಕಾಲದ, ಮಹಿಳಾ ವಿರೋಧಿಯಾದ ಆದರ್ಶಗಳು ಜಾಗ ಪಡೆದುಕೊಂಡಿರುವುದನ್ನು ಗುರುತಿಸಲಾಗಿದೆ. ಈ ಹಿನ್ನೆಲೆಯಲ್ಲಿ ಇಂತಹ ಆದರ್ಶಗಳ ನಡುವೆ ಮಹಿಳೆಯ ಸ್ಥಾನವನ್ನು ನವ್ಯ ಕಥನ ಸಾಹಿತ್ಯದಲ್ಲಿ ಗುರುತಿಸುವುದು ಈ ಅಧ್ಯಾಯದ ಆಶಯವಾಗಿದೆ.

## ೧೦.೧ ಅಧ್ಯಯನದ ಫಲಿತಗಳು :

ಭಾರತೀಯ ಸನಾತನ ಜೀವನ ಪದ್ಧತಿಯಲ್ಲಿ ರೂಢಿಗತವಾಗಿದ್ದ ಶೀಲ, ಪಾತಿವ್ರತ್ಯ, ತಾಯ್ತನ, ವೈಧವ್ಯಗಳೆಂಬ ಪ್ರಶ್ನೆಗಳು ಮಹಿಳೆಯರಿಗಾಗಿ ರೂಪಿಸಿದ ಆದರ್ಶಗಳು ಆಗಿದ್ದವು. ಪುರುಷನಿಗೆ ಇಲ್ಲದ ಈ ಆದರ್ಶಗಳು ಮಹಿಳೆಯರಿಗೆ ಮಾತ್ರ ಮೀಸಲಾಗಿದ್ದವು. ಮಹಿಳೆಯರಿಗಾಗಿ ರೂಪಿಸಲಾದ ಈ ಆದರ್ಶಗಳ ಹಿಂದೆ ಮಹಿಳೆಯರನ್ನು ನಿಯಂತ್ರಿಸಲು ಪುರುಷರು ಮಾಡಿಕೊಂಡ ಒಂದು ವ್ಯವಸ್ಥಿತವಾದ ಮಹಿಳಾ ವಿರೋಧಿ ನಿಲುವುಗಳಾಗಿದೆ. ಆದರ್ಶದ ಹೆಸರಿನಲ್ಲಿ ಪುರುಷ ಮಹಿಳೆಯನ್ನು ಪರೋಕ್ಷವಾಗಿ ಶೋಷಿಸುತ್ತಾನೆ. ಮಹಿಳಾ ವಿರೋಧಿ ನಿಲುವುಗಳು ಆದರ್ಶದ

ಹೆಸರಿನಲ್ಲಿ ಮಹಿಳೆಯನ್ನು ಶೋಷಿಸುವ ಪುರುಷನ ಮತ್ತೊಂದು ಜಾಣತನದ ಅಂಶವಾಗಿದೆ. ಸೀತೆ, ಸಾವಿತ್ರಿಯಂತಹ ಮಹಿಳೆಯರ ಕಥೆಗಳನ್ನು ಹೆಣೆದು ಆದರ್ಶ ಮಹಿಳೆ ಹೀಗಿರಬೇಕೆಂಬ ಮಾದರಿಯನ್ನು ಸ್ತ್ರೀಕುಲಕ್ಕೆ ನೀಡಲಾಗಿದೆ. ಪುರುಷನು ರೂಪಿಸಿದ ಆದರ್ಶ ಪ್ರಜ್ಞೆಗೆ ಇವರು ಪೂರಕವಾಗಿರುವುದರಲ್ಲದೆ ಆದರ್ಶ ಸತಿಗಳೆಂದು ಇವರನ್ನು ಕರೆದು ಮಹಿಳೆಯರು ತಮ್ಮ ಆದರ್ಶದ ಮಾದರಿಗಳಾಗಿ ಇವರನ್ನು ಅನುಸರಿಸಬಹುದೆಂದು ಹೇಳಲಾಗಿದೆ. ಆ ಮೂಲಕ ಮಹಿಳೆಯ ಶೋಷಣೆಗೆ ಪುರಾಣದಲ್ಲಿ ಉಂಟಾದ ಶೋಷಣೆಯನ್ನು ಪುರುಷ ಮಾದರಿಯಾಗಿ ನೀಡಿದ್ದಾನೆ.

ಇಂತಹ ಆದರ್ಶಗಳ ಪರಿಕಲ್ಪನೆಯನ್ನು ನವ್ಯ ಕಥನ ಸಾಹಿತ್ಯದಲ್ಲಿ ನಾವು ಗಮನಿಸಬಹುದಾಗಿದೆ. ನವ್ಯ ಕಥನ ಸಾಹಿತ್ಯದಲ್ಲಿ ಬಳಕೆಯಾಗಿರುವ ಈ ಆದರ್ಶಗಳು ಮಹಿಳೆಯ ಶೋಷಣೆಗೆ ಕಾರಣವಾದ ರೀತಿಯನ್ನು ತಿಳಿಯುತ್ತಾ, ಒಟ್ಟು ಸಾಹಿತ್ಯ ಪರಂಪರೆಯಲ್ಲಿ ಈ ಆದರ್ಶಗಳ ಪರಿಕಲ್ಪನೆಯನ್ನು ನವ್ಯ ಕಾಲ ಘಟ್ಟವು ಮುಂದುವರೆಸುವ ಕೆಲಸ ಮಾಡಿರುವ ರೀತಿಯನ್ನು ತಿಳಿಯಬಹುದಾಗಿದೆ. ಆ ಮೂಲಕ ನವ್ಯ ಕಥನ ಸಾಹಿತ್ಯದಲ್ಲಿ ಮಹಿಳೆ ಪರಿಕಲ್ಪನೆ ಅನಾವರಣಗೊಂಡಿರುವ ಬಗೆಯನ್ನು ಅರಿಯ ಬಹುದಾಗಿದೆ.

### ೧೦.೧.೧ ಶೀಲದ ಪ್ರಜ್ಞೆ:

ಶೀಲ ಮತ್ತು ಪಾವಿತ್ರ್ಯ ಎಂಬ ಎರಡು ಪದಗಳು ಅಂತರ್ ಸಂಬಂಧವನ್ನು ಹೊಂದಿವೆ. ಶೀಲದ ಮುಂದುವರಿಕೆ ಎಂಬಂತೆ ಪಾವಿತ್ರ್ಯವನ್ನು ನೋಡಲಾಗಿದೆ. ಶೀಲ ಮತ್ತು ಪಾವಿತ್ರ್ಯ ಎರಡೂ ಅಂಶಗಳು ಮಹಿಳೆಯ ಲೈಂಗಿಕತೆಯನ್ನು ನಿಯಂತ್ರಿಸಲು ಪುರುಷ ರೂಪಿಸಿದ ಆದರ್ಶಗಳಾಗಿವೆ. ಹೆಣ್ಣಾಗಿ ಹುಟ್ಟುವುದೇ ಪಾಪ ಎಂಬಂತೆ ಬಿಂಬಿಸಿ ಸಾಯುವವರೆಗೂ ಆಕೆ ಗಂಡನಿಗೆ ತನ್ನ ಮನಸ್ಸು ಮತ್ತು ಶರೀರಗಳನ್ನು ಮೀಸಲಿರಿಸ ಬೇಕೆಂದು ನಿಯಮ ರೂಪಿಸಿ ಆಕೆಯ ಆಯ್ಕೆಯ ಸ್ವಾತಂತ್ರ್ಯವನ್ನು ವ್ಯವಸ್ಥೆ ಕಸಿದುಕೊಂಡಿದೆ. ಹೆಣ್ಣಿನ ಶೀಲವನ್ನು ಶಂಕಿಸಿ ಅನಾದಿ ಕಾಲದಿಂದಲೂ ಇಂದಿನವರೆಗೂ ಮಹಿಳೆಯನ್ನು ನೋಯಿಸುವ ಸಂಕಥನಗಳು ನಡೆಯುತ್ತಲೇ ಇದೆ. ಪುರಾಣದ ಅಹಲ್ಯೆಯಿಂದ ಹಿಡಿದು ಇಂದು ಹೆಣ್ಣು ಹಸುಳೆಗಳ ಮೇಲೆ ನಡೆಯುವ ಬಲಾತ್ಕಾರಗಳಂತಹ ಪ್ರಸಂಗಗಳಲ್ಲಿ ಮಹಿಳೆಯ ಮೇಲೆ ಆರೋಪಿಸಲಾದ ಶೀಲದ ಆದರ್ಶದ ಪ್ರಜ್ಞೆಯು ಜಾಗೃತವಾಗಿದೆ. ಇಂತಹ ಪ್ರಸಂಗಗಳ ಸಂದರ್ಭದಲ್ಲಿ ದೈಹಿಕವಾಗಿ ಮತ್ತು ಮಾನಸಿಕವಾಗಿ ಜರ್ಜರಿತಳಾದ ಮಹಿಳೆಯ ಬಗ್ಗೆ ಸಮಾಜ ಕಾಳಜಿ ತೋರಿಸದೆ, ಅದಕ್ಕೆ ಕಾರಣನಾದ ಪುರುಷನಿಗೆ ಶಿಕ್ಷೆ ವಿಧಿಸದೇ, ಹೆಣ್ಣನ್ನೇ

ದೋಷಿ ಎಂದು ಸಮಾಜ ನಡೆದುಕೊಂಡಾಗಲೆಲ್ಲಾ ಮಹಿಳೆಯ ಬಗ್ಗೆ ಸಮಾಜ ತಾಳಿರುವ ಮನೋಭಾವನೆಯು ಸ್ಫುಟವಾಗುತ್ತದೆ.

ಮಹಿಳೆಯನ್ನು ಮೋಸದಿಂದ ಲೈಂಗಿಕವಾಗಿ ಬಳಸಿಕೊಳ್ಳುವ ಪುರುಷನಿಗೆ ಯಾವುದೇ ರೀತಿಯ ಶಿಕ್ಷೆಯಿಲ್ಲದೆ ಆತ ಸುಲಭವಾಗಿ ಪಾರಾಗುತ್ತಾನೆ. ಆದರೆ ಅವನ ಮೋಸಕ್ಕೆ ಬಲಿಯಾದ ಮಹಿಳೆಯಲ್ಲಿ ಶೀಲದ ಪ್ರಶ್ನೆ ಅನುರಣಿಸುತ್ತಿರುತ್ತದೆ. ಶೀಲದ ಪ್ರಶ್ನೆಯು ನವ್ಯ ಕಥನ ಸಾಹಿತ್ಯದಲ್ಲಿ ಮಹಿಳೆಯ ಶೋಷಣೆ ಅಸ್ತ್ರವಾಗಿ ಬಳಕೆಯಾಗಿದೆ. ಚಿತ್ತಾಲರ ಕಥನ ಸಾಹಿತ್ಯದ ಆಬೋಲೀನ, ನಿರ್ಮಲ, ಜಾನಕಿ, ಸೀತಾ, ಅನಂತಮೂರ್ತಿಯವರ ಕಥನ ಸಾಹಿತ್ಯದ ಅಬ್ಬಕ್ಕ, ಯಮುನಕ್ಕ ಈ ಮೊದಲಾದವರು ಒಂದಲ್ಲಾ ಒಂದು ಕಾರಣಕ್ಕಾಗಿ ಶೀಲದ ಪ್ರಶ್ನೆಗೆ ಸಿಲುಕಿದವರೇ ಆಗಿದ್ದಾರೆ. ಅಬ್ಬಕ್ಕ, ಯಮುನಕ್ಕ ಶೀಲದ ಪ್ರಶ್ನೆಯಿಂದ ಸಂಘರ್ಷಕ್ಕೊಳಗಾದರೆ ಆಬೋಲೀನ, ನಿರ್ಮಲ, ಜಾನಕಿ, ಸೀತಾ ಶೀಲದ ಪ್ರಶ್ನೆಯಿಂದ ಆತ್ಮಹತ್ಯೆಯ ದಾರಿ ಹಿಡಿಯುತ್ತಾರೆ. ಈ ಹಿಂದೆ ಶೀಲದ ಪ್ರಶ್ನೆಯಿಂದ ಮಹಿಳೆಯು ಅಗ್ನಿ ಪರೀಕ್ಷೆ, ಅಗ್ನಿದಿವ್ಯ, ನಾಗದಿವ್ಯದಂತಹ ಪರೀಕ್ಷೆಗೆ ಒಳಗಾದರೆ ಇಂದು ಶೀಲದ ಪ್ರಶ್ನೆಯಿಂದ ಮಹಿಳೆ ಆತ್ಮಹತ್ಯೆಗೆ ಒಳಗಾಗುತ್ತಿದ್ದಾಳೆ. ಪರೀಕ್ಷೆ ಸ್ಥಿತಿ ಏನೇ ಆದರೂ ಅಂತಿಮವಾಗಿ ಪುರುಷ ಕೇಂದ್ರ ಸಮಾಜವು ರೂಪಿಸಿದ ಶೀಲದ ಪ್ರಶ್ನೆಯ ಆದರ್ಶವು ಗೆಲುವನ್ನು ಸಾಧಿಸಿದೆ.

**೯.೧.೨ ಪಾತಿವ್ರತ್ಯದ ಪ್ರಶ್ನೆ:**

ಶೀಲ ಮತ್ತು ಪಾತಿವ್ರತ್ಯ ಎಂಬ ಎರಡು ಪ್ರಶ್ನೆಗಳು ಮಹಿಳೆಯ ಲೈಂಗಿಕ ಪ್ರಶ್ನೆಗೆ ಸಂಬಂಧಿಸಿದವುಗಳಾಗಿದೆ. ಭಾರತೀಯ ಸನಾತನ ಜೀವನದಲ್ಲಿ ಮಹಿಳೆಯ ಲೈಂಗಿಕ ಪ್ರಶ್ನೆಯನ್ನು ನಿಯಂತ್ರಿಸಲು ಈ ಎರಡು ಪ್ರಶ್ನೆಗಳು ಪೂರಕವಾಗಿ ಕಾರ್ಯ ನಿರ್ವಹಿಸುತ್ತಿವೆ. ಮಹಿಳೆಯ ಮೇಲಾಗಿರುವ ಮೇಲಾಗುತ್ತಿರುವ ಶೋಷಣೆಯಲ್ಲಿ ಈ ಎರಡು ಪ್ರಶ್ನೆಗಳು ಪ್ರಧಾನ ಪಾತ್ರ ವಹಿಸಿವೆ. ಪಾತಿವ್ರತ್ಯ ಎನ್ನುವುದು ಹೆಂಡತಿಯಿಂದ ಪತಿನಿಷ್ಠೆಯನ್ನು ನಿರೀಕ್ಷಿಸುವುದೇ ಆಗಿದೆ. ಪಾತಿವ್ರತ್ಯ ಎಂಬ ಪ್ರಶ್ನೆಯನ್ನೇ ಕೇಂದ್ರವಾಗಿಟ್ಟುಕೊಂಡು ಸಾಹಿತ್ಯದಲ್ಲಿ 'ಸತಿಧರ್ಮಸಾರ', 'ಹದಿಬದೆಯ ಧರ್ಮ' ಎಂಬ ಕೃತಿಗಳ ರಚನೆಯಾಗಿದೆ. ಒಂದು ವೇಳೆ ಸತಿಯಾದವಳು ತನ್ನ ಗಂಡನನ್ನು ಬಿಟ್ಟು ಪರಪುರುಷನನ್ನು ಪ್ರೀತಿಸಿದರೆ ಅಥವಾ ಅವನ ಜೊತೆ ದೈಹಿಕ ಸಂಪರ್ಕ ಹೊಂದಿದರೆ ಅಂತಹ ಸತಿಗೆ ನರಕ ಲೋಕದಲ್ಲಿ ಕಠೋರ ಶಿಕ್ಷೆಗಳನ್ನು ನೀಡಲಾಗುತ್ತದೆ ಎಂದು ಹೇಳಿ ಎಚ್ಚರಿಸಲಾಗಿದೆ. ಪಂಚ ಕನ್ಯೆಯರಾದ ಅಹಲ್ಯೆ, ದ್ರೌಪದಿ, ತಾರಾ, ಕುಂತಿ, ಮಂಡೋದರಿಯರು ಮತ್ತು ಸಪ್ತ ಮಾತೃಕೆಯರೆಂದು ಪ್ರಸಿದ್ಧರಾದ ಎಲ್ಲಮ್ಮ,

ಕಾಳಮ್ಮ, ದ್ಯಾವಮ್ಮ, ದುರ್ಗಮ್ಮ ಮೊದಲಾದವರು ಹಾಗೂ ಶಕುಂತಲೆ, ಸೀತೆ, ಸಾವಿತ್ರಿ, ದಮಯಂತಿ, ಅನಸೂಯೆ, ಅರುಂಧತಿ, ಮಾಧವಿ, ಪಾರ್ವತಿ ಈ ಮೊದಲಾದ ಪುರಾಣ ಪ್ರಸಿದ್ಧ ಮಹಿಳೆಯರ ಬದುಕಿನ ಕಥೆ ಶೀಲ ಮತ್ತು ಪಾತಿವ್ರತ್ಯ ಪ್ರಜ್ಞೆಗೆ ಸಂಬಂಧಿಸಿದುದೇ ಆಗಿದೆ. ಪಿತೃ ಪ್ರಧಾನ ಸಮಾಜದಲ್ಲಿ ಮಹಿಳೆಯು ಅನುಸರಿಸಲೇಬೇಕಾದ ಪರಮೋಚ್ಛ ಮೌಲ್ಯವು ಪಾತಿವ್ರತ್ಯವಾಗಿದೆ. ಇದೇ ಪ್ರಜ್ಞೆಯ ಆಧಾರದ ಮೇಲೆಯೇ ಈ ಮೇಲೆ ಹೇಳಿದ ಪುರಾಣ ಕಾಲದ ಮಹಿಳೆಯ ಜೀವನದ ಕತೆಯು ನಿರ್ಮಿತವಾಗಿದೆ. ಅಲ್ಲದೆ ಈ ಕಾರಣಕ್ಕಾಗಿಯೇ ಪುರಾಣದ ಮಹಿಳೆಯರು ಆದರ್ಶ ಮಹಿಳೆಯರ ಸಾಲಿಗೆ ಸೇರುತ್ತಾರೆ. ಜೊತೆಗೆ ಉಳಿದ ಮಹಿಳೆಯರಿಗೆ ಆದರ್ಶ ಪ್ರಾಯರಾಗುತ್ತಾರೆ.

ಪುರುಷ ಕೇಂದ್ರ ಸಮಾಜದಲ್ಲಿ ಮಹಿಳೆಯರಿಗಾಗಿ ರೂಪಿಸಲಾದ ಪಾತಿವ್ರತ್ಯದ ಪ್ರಜ್ಞೆಯು ನವ್ಯ ಕಥನ ಸಾಹಿತ್ಯದಲ್ಲಿ ಚರ್ಚೆಗೆ ಒಳಪಟ್ಟಿದೆ. ನವ್ಯ ಕಥನ ಸಾಹಿತ್ಯದಲ್ಲಿನ ಸತಿಯರು ತಮ್ಮ ಗಂಡಂದಿರಿಗೆ ನಿಷ್ಠರಾಗಿ ನಡೆದುಕೊಂಡರೂ ಆ ಗಂಡಂದಿರು ಇವರಿಗೆ ನಿಷ್ಠರಾಗಿರುವುದಿಲ್ಲ. ಇಲ್ಲಿನ ಬಹುತೇಕ ಗಂಡಸರು ವಿವಾಹದ ಆಚೆಗಿನ ಸಂಬಂಧವನ್ನು ನೆಚ್ಚಿಕೊಂಡಿದ್ದಾರೆ. ಗಂಡನ ಅನೈತಿಕತೆಯ ಅರಿವು ಅವರಿಗೆ ಇದ್ದರೂ "ಯಾವ ಜನ್ಮದ ಋಣವೋ ತೀರಬೇಕಲ್ಲ" (ಯು.ಆರ್.ಅನಂತಮೂರ್ತಿ, ಐದುದಶಕದ ಕಥೆಗಳು, ೨೦೦೭, ಪುಟ ೩೫೪) ಮತ್ತು "ಅವೆಲ್ಲ ಋಣಾನುಬಂಧ ಯಾರ ಕೈಯಿಂದಲೂ ತಪ್ಪಿಸಿಕೊಳ್ಳೋಕೆ ಆಗಲ್ಲ" (ಯು.ಆರ್.ಅನಂತಮೂರ್ತಿ, ಐದುದಶಕದ ಕಥೆಗಳು, ೨೦೦೭, ಪುಟ ೩೭೧) ಎಂದು ಹೇಳುವ ಮೂಲಕ ತಮ್ಮ ಗಂಡನ ಅನೈತಿಕತೆಯನ್ನು ಒಪ್ಪಿ ಬಾಳುತ್ತಾರೆ. "ಈ ಲೋಕಕ್ಕೆ ಸೂಳೆಯಾಗಬೇಕು. ಪರಲೋಕಕ್ಕೆ ಮಾತ್ರ ಹೆಂಡತಿ ಬೇಕು" (ಯು.ಆರ್.ಅನಂತಮೂರ್ತಿ, ಐದುದಶಕದ ಕಥೆಗಳು, ೨೦೦೭, ಪುಟ ೧೭೧) ಎಂಬ ನಿಯಮವನ್ನು ಅನಂತಮೂರ್ತಿಯವರ ಬಹುತೇಕ ಕಥನ ಸಾಹಿತ್ಯದ ಗಂಡಂದಿರು ತಮಗೆ ತಾವು ಹಾಕಿಕೊಂಡಿದ್ದಾರೆ. ಆದ್ದರಿಂದಲೇ ಅನಂತಮೂರ್ತಿಯವರ ಕಥನ ಸಾಹಿತ್ಯದ ಗಂಡಂದಿರು ಚಂದ್ರಿ, ಲಚ್ಚಿ, ಗಂಗೂಬಾಯಿ, ಗಂಗೆಯಂತಹವರ ಸಹವಾಸ ಮಾಡುತ್ತಾರೆ. ಇದನ್ನು ಅರಿತರೂ ಅದನ್ನು ಪ್ರತಿಭಟಿಸದೆ ಒಪ್ಪಿಕೊಂಡು ಕೌಟುಂಬಿಕ ನೆಲೆಯಲ್ಲಿ ಅತೃಪ್ತ ಜೀವಿಗಳಂತೆ ಅನಂತಮೂರ್ತಿಯವರ ಕಥನ ಸಾಹಿತ್ಯದ ರುಕ್ಮಿಣಿಯಮ್ಮ, ಲಂಕೇಶರ ಕಥನ ಸಾಹಿತ್ಯದ ಗಂಗು ಚಿಕ್ಕಮ್ಮ, ಮೀನಾಕ್ಷಿ, ವನಜ ಈ ಮೊದಲಾದವರು ಬದುಕುತ್ತಾರೆ. ಗಂಡನಿಗೆ ನಿಷ್ಠೆಯಿಂದ ಇರುವುದು ಮಾತ್ರವಲ್ಲದೆ, ಅನೈತಿಕತೆಯ ದಾರಿಯಲ್ಲಿರುವ ಗಂಡನನ್ನು ಒಪ್ಪಿ ಬಾಳುವುದನ್ನು ಪಾತಿವ್ರತ್ಯದ ಪ್ರಜ್ಞೆಯು ಈ ಮಹಿಳೆಯರಿಗೆ ಕಲಿಸಿದೆ. ಪಾತಿವ್ರತ್ಯ ಎನ್ನುವುದು ಒಂದು ಕಡೆ

ಮಹಿಳೆಯ ಲೈಂಗಿಕ ಪ್ರಜ್ಞೆಯನ್ನು ನಿಯಂತ್ರಿಸುತ್ತಲೇ ಮತ್ತೊಂದು ಕಡೆ ಅದೇ ಪಾತಿವ್ರತ್ಯವು ಮಹಿಳೆಯು ತನ್ನ ಗಂಡನ ಅನೈತಿಕತೆಯನ್ನು ಒಪ್ಪಿ ಬಾಳುವಂತೆ ಪ್ರಚೋದಿಸುತ್ತದೆ. ಈ ಎರಡೂ ಕಡೆ ಮಹಿಳೆಯು ಪುರುಷನಿಂದ ಶೋಷಣೆಗೆ ಒಳಗಾಗುವ ರೀತಿಯನ್ನು ನವ್ಯ ಕಥನ ಸಾಹಿತ್ಯವು ಅಭಿವ್ಯಕ್ತಿಸಿದೆ.

### ೧೦.೧.೩ ತಾಯ್ತನದ ಪ್ರಜ್ಞೆ:

ಮಗುವಾಗಿಸುವ ಶಕ್ತಿ ಮಹಿಳೆಯ ಪಾಲಿಗೆ ವರವೂ ಹೌದು, ಶಾಪವೂ ಹೌದು. ಮಗುವಾಗಿಸುವ ಪ್ರಕ್ರಿಯೆಯಲ್ಲಿ ಪುರುಷ ಕ್ವಚಿತ್ತಾಗಿ ಪಾಲ್ಗೊಂಡರೂ ಮಹಿಳೆ ಪುರುಷನ ಸಂತಾನವನ್ನು ತನ್ನ ಗರ್ಭದಲ್ಲಿರಿಸಿಕೊಂಡು ಅದನ್ನು ಹೊತ್ತು ಜನ್ಮ ನೀಡುತ್ತಾಳೆ. ಸೃಷ್ಟಿ ಕ್ರಿಯೆಯ ಶಕ್ತಿಯನ್ನು ದೈವ ಮಹಿಳೆಯ ಪಾಲಿಗೆ ನೀಡಿರುವ ವರವಾಗಿದೆ. ಮಹಿಳೆಯ ಸೃಷ್ಟಿ ಕ್ರಿಯೆಯ ಈ ಅದ್ಭುತ ಶಕ್ತಿಯನ್ನು ಮನಗಂಡ ಪುರುಷ ವ್ಯವಸ್ಥೆಯಲ್ಲಿ ಮಹಿಳೆಯ ಅಸ್ತಿತ್ವವನ್ನು ಇಲ್ಲವಾಗಿಸಲು ಮಹಿಳೆಯ ತಾಯ್ತನವನ್ನೇ ಶೋಷಣೆಯ ಅಸ್ತ್ರವನ್ನಾಗಿಸಿಕೊಂಡನು. ಮಹಿಳೆ ಪಾತಿವ್ರತ್ಯದಿಂದ ನಡೆದುಕೊಂಡರೆ ಸಾಲದು ತನ್ನ ಗಂಡನ ವಂಶದ ಕುಡಿಯನ್ನು ಹೆತ್ತು ಕೊಟ್ಟಾಗ ಮಾತ್ರ ಹೆಣ್ಣಿಗೆ ಪೂರ್ಣತ್ವ ದಕ್ಕುತ್ತದೆ ಎಂದು ಅನಾದಿ ಕಾಲದಿಂದಲೂ ಹೇಳುತ್ತಾ ಬರಲಾಗಿದೆ. ಸನಾತನ ಪಿತೃಪ್ರಧಾನ ವ್ಯವಸ್ಥೆಯು ವೈವಾಹಿಕ ನೆಲೆಯ ತಾಯ್ತನವನ್ನು ಒಪ್ಪಿರುವಂತೆ ಅವಿವಾಹಿತ ನೆಲೆಯ ತಾಯ್ತನವನ್ನು ನಿರಾಕರಿಸಿ, ಹೆಣ್ಣು ಬಂಜೆ ಎನಿಸಿಕೊಂಡಾಗ ಆಕೆಯನ್ನು ತುಚ್ಛೀಕರಿಸಿ ನೋಡಿದೆ. ಇನ್ನು ಒಂದು ಹೆಜ್ಜೆ ಮುಂದೆ ಹೋಗಿ ಗಂಡು ಸಂತಾನ ನೀಡದಿದ್ದಕ್ಕಾಗಿ ಮಹಿಳೆಯನ್ನು ಅವಮಾನಿಸಿ, ನೋಯಿಸಿದೆ. ಈ ರೀತಿಯ ಅವಮಾನಕ್ಕೆ ನೋವಿಗೆ, ನಿರಾಕರಣೆ, ತುಚ್ಛೀಕರಣಕ್ಕೆ ಮಹಿಳೆಯು ಕಾರಣವಲ್ಲವಾದರೂ ಆಕೆಯನ್ನೇ ವ್ಯವಸ್ಥೆಯು ದೋಷಿಯನ್ನಾಗಿಸಿದೆ. ಆದ್ದರಿಂದಲೇ ಅನೇಕ ಸ್ತ್ರೀವಾದಿಗಳು ಮಹಿಳೆಯ ಶೋಷಣೆಯ ಮೂಲ ನೆಲೆಯಾಗಿ ತಾಯ್ತನವನ್ನು ಗುರುತಿಸಿದ್ದಾರೆ.

ಒಳ್ಳೆಯ ಗೃಹಿಣಿ, ಒಳ್ಳೆಯ ತಾಯಿಯಂತಹ ಪದಗಳು ಮಹಿಳೆಯ ತಾಯ್ತನಕ್ಕೆ ನೇರವಾಗಿ ಸಂಭವಿಸಿವೆ. ಮದುವೆ, ತಾಯ್ತನಗಳು ಮಹಿಳೆಯ ಬದುಕನ್ನು ತೀವ್ರವಾಗಿ ಬದಲಾಯಿಸಿ ಬಿಡುತ್ತದೆ. ಒಳ್ಳೆಯ ತಾಯಿ ಬದಲು ಒಳ್ಳೆಯ ತಂದೆ ಎಂಬ ಪದವನ್ನು ನಾವು ಬಹುತೇಕ ಬಳಸುವುದೇ ಇಲ್ಲ. ಏಕೆಂದರೆ ತಾಯಿಯಾದವಳು ತನ್ನ ಹೆಚ್ಚು ಸಮಯವನ್ನು ತನ್ನ ಮಕ್ಕಳ ಜೊತೆಯಲ್ಲಿ ಕಳೆಯುತ್ತಾಳೆ. ಅವರ ಬೇಕು ಬೇಡಗಳನ್ನು ಪೂರೈಸುತ್ತಾಳೆ. ತಾಯಿಯಾದವಳು ಮಕ್ಕಳಿಗೆ ಮಾನಸಿಕವಾಗಿ ಹತ್ತಿರವಾಗುತ್ತಾಳೆ.

ಆದರೆ ತಂದೆ ಅಂತಹ ಪ್ರಯತ್ನಕ್ಕೆ ಕೈ ಹಾಕುವುದೇ ಇಲ್ಲ. ಒಳ್ಳೆಯ ಗೃಹಿಣಿ ಎಂಬ ಪದವಿದೆ. ಆದರೆ ಅದಕ್ಕೆ ಕೊನೆ ಪಕ್ಷ ಹತ್ತಿರ ಪದವಾದರೂ ಪುರುಷನಿಗೆ ಸಂಬಂಧಪಟ್ಟಿದ್ದಲ್ಲ. ಗೃಹವನ್ನು, ಮಕ್ಕಳನ್ನು ನೋಡಿಕೊಳ್ಳುವ ಜವಾಬ್ದಾರಿಯಿಂದ ನುಣಚಿಕೊಳ್ಳುವ ಪುರುಷ ಅದನ್ನು ಮಹಿಳೆ ನೋಡಿಕೊಳ್ಳಲು ಪ್ರೇರೇಪಿಸಲು ಇಂತಹ ಆದರ್ಶಗಳನ್ನು ಆಕೆಗೆ ಆರೋಪಿಸಿದ್ದಾನೆ. 'ಪುರುಷೋತ್ತಮ' ಕಾದಂಬರಿಯ ಸಾವಿತ್ರಿ, 'ಮುಸ್ಸಂಜೆ ಕಥಾ ಪ್ರಸಂಗ'ದ ಆಣೆ ಬಡ್ಡಿ ರಂಗವ್ವ, 'ಉಮಾಪತಿಯ ಸ್ಕಾಲರ್ ಷಿಪ್‌ಯಾತ್ರೆ'ಯ ಈರವ್ವ, ಈ ಮೊದಲಾದ ತಾಯಂದಿರು ತಮ್ಮ ತಾಯ್ತನದ ಕಾರಣಕ್ಕಾಗಿ ಮುಖ್ಯರೆನಿಸುತ್ತಾರೆ. ಜೊತೆಗೆ ಅವರು ತಮ್ಮ ತಾಯ್ತನದ ಆದರ್ಶ ಕಾಪಾಡಿಕೊಳ್ಳಲು ಯಾವ ಪ್ರಯತ್ನಕ್ಕಾದರೂ ಕೈ ಹಾಕುತ್ತಾರೆ. ಇವರನ್ನು ಬಿಟ್ಟರೆ ನವ್ಯ ಕಥನ ಸಾಹಿತ್ಯದಲ್ಲಿ ಎಲ್ಲೂ ಆದರ್ಶ ತಂದೆಯರು ಕಾಣಸಿಗುವುದೇ ಇಲ್ಲ. ಈ ತಾರತಮ್ಯವು ನವ್ಯ ಲೇಖಕರು ತಾಯ್ತನದ ಆದರ್ಶಕ್ಕೆ ಬದ್ಧರಾಗಿದ್ದರು ಎಂಬುದನ್ನು ತೋರಿಸುತ್ತದೆ. "...... ಒಬ್ಬೊಬ್ರೂ ಹತ್ತು ಹತ್ತು ಹಡಿಯೊ ಹಂಗೆ ಮಾಡಬೇಕು. ಪುರುಸೊತ್ತೇ ಕೊಡಬಾರ್ದು. ಹಂಗಿದ್ರೆ ನೋಡಪ್ಪಾ ಈ ಹಾಳ್ಮುಂಡೇರನ್ನ ಹದ್‌ಬಸ್ತಿಗೆ ತರಬೌದು" (ಪೂರ್ಣಚಂದ್ರ ತೇಜಸ್ವಿ, ಕಿರಗೂರಿನ ಗಯ್ಯಾಳಿಗಳು, ೨೦೦೬, ಪುಟ ೧೫) ಎಂದು ಸಿದ್ಧನು ಮಹಿಳೆಯನ್ನು ನಿಯಂತ್ರಣಕ್ಕೆ ಒಳಪಡಿಸಬಹುದಾದ ಉಪಾಯ ಹೇಳುತ್ತಾನೆ. ತಾಯ್ತನ ಎನ್ನುವುದು ಮಹಿಳೆಯರನ್ನು ಪುರುಷರು ಶೋಷಿಸುವ ಮಾರ್ಗವಾಗಿದೆ. ಹೆರುವ ಯಂತ್ರವನ್ನಾಗಿಸಿ ಮಹಿಳೆಯರನ್ನು ಹದ್ದುಬಸ್ತಿನಲ್ಲಿಡುವ ಪುರುಷ ವ್ಯವಸ್ಥೆಯ ಅನಾವರಣ ಇಲ್ಲಿ ಆಗಿದೆ.

ವೀಣಾಶಾಂತೇಶ್ವರವರ ಕಥನ ಸಾಹಿತ್ಯದಲ್ಲಿ ತಾಯ್ತನದ ಪ್ರಜ್ಞೆ ಮಹಿಳೆಯ ಆಯ್ಕೆಯ ಸ್ವಾತಂತ್ರ್ಯದ ದ್ಯೋತಕವಾಗಿ ಬರುತ್ತದೆ. ಮಗುವನ್ನು ಹೆರುವುದು ನನ್ನ ಜನ್ಮ ಸಿದ್ಧ ಹಕ್ಕು ಎಂದು ಹೇಳುವ ಮಹಿಳೆ ವೀಣಾರವರ ಕಥನ ಸಾಹಿತ್ಯದಲ್ಲಿ ಕಾಣಸಿಗುತ್ತಾಳೆ. ತಾನು ಮೆಚ್ಚಿದವನನ್ನೇ ನಿರಾಕರಿಸಲು ಮುಂದಾಗುತ್ತಾಳೆ. ತಾಯ್ತನವನ್ನು ಮಹಿಳೆ ಮೇಲೆ ಹೇರುವಿಕೆ ಮತ್ತು ತಾಯ್ತನದಿಂದ ಮಹಿಳೆಯನ್ನು ವಂಚಿಸುವಿಕೆ ಈ ಎರಡೂ ಕೂಡ ಮಹಿಳೆಯನ್ನು ಶೋಷಿಸಲು ಬಳುಸವ ಅಸ್ತ್ರಗಳೇ ಅಗಿವೆ. ತಾಯ್ತನವನ್ನು ಹೇರುವಿಕೆಯ ವಿರುದ್ಧ ಪ್ರತಿಭಟಿಸುವ ಮಹಿಳೆಯನ್ನು ನಾವು ನವ್ಯ ಕಥನ ಸಾಹಿತ್ಯದಲ್ಲಿ ಕಾಣುವುದಿಲ್ಲ. ಆದರೆ ತಾಯ್ತನದಿಂದ ವಂಚಿಸುವ ವಿರುದ್ದ ಪ್ರತಿಭಟಿಸುವ ಮಹಿಳೆಯನ್ನು ವೀಣಾಶಾಂತೇಶ್ವರರವರ ಕಥನ ಸಾಹಿತ್ಯದಲ್ಲಿ ನಾವು ಕಾಣಬಹುದಾಗಿದೆ.

### ೧೦.೧.೪ ವೈಧವ್ಯದ ಪ್ರಜ್ಞೆ:

ಶೀಲ, ಪಾತಿವ್ರತ್ಯ, ತಾಯ್ತನಗಳಂತೆ ಮಹಿಳೆಯನ್ನು ಹತೋಟಿಯಲ್ಲಿ ಇಡಲು ವ್ಯವಸ್ಥೆ ರೂಪಿಸಿಕೊಂಡಿರುವ ಮತ್ತೊಂದು ಪ್ರಜ್ಞೆಯೇ ವೈಧವ್ಯವಾಗಿದೆ. ಗಂಡ ಸತ್ತ ನಂತರ ಆತನ ಹೆಂಡತಿಯ ತಲೆ ಬೋಳಿಸಿ, ಮಾಂಗಲ್ಯ, ಕುಂಕುಮ, ಬಳೆಗಳನ್ನು ತೆಗೆದು ಹಾಕಿ, ಒಪ್ಪತ್ತು ಊಟ ನೀಡುವ ಮೊದಲಾದ ಕ್ರೂರ ಶಿಕ್ಷೆ ವಿಧಿಸುವ ಪದ್ಧತಿಯೇ ವೈಧವ್ಯ ಪ್ರಜ್ಞೆಯಾಗಿದೆ. ಗಂಡ ಸತ್ತ ನಂತರದಲ್ಲಿ ಆ ಮಹಿಳೆಯ ಅಸ್ತಿತ್ವವನ್ನು ಇಲ್ಲವಾಗಿಸುವ ಪ್ರಯತ್ನ ಇದಾಗಿದೆ. ದೈಹಿಕವಾಗಿ ಮತ್ತು ಮಾನಸಿಕವಾಗಿ ಮಹಿಳೆಯನ್ನು ಕ್ರೂರವಾಗಿ ಹಿಂಸಿಸುವ ಈ ಪದ್ಧತಿ ಮಹಿಳೆಯು ಬದುಕಿದ್ದು ಸತ್ತಂತೆ ಇರುವಂತೆ ಮಾಡುತ್ತದೆ. ಇಂಥ ಹೀನ ಆಚರಣೆಯನ್ನು ಇಲ್ಲವಾಗಿಸಲು ಸಮಾಜ ಸುಧಾರಕರು ಪ್ರಯತ್ನ ಪಟ್ಟಿದ್ದರು. ಅದರ ಫಲವಾಗಿ ವಿಧವಾ ವಿವಾಹ ಕಾನೂನು ಜಾರಿಗೆ ಬಂತು. ಕಾನೂನು ಬಂದರೂ ವಿಧವಾ ವಿವಾಹದ ಬಗ್ಗೆ ಸಂಪ್ರದಾಯಸ್ಥ ಸಮಾಜದಲ್ಲಿ ಅಂತಹ ಮನ್ನಣೆ ಇಲ್ಲ. ಎಂ.ಕೆ.ಇಂದಿರಾ ರವರ 'ಫಣಿಯಮ್ಮ' ಕಾದಂಬರಿ ವೈಧವ್ಯಕ್ಕೆ ಒಳಗಾದ ಮಹಿಳೆಯ ಜೀವನದ ಸಂಕಥನ ವಾಗಿದೆ. ಈ ರೀತಿ ಸಾಹಿತ್ಯದಲ್ಲಿ ಇಂಥ ಹೀನ ಆಚರಣೆಯು ಸ್ಥಾನ ಪಡೆದುಕೊಂಡು ಸಾಮಾಜಿಕರಲ್ಲಿ ಜಾಗೃತಿ ಮೂಡಿಸುವ ಕೆಲಸ ಮಾಡುತ್ತಿದೆ.

ಸಂಪ್ರದಾಯಸ್ಥ ಬ್ರಾಹ್ಮಣರಲ್ಲಿ ಕಟ್ಟುನಿಟ್ಟಾಗಿ ಆಚರಿಸಲ್ಪಡುವ ಈ ಪದ್ಧತಿಯನ್ನು ನವ್ಯ ಕಾಲಘಟ್ಟದ ಅನಂತಮೂರ್ತಿಯವರ ಕಥನ ಸಾಹಿತ್ಯದಲ್ಲಿ ನಾವು ಗಮನಿಸಬಹುದಾಗಿದೆ. 'ಘಟಶ್ರಾದ್ಧ' ಕಥೆಯ ಯಮುನಕ್ಕ ಬ್ರಾಹ್ಮಣ ಸಮಾಜದ ವೈಧವ್ಯದ ಆಚರಣೆಗೆ ಒಳಗಾಗಿರುವ ಮಹಿಳೆ. ವೈಧವ್ಯದ ಆಚರಣೆಗೆ ಒಳಗಾಗಿರುವ ಮಹಿಳೆಯೊಬ್ಬಳು ಬದುಕಿರುವಾಗಲೇ ಶ್ರಾದ್ಧಕ್ಕೆ ಗುರಿಯಾಗುವುದನ್ನು ಈ ಕಥೆ ತಿಳಿಸುತ್ತದೆ. ವಿಧವೆ ಎನ್ನುವ ಮಾತ್ರಕ್ಕೆ ಆಕೆಯ ದೈಹಿಕ ಆಸೆಗಳು ಕಮರಿ ಹೋಗದೇ ಇರುವುದನ್ನು ಇಲ್ಲಿ ಹೇಳಲಾಗಿದೆ. "ಹುಚ್ಚೆದ್ದು ಕುಣಿಯುವ ಇಂದ್ರಿಯಗಳನ್ನು ತೆಪ್ಪಗಿರು ನನ್ನ ಕಂಕುಳಲ್ಲಿ ಎಂದು ಅದುಮಿಡಲು ಸಾಧ್ಯವಿಲ್ಲ" (ಯು.ಆರ್.ಅನಂತಮೂರ್ತಿ, ಐದುದಶಕದ ಕಥೆಗಳು, ೨೦೦೭, ಪುಟ ೯೭) ಆದರೆ ಸಮಾಜವು ಮಹಿಳೆಯರ ಮೇಲೆ ಅದರಲ್ಲೂ ವಿಧವೆಯರ ಮೇಲೆ ಇಂತಹ ನಿರ್ಬಂಧಗಳನ್ನು ಹಾಕಿದೆ. ಅವರು ತಮ್ಮ ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಳ್ಳ ಬೇಕೆಂದು ಬಯಸುತ್ತದೆ. ಆದರೆ 'ಪ್ರಕೃತಿ' ಕಥೆಯ ಲಕ್ಷ್ಮಿ, 'ಘಟಶ್ರಾದ್ಧ'ದ ಯಮುನಕ್ಕ ಈ ಮೊದಲಾದವರು ವೈಧವ್ಯಕ್ಕೆ

ಒಳಗಾಗಿದ್ದರೂ ತಮ್ಮ ಲೈಂಗಿಕ ಪ್ರಜ್ಞೆಯ ಕಾರಣಕ್ಕಾಗಿಯೇ ವ್ಯವಸ್ಥೆಯ ಕ್ರೂರತೆಗೆ ಒಳಗಾಗುತ್ತಾರೆ.

ವೈಧವ್ಯ ಪದ್ಧತಿಯ ಹೀನ ಆಚರಣೆಯಲ್ಲಿ ತಮ್ಮ ಬದುಕನ್ನು ಕಳೆದುಕೊಂಡಿರುವ ಮಹಿಳೆಯ ಜೀವನವನ್ನೇ ನವ್ಯ ಸಾಹಿತಿಗಳು ಅಭಿವ್ಯಕ್ತಿಸಿದ್ದಾರೆ. ಅದರ ಜೊತೆಗೆ ಸಮಾಜದ ವೈಧವ್ಯದ ಆಚರಣೆಗೆ ತಮ್ಮನ್ನು ತಾವು ಒಡ್ಡಿಕೊಳ್ಳದೆ ತಮ್ಮ ಬದುಕನ್ನು ಕಟ್ಟಿಕೊಳ್ಳುವ 'ದಿವ್ಯ' ಕಾದಂಬರಿಯಲ್ಲಿನ ವಿಮಲಳಂತಹ ಮಹಿಳೆಯರನ್ನು ಚಿತ್ರಿಸಿದ್ದಾರೆ. ಶಾಂತಿನಾಥ ದೇಸಾಯಿಯವರು ತಮ್ಮ 'ಓಂಣಮೋ' ಕಾದಂಬರಿಯಲ್ಲಿ ವಿಧವಾ ವಿವಾಹಕ್ಕೆ ಉತ್ತೇಜನ ನೀಡಿದ್ದಾರೆ. ಆಣೆಬಡ್ಡಿ ರಂಗವ್ವ, ಈರವ್ವನಂತಹ ಮಹಿಳೆಯರು ತಾವು ವಿಧವೆಯರಾದರೂ ಸಮಾಜದಲ್ಲಿ ತಮ್ಮ ಬದುಕನ್ನು ಕಟ್ಟಿಕೊಳ್ಳುವುದಕ್ಕೆ ಮುಂದಾಗುವ ರೀತಿಯನ್ನು ಲಂಕೇಶ್ ತಮ್ಮ ಕಥನ ಸಾಹಿತ್ಯದಲ್ಲಿ ಅನಾವರಣ ಮಾಡಿದ್ದಾರೆ. ಸಂಪ್ರದಾಯ ಸಮಾಜವು ವೈಧವ್ಯದ ಪ್ರಜ್ಞೆಯನ್ನು ಮಹಿಳೆಯ ಮೇಲೆ ಬಲವಂತವಾಗಿ ಹೇರುವುದರಿಂದ ಆಗುವ ಮಹಿಳೆಯ ಅಸ್ತಿತ್ವ ನಷ್ಟವನ್ನು ನವ್ಯ ಲೇಖಕರು ಗುರುತಿಸಿದ್ದಾರೆ. ಅದರ ಜೊತೆಗೆ ವಿಧವೆಯರು ಆಧುನಿಕ ಸಮಾಜದಲ್ಲಿ ತಮ್ಮ ಬದುಕನ್ನು ಕಟ್ಟಿಕೊಳ್ಳಲು ಹೆಣಗಾಡುವ, ಬದುಕಿನ ಬಗ್ಗೆ ಅವರು ತೋರಿಸುವ ಪ್ರೀತಿಯನ್ನು ನವ್ಯ ಲೇಖಕರು ಅಭಿವ್ಯಕ್ತಿಸಿದ್ದಾರೆ. ಶೀಲ, ಪಾತಿವ್ರತ್ಯ, ತಾಯ್ತನ ಪ್ರಜ್ಞೆಗಳಂತೆ ವೈಧವ್ಯ ಪ್ರಜ್ಞೆಯು ಮಹಿಳೆಯ ಅಸ್ತಿತ್ವವನ್ನು ನವ್ಯ ಕಥನ ಸಾಹಿತ್ಯದಲ್ಲಿ ಬಹುತೇಕವಾಗಿ ನಾಶ ಮಾಡಲು ಮುಂದಾಗಿಲ್ಲ. ವೈಧವ್ಯದ ಹೀನ ಆಚರಣೆಗಳಿಂದ ಆಗುವ ಮಹಿಳಾ ಶೋಷಣೆಯನ್ನು ನವ್ಯ ಲೇಖಕರು ತಮ್ಮ ಕಥನ ಸಾಹಿತ್ಯದಲ್ಲಿ ಅಭಿವ್ಯಕ್ತಿಸಿದ್ದಾರೆ. ಮಹಿಳೆಯರಿಗಾಗಿಯೇ ರೂಪಿಸಿದ ಈ ಎಲ್ಲಾ ಆದರ್ಶಗಳು ಮಹಿಳೆಯನ್ನು ಹಂತ ಹಂತವಾಗಿ ಶೋಷಿಸುವುದನ್ನು ನಾವು ಗಮನಿಸಬಹುದಾಗಿದೆ. ನವ್ಯ ಲೇಖಕರು ಈ ಆದರ್ಶಗಳನ್ನು ತಮ್ಮ ಕಥನ ಸಾಹಿತ್ಯದಲ್ಲಿ ತರುವ ಮೂಲಕ ಇಂತಹ ಆದರ್ಶಗಳು ಮಹಿಳೆಯ ಬದುಕನ್ನು ಶೋಷಿಸಿರುವ ರೀತಿಯನ್ನು ಕಂಡರಿಸಿದ್ದಾರೆ ಹೊರತು ಅದರಿಂದ ಮಹಿಳೆಯು ಹೊರ ಬರುವ ಮಾರ್ಗಗಳನ್ನು ತಿಳಿಸುವ ಗೋಜಿಗೆ ಹೋಗಿಲ್ಲ. ಆದರೆ ವಿಧವಾ ವಿವಾಹವನ್ನು ಮಾಡಿಸುವ ಮೂಲಕ ಕ್ರಾಂತಿಕಾರಿ ಹೆಜ್ಜೆಯನ್ನು ನವ್ಯ ಲೇಖಕರು ಇಡುತ್ತಾರೆ. ಇದನ್ನು ಹೊರತುಪಡಿಸಿದರೆ ಬೇರೆಲ್ಲೂ ಇಂತಹ ಕ್ರಾಂತಿಕಾರಿ ಬೆಳವಣಿಗೆಯನ್ನು ನವ್ಯ ಲೇಖಕರಲ್ಲಿ ಕಾಣಲು ಸಾಧ್ಯವಿಲ್ಲ. ಸಮಾಜದಲ್ಲಿರುವ ಮಹಿಳಾ ಸಮಸ್ಯೆಗಳು, ಶೋಷಣೆಗಳು ನವ್ಯ ಕಥನ ಸಾಹಿತ್ಯದಲ್ಲಿ ಕಲಾತ್ಮಕತೆಯ ಚೌಕಟ್ಟನ್ನು ಮಾತ್ರ ಪಡೆದಿವೆ.

ಅಸ್ತಿತ್ವವಾದ (Existentialism) ಎನ್ನುವ ಪಾಶ್ಚತ್ಯ ವಿಚಾರಧಾರೆಯಿಂದ ನವ್ಯ ಸಾಹಿತ್ಯ ಪರಂಪರೆಯು ಪ್ರೇರಣೆಗೊಂಡಿದೆ. ೧೯ನೇ ಶತಮಾನದ ಕನ್ನಡ ಸಾಹಿತ್ಯ ಪರಂಪರೆ 'ರೊಮ್ಯಾಂಟಿಸಂ' ಎಂಬ ಪಾಶ್ಚತ್ಯ ವಿಚಾರಧಾರೆ ನಾಂದಿ ಹಾಡಿದಂತೆ, ಸ್ವಾತಂತ್ರ್ಯೋತ್ತರ ಕಾಲದಲ್ಲಿ ಸಾಂಸ್ಕೃತಿಕ ಮತ್ತು ರಾಜಕೀಯ ಭ್ರಮ ನಿರಸನವಾದಗ ಎಲಿಯೆಟ್, ಸಾರ್ತ್ರ್, ಕಾಮೂ ಮುಂತಾದವರ ವಿಚಾರಧಾರೆಗೆ ಕನ್ನಡ ಸಾಹಿತ್ಯ ಪರಂಪರೆಯು ಮುಖಾ ಮುಖಿಯಾಯಿತು. ೧೯೫೦ರಿಂದೀಚೆಗೆ ಮುಖ್ಯವಾಗಿ ೧೯೬೦ ರಿಂದ ೧೯೭೦ ರವರೆಗೆ ಅಸ್ತಿತ್ವವಾದ ಕೇವಲ ಕನ್ನಡ ಸಾಹಿತ್ಯದಲ್ಲಿ ಅಷ್ಟೆ ಅಲ್ಲದೆ, ಭಾರತದ ಸಾಹಿತ್ಯಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಸೇರಿಕೊಂಡಿತು ಎಂದು ವಿದ್ವಾಂಸರು ಗುರುತಿಸಿದ್ದಾರೆ. ೧೯೫೦-೬೦ರ ಕಾಲದಲ್ಲಿ ಸಾಮಾನ್ಯವಾಗಿ ಎಲ್ಲಾ ತರುಣ ಪೀಳಿಗೆಯ ಲೇಖಕರಿಗೆ ಸಾರ್ತ್ರ್, ಕಾಮೂ ಆದರ್ಶಪ್ರಾಯರಾಗಿದ್ದರು. ಸಾರ್ತ್ರ್, ಕಾಮು ಅವರ ಪುಸ್ತಕಗಳನ್ನು ಓದದೆ ಇದ್ದವರಿಗೂ ಅವರ ವಿಚಾರಗಳ ಬಗ್ಗೆ ಅರಿವು ಇತ್ತು, ವ್ಯಕ್ತಿ ನಿಷ್ಠ ಮತ್ತು ಆತ್ಮ ನಿಷ್ಠ ತತ್ವ ಪ್ರಣಾಲಿಯಾದ ಅಸ್ತಿತ್ವವಾದವು ನವ್ಯ ಸಾಹಿತ್ಯ ಸಂದರ್ಭದಲ್ಲಿ ಕಾವ್ಯಕ್ಕಿಂತ ಕಥನ ಸಾಹಿತ್ಯದಲ್ಲಿ ಹೆಚ್ಚು ದಟ್ಟವಾಗಿ ಮೂಡಿಬಂದಿದೆ. ರಾಮಾನುಜನ್ನರ 'ಹಳದಿಮೀನು', ಅನಂತ ಮೂರ್ತಿಯವರ 'ಸಂಸ್ಕಾರ', ಚಿತ್ತಾಲರ 'ಮುಕ್ತಿ', ಗಿರಿಯವರ 'ಗತಿ-ಸ್ಥಿತಿ', ತೇಜಸ್ವಿಯವರ 'ಸ್ವರೂಪ', ಲಂಕೇಶರ 'ಬಿರುಕು' ಈ ಮೊದಲಾದವುಗಳಲ್ಲಿ ಅಸ್ತಿತ್ವವಾದದ ದಟ್ಟ ಪ್ರಭಾವವನ್ನು ಕಾಣಬಹುದಾಗಿದೆ.

ಅನಂತಮೂರ್ತಿಯವರ 'ಸಂಸ್ಕಾರ'ದ ಮೂರನೆಯ ಭಾಗ ಸಂಪೂರ್ಣವಾಗಿ ಅಸ್ತಿತ್ವವಾದದ ಪ್ರಭಾವವನ್ನು ಸೃಷ್ಟಿಕರಿಸುತ್ತದೆ. ಪ್ರಾಣೇಶಚಾರ್ಯ, ಚಂದ್ರಿಯ ಸಮಾಗಮದ ನಂತರ ಮಾಡುವ ವಿಚಾರಗಳೆಲ್ಲವು ಅಸ್ತಿತ್ವವಾದದ ಛಾಯೆಯನ್ನು ಒಳಗೊಂಡಿದೆ. 'ಸಂಸ್ಕಾರ'ದ ಕೇಂದ್ರ ಪಾತ್ರವಾದ ಪ್ರಾಣೇಶಾಚಾರ್ಯರು ಸಾಂಪ್ರದಾಯಕವಾದ ನೀತಿ ನಿಯಮಗಳಡಿಯಲ್ಲಿ ಅಪ್ರಾಮಾಣಿಕವಾದ ಬದುಕನ್ನು ನಡೆಸುತ್ತಿದ್ದವರು. ನಾರಣಪ್ಪನ ಸಾವಿನಂತೆ, ಚಂದ್ರಿಯೊಡನೆ ಆದ ಸಮಾಗಮ ಪ್ರಾಣೇಶಾಚಾರ್ಯರ ಜೀವನದ ಅಪ್ರಾಮಾಣಿ ಕತೆಯನ್ನು ಸ್ಫೋಟಿಸುತ್ತದೆ. ಆ ನಂತರ ಅವರಿಗೆ ತಮ್ಮ ಅಸ್ತಿತ್ವದ ದರ್ಶನವಾಗುತ್ತದೆ. ಪ್ರಾಣೇಶಚಾರ್ಯರು ಪ್ರಾಮಾಣಿಕ ಅಸ್ತಿತ್ವಕ್ಕೆ ನಡೆಸುವ ಹೋರಾಟಕ್ಕೆ ನಾರಣಪ್ಪನಂತೆ, ಚಂದ್ರಿ ನಾಂದಿ ಆಗುತ್ತಾಳೆ.

ಅಸ್ತಿತ್ವವಾದಿ ಕಲ್ಪನೆಯಲ್ಲಿ ಸ್ವಾತಂತ್ರ್ಯ ಮತ್ತು ಆಯ್ಕೆಗಳ ಮತ್ತು ನಿರ್ಧಾರಗಳ ಪರಿಕಲ್ಪನೆ ಅತ್ಯಂತ ಮುಖ್ಯವಾಗಿದೆ. ಸ್ವಾತಂತ್ರ್ಯದ ಮೂಲಕವೆ ವ್ಯಕ್ತಿ ಆಯ್ಕೆ ಮಾಡಿ

ಕೊಳ್ಳುತ್ತಾನೆ. ವ್ಯಕ್ತಿಯು ಒಂದು ಸಾಧ್ಯತೆಯನ್ನು ಆಯ್ಕೆ ಮಾಡಿಕೊಳ್ಳಲು ನಿರ್ಧರಿಸಿದ ಎಂದರೆ ಉಳಿದ ಎಲ್ಲ ಸಾಧ್ಯತೆಗಳನ್ನು ಅತ ತಿರಸ್ಕರಿಸಿದ ಎಂದಾಗುತ್ತದೆ. ಪ್ರತಿಯೊಂದು ಆಯ್ಕೆಯು ವ್ಯಕ್ತಿಯು ಕೆಲವದರ ಪರವಾಗಿ ಮತ್ತು ವಿರುದ್ಧವಾಗಿ ತೆಗೆದುಕೊಂಡ ತೀರ್ಮಾನವಾಗುತ್ತದೆ. ತೀರ್ಮಾನಿಸುವುದು ಒಂದು ಹೊಸ ಮಟ್ಟದ ಅಸ್ತಿತ್ವದ ಕಡೆಗೆ ಹೋಗುವುದು ಮತ್ತು ಅದೇ ರೀತಿ ಇನ್ನೊಂದು ಕಡೆ ನಮಗಾಗಿ ತೆರೆದಿರುವ ಅನೇಕಾನೇಕ ಸಾಧ್ಯತೆಗಳನ್ನು ತಿರಸ್ಕರಿಸುವುದು ಎಂದು ಅರ್ಥ. ಸಾಮಾನ್ಯವಾಗಿ ಪುರುಷರಿಗೆ ಆಯ್ಕೆ ಮತ್ತು ನಿರ್ಧಾರಗಳ ಸ್ವಾತಂತ್ರ್ಯವಿರುತ್ತದೆ. ನವ್ಯ ಕಥನ ಸಾಹಿತ್ಯದಲ್ಲಿ ಲೇಖಕರ ಕಥಾನಾಯಕರು ಇದೇ ತತ್ವಕ್ಕೆ ಬದ್ಧರಾಗಿದ್ದು ಅಲ್ಲಿನ ಮಹಿಳೆಯರಿಗೆ ಆಯ್ಕೆ ಮತ್ತು ನಿರ್ಧಾರಗಳ ಸ್ವಾತಂತ್ರ್ಯ ಇರುವುದಿಲ್ಲ. ಆದರೆ ರಾಜಲಕ್ಷ್ಮಿ ಎನ್.ರಾವ್ ಮತ್ತು ವೀಣಾ ಶಾಂತೇಶ್ವರ ಅವರ ಕಥನ ಸಾಹಿತ್ಯದಲ್ಲಿ ಮಹಿಳೆಯರಿಗೆ ಇಂತಹ ಸ್ವಾತಂತ್ರ್ಯ ವಿರುತ್ತದೆ. ಆ ಮೂಲಕ ಮಹಿಳೆ ತನ್ನ ಅಸ್ತಿತ್ವವನ್ನು ಕಂಡು ಕೊಳ್ಳುತ್ತಾಳೆ. ಮಿನಿ, ಪಾರ್ವತಿ ಈ ಮೊದಲಾದವರು ತಮ್ಮ ಬದುಕಿನ ಆಯ್ಕೆ ಮತ್ತು ನಿರ್ಧಾರದ ಸ್ವಾತಂತ್ರ್ಯವನ್ನು ಹೊಂದಿರುವವರಾಗಿದ್ದಾರೆ.

ಮೃತ್ಯ ಪ್ರಜ್ಞೆಯು ಅಸ್ತಿತ್ವವಾದದ ಮೂಲಭೂತ ಅಂಶಗಳಲ್ಲಿ ಒಂದಾಗಿದೆ. ಈ ಮೃತ್ಯ ಪ್ರಜ್ಞೆಯು ಚಿತ್ತಾಲರ ಕಥನ ಸಾಹಿತ್ಯದಲ್ಲಿ ದಟ್ಟವಾಗಿ ಕಾಣಿಸಿಕೊಳ್ಳುತ್ತದೆ. ಚಿತ್ತಾಲರ 'ಅಹಲ್ಯೆ' ಕತೆಯಲ್ಲಿ ಬರುವ ನಾಯಿ ಆಕೆಯ ಜೀವನದ ದುರಂತದ ಮುನ್ಸೂಚನೆಯಾಗಿರುವಂತೆ ಆಕೆಯ ಸಾವಿಗೂ ಕಾರಣವಾಗುತ್ತದೆ. ಇವರ ಕಥನ ಸಾಹಿತ್ಯದಲ್ಲಿನ ನಿರ್ಮಲೆ, ಆಬೋಲೀನ, ಜಾನಕಿಯರ ಸಾವು ಮೃತ್ಯವು ಪ್ರಜ್ಞೆಯಲ್ಲಿ ವಿಶಿಷ್ಟ ಆಯಾಮವನ್ನು ಪಡೆದುಕೊಳ್ಳುತ್ತದೆ. ಓದುಗರನ್ನು ಚಿಂತನಗೆ ಗುರಿಮಾಡುವಂತಹ ನಿರಪರಾಧಿಗಳ ಸಾವಿನ ರೂಪಕವು ಚಿತ್ತಾಲ ಕಥನ ಶಿಲ್ಪಕ್ಕೆ ವಿಶಿಷ್ಟವಾದ ಸೌಂದರ್ಯವನ್ನು ನೀಡುತ್ತದೆ. ಚಿತ್ತಾಲರ ಕಥನ ಸಾಹಿತ್ಯವನ್ನು ಗಮನಿಸಿದರೆ ಅವರ ಕೃತಿಗಳ ಶೀರ್ಷಿಕೆಯಿಂದ ಹಿಡಿದು ಅಲ್ಲಿನ ಪಾತ್ರಗಳ ಹೆಸರು, ಅವರ ಮಾತುಗಳು ಸಾಂಕೇತಿಕತೆಯಿಂದ ಕೂಡಿವೆ. ಪುರುಷೋತ್ತಮ, ಜಾನಕಿ, ಸೀತೆ, ಸಾವಿತ್ರಿ, ಸರಸ್ವತಿ, ಲಕ್ಷ್ಮಿ, ರೋಹಿಣಿ ಈ ಮೊದಲಾದ ಹೆಸರುಗಳೆಲ್ಲ ಪೌರಾಣಿಕ ಪ್ರತಿಮೆಗಳ ಸ್ಥಾನ ಪಡೆಯುತ್ತವೆ. ಸೀತೆಯಂತಹ ಸೀತೆ, ಜಾನಕಿಯಂತಹ ಜಾನಕಿ ಎನ್ನುವ ಚಿತ್ತಾಲರ ಮಾತುಗಳು ಸಾಂಕೇತಿಕತೆಯನ್ನು ಸಾರುತ್ತದೆ. ಇವರ 'ಮೂರು ದಾರಿಗಳು' ಕಾದಂಬರಿಯ ನಿರ್ಮಲೆ ಒಂದು ಪ್ರತಿಮಾತ್ಮಕ ಹೆಸರಾಗಿದೆ. ನಿರ್ಮಲೆ ಎಂಬ ಪದ ಪರಿಶುದ್ಧಳು ಎನ್ನುವ ಅರ್ಥ ನೀಡುತ್ತದೆ. ಆದರೆ ಕೃತಿಯ ನಿರ್ಮಲೆ ಪರಿಶುದ್ಧಳ ಅಲ್ಲ ಎನ್ನುವ ಸುದ್ಧಿಯೇ ಕಾದಂಬರಿಯ ಪ್ರಧಾನ

ವಾಹಕವಾಗಿದೆ. ಹೀಗೆ ನವ್ಯ ಕಥನ ಸಾಹಿತ್ಯದ ಮಹಿಳೆಯು ನವ್ಯ ಕಥನಕಗಳ ಶಿಲ್ಪಕ್ಕೆ ಅನನ್ಯತೆಯನ್ನು ನೀಡುತ್ತಾಳೆ.

ನವ್ಯ ಸಾಹಿತ್ಯ ಹೊಸತನವನ್ನು ಮೈಗೂಡಿಸಿಕೊಂಡು ಬಂದ ಸಾಹಿತ್ಯವಾಗಿದೆ. ನವ್ಯ ಸಾಹಿತ್ಯ ವಸ್ತು, ತಂತ್ರ, ಭಾಷೆ, ಶೈಲಿ ಈ ಮೊದಲಾದವುಗಳಲ್ಲಿ ಈ ಹಿಂದೆಂದೂ ಕಾಣದ ಹೊಸತನವನ್ನು ಮೈಗೂಡಿಸಿ ಕೊಂಡಿರುವುದನ್ನು ನಾವು ಕಾಣಬಹುದಾಗಿದೆ. ರೂಢಿಗತವಾದ ಸನಾತನ ಮೂಢ ಶ್ರದ್ಧೆಗಳನ್ನು ಬಟಾಬಯಲು ಮಾಡಿ ಅದರ ಅಸ್ತಿತ್ವವನ್ನೇ ಅಲುಗಾಡಿಸುವ ನವ್ಯ ಸಾಹಿತ್ಯ ಮಹಿಳೆಯ ವಿಷಯಕ್ಕೆ ಬಂದಾಗ ಮತ್ತದೇ ಹಳೆಯ ಧೋರಣೆಯನ್ನು ಹೊಂದಿದಂತೆ ಕಾಣುತ್ತದೆ. ಹಿಂದಿನ ಸಾಹಿತ್ಯದಂತೆ ನವ್ಯ ಕಥನ ಸಾಹಿತ್ಯದಲ್ಲಿ ಮಹಿಳೆಯು ದೈಹಿಕ ಸೌಂದರ್ಯದ ವಿವರಗಳಲ್ಲಿ ಮುಳುಗಿ ಹೋಗಿದ್ದಾಳೆ. ನವ್ಯ ಲೇಖಕರು ಹೆಣ್ಣಿನ ದೈಹಿಕ ಸೌಂದರ್ಯವನ್ನು ಪುಂಖಾನುಪುಂಖವಾಗಿ ಸಮಯ ಸಿಕ್ಕಾಗಲೆಲ್ಲಾ ವರ್ಣಿಸಿದ್ದಾರೆ. ಜೊತೆಗೆ ಗಂಡು-ಹೆಣ್ಣಿನ ಲೈಂಗಿಕ ವಿಚಾರಗಳನ್ನು ಯಾವುದೇ ಮುಚ್ಚು ಮರೆಯಿಲ್ಲದೆ ಓದುಗರ ಮುಂದೆ ತೆರೆದಿದ್ದಾರೆ. ಇಲ್ಲೆಲ್ಲಾ ಮಹಿಳೆ ಒಂದು ಭೋಗದ ವಸ್ತು ಎಂಬಂತೆ ಕಾಣತೊಡಗುತ್ತಾಳೆ.

ಲೇಖಕರು ತಮ್ಮ ಕೃತಿಗಳ ಮೂಲಕ ಸಮಾಜದಲ್ಲಿ ನಡೆಯುವ ಅನ್ಯಾಯಗಳ ವಿರುದ್ಧ ಜನರಲ್ಲಿ ಜಾಗೃತಿ ಮೂಡಿಸುವ ಕೆಲಸ ಮಾಡಬೇಕು. ಆದರೆ ನವ್ಯ ಲೇಖಕರು ಮಹಿಳೆಯ ಸಮಸ್ಯೆಗಳ ಬಗ್ಗೆ ಗಂಭೀರವಾಗಿ ಯೋಚಿಸಿಲ್ಲ. ಪ್ರತಿನಿತ್ಯ ಸಾವಿರಾರು ಮಹಿಳೆಯರು ನಾನಾ ರೀತಿಯಲ್ಲಿ ಶೋಷಣೆಗೆ ಒಳಗಾಗುತ್ತಲೇ ಇರುತ್ತಾರೆ. ಇವರು ತಮ್ಮ ಮೇಲಾಗುವ ಶೋಷಣೆ ವಿರುದ್ಧ ಪ್ರತಿಭಟಿಸಿ ನಿಲ್ಲುವ ಶಕ್ತಿಯನ್ನು ಕೊಡುವ ಕೆಲಸವನ್ನು ನವ್ಯ ಲೇಖಕರು ಮಾಡಿಲ್ಲ. ಮಹಿಳೆಯ ಮೇಲಾಗುವ ಶೋಷಣೆಯನ್ನು ತಮ್ಮ ಕಥನ ಸಾಹಿತ್ಯದಲ್ಲಿ ನವ್ಯ ಲೇಖಕರು ತರುವ ಕೆಲಸ ಮಾಡಿದರೂ ಅವೆಲ್ಲ ದಾಖಲಾತಿಯಾಗಿವೆ ಅಷ್ಟೆ. ಮಹಿಳೆ ಈ ಶೋಷಣೆಯನ್ನು ಎದುರಿಸಿ ನಿಲ್ಲುವ ಪ್ರತಿ ತಂತ್ರವನ್ನು ಕಟ್ಟಿಕೊಡುವ ಕೆಲಸವನ್ನು ನವ್ಯ ಲೇಖಕರು ಮಾಡಿಲ್ಲ.

ಈ ಹಿಂದೆ ವಿವರಿಸಲಾಗಿರುವ ಮಹಿಳೆಯರಿಗಾಗಿ ರೂಪಿಸಿರುವ ಆದರ್ಶಗಳನ್ನು ನವ್ಯ ಲೇಖಕರು ಯಥಾವತ್ತಾಗಿ ಬಳಸಿಕೊಂಡಿದ್ದಾರೆ. ಬದಲಿಗೆ ಆ ಆದರ್ಶಗಳನ್ನು ಮಹಿಳೆ ಮೀರಬಹುದಾದ ಸಾಧ್ಯತೆಗಳನ್ನು ಅವರು ನೀಡಿಲ್ಲ. ಅಂತಹ ಸಾಧ್ಯತೆಗಳನ್ನು ನವ್ಯ ಲೇಖಕರು ನೀಡುವ ಅವಕಾಶವಿದ್ದರೂ ಆ ಕಡೆ ಅವರು ತಮ್ಮ ಗಮನವನ್ನು ಹರಿಸಿಲ್ಲ. ಆ ನಿಟ್ಟಿನಲ್ಲಿ ನವ್ಯ ಲೇಖಕರು ಗಮನ ಹರಿಸಿದ್ದರೆ ನವ್ಯ ಕಥನ ಸಾಹಿತ್ಯದಲ್ಲಿ

ಮಹಿಳೆ ಸಶಕ್ತ ಮಹಿಳೆಯಾಗಿ ಕಾಣಸಿಗುತ್ತಿದ್ದಳು. ಆದರೆ ಈಗ ಆ ಮಹಿಳೆ ಕೇವಲ ಭೋಗದ ವಸ್ತುವಾಗಿ ಮಾತ್ರ ಕಾಣ ಸಿಗುತ್ತಿದ್ದಾಳೆ. ಪಾಶ್ಚಾತ್ಯ ವಿಚಾರಧಾರೆಗಳನ್ನು ಮೈಗೂಡಿಸಿ ಕೊಂಡಿದ್ದ ನವ್ಯ ಲೇಖಕರು ಮಹಿಳೆಯ ವಿಚಾರದಲ್ಲಿ ಮತ್ತದೇ ಹಳೆಯ ವಿಚಾರಗಳಿಗೆ ಕಟ್ಟು ಬಿದ್ದಿರುವುದನ್ನು ಗಮನಿಸಿದರೆ ಅವರು ಮಹಿಳಾ ವಿರೋಧಿ ಧೋರಣೆಗಳಿಗೆ ಬದ್ಧರಾಗಿರುವಂತೆ ಕಾಣಿಸುತ್ತದೆ.

ನವ್ಯ ಕಥನ ಸಾಹಿತ್ಯದಲ್ಲಿ ಬರುವ ಬಹುತೇಕ ಮಹಿಳೆಯರು ಪುರುಷನಷ್ಟೇ ಸ್ವತಂತ್ರ ಅಸ್ತಿತ್ವ ಇರುವಂತೆ ಗುರುತಿಸಿಕೊಳ್ಳಲು ಸಾಕಷ್ಟು ಪರಿಶ್ರಮ ಪಟ್ಟಿದ್ದಾರೆ. ಆದರೂ ಅದು ಸಾಧ್ಯವಾಗಿದೇ ನವ್ಯ ಕಥನ ಸಾಹಿತ್ಯದಲ್ಲಿ ಮಹಿಳೆಯು ನಾಯಕನು ತನ್ನ ಅಸ್ತಿತ್ವ ಸ್ಥಾಪಿಸಿಕೊಳ್ಳಲು, ಪೂರ್ಣತ್ವ ಪಡೆಯಲು ಪೂರಕವಾಗಿ ಬಳಕೆಯಾಗುತ್ತಾಳೆ 'ಸಂಸ್ಕಾರ'ದ ಪ್ರಾಣೇಶಾಚಾರ್ಯರು ಚಂದ್ರಿಯ ದೈಹಿಕ ಸಂಪರ್ಕಕ್ಕೆ ಬರುವುದು, 'ಅವಸ್ಥೆ'ಯ ಕೃಷ್ಣಪ್ಪಗೌಡ ದಾದಿಯ ಆರೈಕೆಯ ಸಹವಾಸದಲ್ಲಿ ಪೂರ್ಣತ್ವ ಹೊಂದಲು ಪ್ರಯತ್ನಿಸುವುದು ಈ ಮೊದಲಾದ ಕಡೆಗಳಲ್ಲಿ ನಾಯಕನ ಪೂರ್ಣತ್ವಕ್ಕೆ ಮಹಿಳೆಯು ಬಳಕೆಯಾಗುತ್ತಾಳೆ. ಪುರುಷನ ಸಾಧನೆಯ ಹಾದಿಯಲ್ಲಿ ಮಹಿಳೆ ಏಣಿಯ ಹಾಗೆ ಬಳಕೆಯಾಗುತ್ತಾಳೆ. ಆ ಮೂಲಕ ಇಲ್ಲಿನ ಮಹಿಳೆಯರಿಗೆ ವ್ಯಕ್ತಿತ್ವವೇ ಇಲ್ಲ ಎಂಬಂತೆ ನವ್ಯ ಲೇಖಕರು ಚಿತ್ರಿಸಿದ್ದಾರೆ. ಪುರುಷನ ಸಾಧನೆಯು ಮುಖ್ಯವಾಗುವ ನವ್ಯ ಲೇಖಕರಿಗೆ ಮಹಿಳೆಯ ಅಸ್ತಿತ್ವದ ಪ್ರಶ್ನೆ ಮುಖ್ಯವಾಗುವುದೇ ಇಲ್ಲ.

ನವ್ಯ ಕಥನ ಸಾಹಿತ್ಯದಲ್ಲಿ ಬರುವ ಬಹುಪಾಲು ನಾಯಕರು ಮಾನಸಿಕವಾಗಿ ದುರ್ಬಲರಾಗಿದ್ದಾರೆ. ನಿರ್ಧಾರಗಳನ್ನು ತೆಗೆದುಕೊಳ್ಳುವ ಸಂದರ್ಭಗಳಲ್ಲಿ ದ್ವಂದ್ವಾತ್ಮಕವಾಗಿ ನಡೆದು ಕೊಳ್ಳುತ್ತಾರೆ ಇಂತಹ ಸಮಯಗಳಲ್ಲಿ ಮಹಿಳೆ ನಾಯಕನಿಗೆ ಆಸರೆಯಾಗುತ್ತಾಳೆ. ಅದಾಗ್ಯೂ ಮಹಿಳೆಯ ಈ ಅಂಶ ಮುನ್ನೆಲೆಗೆ ಬರದೇ ಪುರುಷನ ಸಾಧನೆಯೇ ಮುಖ್ಯವಾಗಿ ಚರ್ಚಿತವಾಗುತ್ತದೆ. ಅದೇ ವೈಭವೀಕರಣಗೊಳ್ಳುತ್ತದೆ. ನವ್ಯ ಲೇಖಕರು ಜೀವನ ದರ್ಶನ ಮಾಡಿಸುವ ಮಹಿಳೆಯನ್ನು ಗಮನಿಸದೆ ಆಕೆ ಪುರುಷನ ಸಾಧನೆಯ ಪೂರಕಳು ಎಂಬಂತೆ ವರ್ಣಿಸಿದ್ದಾರೆ. ಮಹಿಳೆಯ ಸ್ವತಂತ್ರ ವ್ಯಕ್ತಿತ್ವ ಪ್ರತಿಭೆಯನ್ನು ನಿರೂಪಿಸುವಲ್ಲಿ ನವ್ಯ ಕಥನ ಸಾಹಿತ್ಯ ವಿಫಲವಾಗಿದೆ.

ನವ್ಯ ಕಥನ ಸಾಹಿತ್ಯದ ನಾಯಕನಿಗೆ ಮಹಿಳೆ ಲೈಂಗಿಕವಾಗಿ ಬಳಕೆಯಾಗುವ ಮೂಲಕ ಭೋಗದ ವಸ್ತು ವಾಗಿದ್ದಾಳೆ. ನವ್ಯ ಕಥನ ಸಾಹಿತ್ಯದಲ್ಲಿನ ಮಹಿಳೆಯಲ್ಲಿನ ವ್ಯಕ್ತಿತ್ವ, ಅಸ್ತಿತ್ವ, ಪ್ರತಿಭೆಗಳು ಮುನ್ನೆಲೆಗೆ ಬಾರದೆ ಹೋದರೂ ಆಕೆಯ ದೈಹಿಕ ಸೌಂದರ್ಯದ ಚರ್ಚೆ ಮಾತ್ರ ಎಲ್ಲೆ ಮೀರಿ ನಡೆದಿದೆ. ಆಕೆಯ ದೈಹಿಕ

ಸೌಂದರ್ಯದ ವರ್ಣನೆಗೆ ನವ್ಯ ಲೇಖಕರು ಹೆಚ್ಚಿನ ಗಮನ ನೀಡಿದ್ದಾರೆ. ಮಹಿಳೆಯ ನುಣುಪಾದ ಮಾಂಸ, ಬೆತ್ತಲೆ ತೊಡೆ, ಮೊಲೆ ಇವೆಲ್ಲಾ ನವ್ಯ ಲೇಖಕರ ಕಥನ ಸಾಹಿತ್ಯದಲ್ಲಿ ವಿಜೃಂಭಿಸಿವೆ. ಗಂಡು-ಹೆಣ್ಣಿನ ಲೈಂಗಿಕ ವಿವರಗಳು ಸಂಪೂರ್ಣವಾಗಿ ಇಲ್ಲಿ ಮೂಡಿ ಬಂದಿವೆ. ಮಹಿಳೆಯ ದೈಹಿಕ ಸೌಂದರ್ಯವನ್ನು ಭಾಷೆಯ ಮೂಲಕ ಬೆತ್ತಲು ಮೂಡುವ ನವ್ಯ ಲೇಖಕರು ಲಿಂಗ ರಾಜಕಾರಣ ಮಾಡಿದ್ದಾರೆ. ದೈಹಿಕ ಸೌಂದರ್ಯದ ವರ್ಣನೆ ಎನ್ನುವುದು ಮಹಿಳೆಗೆ ಮಾತ್ರ ಏಕೆ? ಗಂಡಿನ ದೈಹಿಕ ಸೌಂದರ್ಯ ನವ್ಯ ಲೇಖಕರಲ್ಲಿ ಅಪ್ಪಿ ತಪ್ಪಿಯೂ ಚರ್ಚೆಗೆ ಒಳಪಡುವುದಿಲ್ಲ ಏಕೆ? ಇವರು ವರ್ಣಿಸಿರುವ ಮಹಿಳೆಯ ದೈಹಿಕ ಸೌಂದರ್ಯದ ವರ್ಣನೆಗಳು ಅಷ್ಟು ಅಶ್ಲೀಲವಾಗಿ ಇರಲೇ ಬೇಕಿದ್ದ ಅನಿವಾರ್ಯತೆ ಇತ್ತಾ? ಇಂತಹ ಮೊದಲಾದ ಪ್ರಶ್ನೆಗಳನ್ನು ನವ್ಯ ಕಥನ ಸಾಹಿತ್ಯವು ನಮ್ಮಲ್ಲಿ ಮೂಡಿಸುತ್ತವೆ. ಹೊಸತನವನ್ನು ನೀಡುವ ಉತ್ಸಾಹದಲ್ಲಿ ಬಂದ ನವ್ಯ ಸಾಹಿತ್ಯ ಮಹಿಳೆಯ ವಿಷಯದಲ್ಲಿ ಮಾತ್ರ ಹಿಂದಿನ ಸಾಹಿತ್ಯದ ಮನೋಧರ್ಮದಂತೆ ನಡೆದಿದೆ. ಹಳೆಗನ್ನಡ ಸಾಹಿತ್ಯದಿಂದ ಹಿಡಿದು ನವ್ಯ ಕಾಲಘಟ್ಟದವರೆಗೂ ಮಹಿಳೆ ಭೋಗದ ವಸ್ತುವಾಗಿ ಬಂದಿರುವುದು ಒಂದು ವಿಪರ್ಯಾಸವಾಗಿದೆ. ನವ್ಯ ಲೇಖಕರು ನವ್ಯದಿಂದ ಹೊರ ಬಂದ ಮೇಲೆ ಸೃಷ್ಟಿಸಿದ ರಂಗವ್ವ, ಕಿರಗೂರಿನ ಮಹಿಳೆಯರು ನಿಜವಾದ ಅರ್ಥದಲ್ಲಿ ಸ್ವತಂತ್ರ ಮನೋಭಾವ ಹೊಂದಿರುವ ಅಸ್ತಿತ್ವ ಸ್ಥಾಪಿಸಿರುವ ಮಹಿಳೆಯರಾಗಿದ್ದಾರೆ. ಆದರೆ ನವ್ಯ ಕಾಲಘಟ್ಟದಲ್ಲಿ ಮಾತ್ರ ಇಂತಹ ಮಹಿಳೆಯರು ಕಾಣಸಿಗುವುದು ಅಪರೂಪವಾಗಿದೆ.

ನವ್ಯ ಲೇಖಕರು ಮಹಿಳೆಯ ಮೇಲೆ ನಡೆಯುವ ಶೋಷಣೆಯ ಸ್ವರೂಪವನ್ನು ಮನಗಂಡರೆ ಹೊರತು ಆ ಶೋಷಣೆಯ ವಿರುದ್ಧ ಮಹಿಳೆಯ ಆತ್ಮಶಕ್ತಿಯನ್ನು ಬೆಳೆಸುವಲ್ಲಿ ಗಮನ ಹರಿಸಲಿಲ್ಲ. ಪುರುಷರ ಕ್ರೌರ್ಯದಲ್ಲಿ ನಲುಗಿ ಹೋಗುವ ಯಮುನಕ್ಕ, ಆಬೋಲಿನ, ನಿರ್ಮಲೆ, ಜಾನಕಿ ಈ ಮೊದಲಾದ ಮಹಿಳೆಯರಿಗೆ ಆ ಕ್ರೌರ್ಯಕ್ಕೆ ವಿರುದ್ಧವಾಗಿ ಮಹಿಳೆಯರು ತಮ್ಮ ಆತ್ಮಬಲ ಪ್ರದರ್ಶಿಸುವ ರೀತಿ ಇಲ್ಲಿ ಆಗಲಿಲ್ಲ ಬದಲಿಗೆ ಪುರುಷ ಪ್ರಧಾನ ವ್ಯವಸ್ಥೆಯ ಕ್ರೂರತನಕ್ಕೆ ಈ ಮಹಿಳೆಯರು ಬಲಿಯಾಗುತ್ತಾರೆ. ಇಲ್ಲೆಲ್ಲಾ ಮಹಿಳೆಯ ಮೇಲಿನ ಶೋಷಣೆಯ ದಾಖಲೀಕರಣವನ್ನು ನವ್ಯ ಲೇಖಕರು ಮಾಡಿದ್ದಾರೆ ಹೊರತು ಅದಕ್ಕೆ ಪರಿಹಾರವನ್ನು ಕಟ್ಟಿಕೊಡುವ ಕೆಲಸ ಮಾಡಿಲ್ಲ. ಆ ಮೂಲಕ ನವ್ಯ ಲೇಖಕರು ತಮ್ಮ ಸಾಮಾಜಿಕ ಜವಾಬ್ದಾರಿಯನ್ನು ಮರೆತಿದ್ದಾರೆ.

ಲೈಂಗಿಕತೆಯ ವಿಷಯದಲ್ಲಿ ನವ್ಯ ಲೇಖಕರು ಮಹಿಳೆಗಿದ್ದ ಮಡಿವಂತಿಕೆಯನ್ನು ದೂರ ಸರಿಸಿದರು. ಆದರೆ ಲೈಂಗಿಕ ಮಡಿವಂತಿಕೆ ಮಹಿಳೆಯ ಸಮಸ್ಯೆಯಾಗಿರಲಿಲ್ಲ. ಆದರೆ ಅದನ್ನು ಮನಗಾಣದ ನವ್ಯ ಸಾಹಿತಿಗಳು ಲೈಂಗಿಕತೆಯ ವಿಷಯವನ್ನೇ ವಿಜೃಂಭಿಸಿ ಮಹಿಳೆಯ ಸಮಸ್ಯೆಯನ್ನು ಕಡೆಗಾಣಿಸಿದರು. ಹಿಂದಿನ ಸಾಹಿತ್ಯ ಲೋಕದಲ್ಲಿ ಪ್ರೇಮ ದೇವತೆಯಾಗಿ ವಿಜೃಂಭಿಸಿದ ಮಹಿಳೆ ನವ್ಯದ ಕಥನ ಸಾಹಿತ್ಯದ ಬಯಲಲ್ಲಿ ಬೆತ್ತಲಾದಳು. ಮಹಿಳೆಯನ್ನು ಬಯಲಲ್ಲಿ ಬೆತ್ತಲಾಗಿಸುವಲ್ಲಿ ವ್ಯಯಿಸಿದ ನವ್ಯ ಲೇಖಕರ ಚಾಣಾಕ್ಷತೆ ಆಕೆಯ ಸಮಸ್ಯೆಯ ಹತ್ತಿರ ಬರುವಷ್ಟರಲ್ಲಿ ಖಾಲಿಯಾಗಿತ್ತು. ಆದ ಕಾರಣ ನವ್ಯ ಲೇಖಕರು ಮಹಿಳೆಯನ್ನು ಕುರಿತಾದ ಸಮಸ್ಯೆಗಳ ದಾಖಲೀಕರಣ ಮಾಡಿ ಅದರ ಪರಿಹಾರವನ್ನು ಹುಡುಕದೆ ಪಲಾಯನವಾದಿಗಳಾದರು.

೭೦ರ ದಶಕದ ಉತ್ತರಾರ್ಧದಲ್ಲಿ ಹುಟ್ಟಿಕೊಂಡ ದಲಿತ, ಬಂಡಾಯ ಚಳುವಳಿ ಈ ಹಿಂದಿನ ಸಾಹಿತ್ಯದಲ್ಲಿ ಅನ್ಯಾಯಕ್ಕೆ ಒಳಗಾದವರಿಗೆ ನ್ಯಾಯ ದೊರಕಿಸಿ ಕೊಡುವ ಪ್ರಯತ್ನ ಮಾಡಿತು. "ಅಸ್ಪೃಶ್ಯತೆ, ಜಾತಿಪದ್ಧತಿ, ಲಿಂಗಭೇದ ಮತ್ತು ವರ್ಗಭೇದ ನೀತಿಯ ವಿರುದ್ಧ ಹೋರಾಟವನ್ನು ಕಟ್ಟುವುದು ನಮ್ಮ ಉದ್ದೇಶಗಳಲ್ಲಿ ಒಂದು ಇಲ್ಲಿ ಜನಪರ ನಿಲುವುಗಳಿಗೆ ನಮ್ಮ ಬೆಂಬಲ; ಜನಪರವಾದ ಸಾಂಸ್ಕೃತಿಕ ಹೋರಾಟ ನಮ್ಮ ಮುಖ್ಯ ನೆಲೆ, ಇಂಥ ಒಲವಿನ ಸಾಹಿತ್ಯ ಸೃಷ್ಟಿ ನಮ್ಮ ಹೋರಾಟದ ಮುಖ್ಯ ದಾಖಲೆ" (ಬಂಡಾಯ ಸಾಹಿತ್ಯ ಸಂಘಟನೆಯ ಪ್ರಣಾಳಿಕೆ ಮತ್ತು ಸಂವಿಧಾನ, ೧೯೮೨, ಪುಟ ೨) ಎಂಬಂತಹ ಸ್ಪಷ್ಟ ಉದ್ದೇಶಗಳನ್ನು ಇಟ್ಟುಕೊಂಡು ಬಂದ ದಲಿತ ಬಂಡಾಯ ಸಾಹಿತ್ಯ ಚಳುವಳಿಯು ಮಹಿಳೆ ಸಮಸ್ಯೆಗೆ ಪರಿಹಾರ ಕೊಡುವಲ್ಲಿ ಪ್ರಯತ್ನಿಸಿತು. ಯಜಮಾನ ಸಂಸ್ಕೃತಿಯ ತಾರತಮ್ಯದ ವಿರುದ್ಧ ಪುರುಷ ಮತ್ತು ಮಹಿಳೆಯರು ಪ್ರಶ್ನಿಸಲಾರಂಭಿಸಿದರು.

ಸಂಪ್ರದಾಯ ಸಮಾಜದಲ್ಲಿನ ಕ್ರೌರ್ಯಗಳಿಗೆ ಬಲಿಯಾದ ಮಹಿಳೆ ಅದರ ವಿರುದ್ಧ ಪ್ರತಿಭಟಿಸುವ ಧ್ವನಿಯನ್ನು ಇಲ್ಲಿ ಪಡೆದುಕೊಂಡಳು. ಮಹಿಳೆಯ ಈ ಹಿಂದಿನ ಅಸಹಾಯಕತೆ, ನೋವುಗಳು ಆಕ್ರೋಶವಾಗಿ ಮಾರ್ಪಟ್ಟು ಪ್ರತಿಭಟನೆಯ ಸ್ವರೂಪವನ್ನು ಪಡೆದು ಕೊಂಡಿತು.

"ಕಾರ್ಯೇಷು ಮಂತ್ರೀ ಕರುಣೇಷು ದಾಸೀ
ಭೋಜ್ಯೇಷು ಮಾತಾ ಶಯನೇಷು ರಂಭಾ
ಧರ್ಮಾನುಕೂಲ ಕ್ಷಮಯಾಧರಿತ್ರೀ
ಷಾಡ್ಗುಣ್ಯ ಭಾರ್ಯಾ ಕುಲಮುದ್ಧರಂತಿ" (ಬಿ.ಸಿ ಜವಳಿ, ಹರಿಹರ ಕವಿಯ ಸ್ತ್ರೀ ಪಾತ್ರ ದರ್ಶನ, ೧೯೯೨, ಪುಟ ೯)

ಹೆಣ್ಣಿನ ಮೇಲೆ ಇಂತಹ ಗುಣಗಳನ್ನು ಆರೋಪಿಸುವ ವ್ಯವಸ್ಥೆ ತಪ್ಪಿಯೂ ಪುರುಷನಿಗೆ ಈ ಗುಣಗಳನ್ನು ಸೋಂಕಿಸುವುದೂ ಇಲ್ಲ. ಹೆಣ್ಣಿಗೆ ಆರೋಪಿಸಲಾಗಿರುವ ಈ ಗುಣಗಳ ಮೂಲಕವೇ ಆಕೆಯ ಶೋಷಣೆ ನಡೆಯುತ್ತಲೇ ಇದೆ ಎಂಬುದು ನಗ್ನ ಸತ್ಯವಾಗಿದೆ. ಹೀಗೆ ವ್ಯವಸ್ಥೆಯ ತಾರತಮ್ಯ ನೀತಿಗೆ ಒಳಪಟ್ಟು ಮಹಿಳೆ ಅನಾದಿ ಕಾಲದಿಂದಲೂ ನೋವಿಗೆ ಗುರಿಯಾಗುತ್ತಲೇ ಇದ್ದಾಳೆ. ಅವಳ ನೋವು ಇಲ್ಲಿ ರೋಷವಾಗಿ ಅನಾವರಣಗೊಂಡಿದೆ.

ಎರಡನೆಯ ದರ್ಜೆಯಾಗಿ ಗುರುತಿಸಿರುವ ಮಹಿಳೆಯ ಪರವಾಗಿ ಇಲ್ಲಿನ ಸಾಹಿತಿಗಳು ಮಾತನಾಡಿದ್ದಾರೆ.. ಪುರುಷನ ನಂತರದ ಸ್ಥಾನದಲ್ಲಿ ಮಹಿಳೆ ಯಾಕಿರಬೇಕು ಎಂದು ಧೋರಣೆಯನ್ನು ಇಲ್ಲಿ ಪ್ರಶ್ನಿಸಲಾಗಿದೆ.

"ನಾನೇಕೆ ಬಳ್ಳಿ ನೀನೇಕ ಮರ
ನನ್ನ ಕಾಲ ಮೇಲಲ್ಲವೆ ನನ್ನ ನಿಲುವು
ನನ್ನ ಬಾಳಿಗೂ ಇಲ್ಲವೆ ನಿನ್ನಂತೆ ಒಲವು
ಆಸರೆಯ ಮಾತೆಲ್ಲಾ ಬೇಸರದ ನುಡಿಗಳೀಗ
ನಾನು ಬಳ್ಳಿಯೂ ಅಲ್ಲ ನೀನು ಮರವೂ ಅಲ್ಲ
ಭೂಮಿಯಲ್ಲಿ ಹುಟ್ಟಿದ ಎರಡು ಗಿಡಗಳು ನಾವು" (ಎಂ.ಎಸ್. ವೇದಾ, ಬಿಳಲುಗಳು, ೧೯೯೮, ಪುಟ ೧೩)

ಸಮಾಜದಲ್ಲಿ ಪುರುಷ ಮತ್ತು ಮಹಿಳೆ ಇಬ್ಬರೂ ಪ್ರತ್ಯೇಕವಾಗಿ ಸ್ವತಂತ್ರರೂ ಸಮಾನರೂ ಎಂಬಂಶ ಈ ಕವಿತೆ ಪ್ರತಿಪಾದಿಸುತ್ತವೆ.

"ಅಂಜಿ ಹಿಂಜರಿಯದೆ । ಹಾವಿನ ಅಲ್ಲ ತೆಗೆದು
ಹಾವಾಡಿಸುವುದನು ಕಲಿಯಬೇಕವ್ವ
ಸೀತೆ ಸಾವಿತ್ರಿಯರಂತೆ ಬದುಕಿ
ಪಂಚ ಪತಿವ್ರತೆಯರ ಸಾಲಿಗೆ ಸೇರೆಂದು

ನಾನು ಹೇಳಲಾರೆ ತಂಗಿ।
ನೀನು ಸಾಲಿನಲಿ ನಿಂತು ತಂದ। ಸೀಮೆ ಎಣ್ಣೆಯ ಸುರುವಿ
ನಿನಗೇ ಬೆಂಕಿ ಹಚ್ಚುವ
ಈ ಪತಿರಾಯರಿಗೊಂದಿಷ್ಟು ಬುದ್ಧಿ ಕಲಿಸಲು
ನೀನು ಮಹಾಕಾಳಿಯಾಗ ಬೇಕವ್ವ" (ವಿಜಯಶ್ರೀ ಸಬರದ, ಕವಿತೆ, ೧೯೯೮, ಪುಟ ೧೪೮)

ಮದುವೆಯಾಗಿ ಗಂಡನ ಮನೆಗೆ ಹೋಗುವ ಹೆಣ್ಣು ಮಗಳೊಬ್ಬಳಿಗೆ ಈ ಮೇಲಿನಂತೆ ಸಲಹೆ ನೀಡುವ ಲೇಖಕಿ ಪರಂಪರಾಗತ ಮೌಲ್ಯದ ಸ್ತ್ರೀ ವಿರೋಧಿ ನೀತಿಯ ವಿರುದ್ಧ ಸೆಡ್ಡು ಹೊಡೆಯುತ್ತಾಳೆ.

"ದಿನಾಂಪ್ರತಿ ಹಸಿದು ಬರುತ್ತಿದ್ದ ಅವನಿಗೆ ನೀಡುವಷ್ಟು ಮಾಂಸ ನನ್ನಲ್ಲಿರಲಿಲ್ಲ. ಗರ್ಜಿಸುತ್ತಿದ್ದ ಹೆದರಿ ಮೂಲೆ ಸೇರುತ್ತಿದ್ದ ನನಗೆ ಈ ಗುಹೆಯಿಂದ ತಪ್ಪಿಸಿಕೊಂಡು, ಹೋಗುವುದಕ್ಕೆ ಸಾಧ್ಯವೇ ಇಲ್ಲವೆನಿಸಿತು. ದೊಡ್ಡವರ ಒಪ್ಪಿಗೆಯಿಂದ ಈ ಗುಹೆ ಸೇರಿದ್ದೆ, ಒಳಗೆ ಸೇರಿದ್ದೇ ಬಾಯಿಗೆ ದೊಡ್ಡ ಬಂಡೆಯನ್ನು ಅಡ್ಡಲಿಟ್ಟಿದ್ದರು. ಇವನು ಹೇಗೋ ಬಂಡೆಯನ್ನು ಒತ್ತರಿಸಿ ಹೊರಗೆ ಸುತ್ತಾಡಿಕಂಡ ಕಂಡದ್ದನ್ನು ಮೂಸಿ ಮೇದು ಬರುತ್ತಿದ್ದ ಬಕಾಸುರ ಹೊಟ್ಟೆಗೆ ಅಷ್ಟು ಸಾಕಾಗದೆ ನನ್ನ ಮಾಂಸ ಬೇರೆ ಬೇಕಿತ್ತು. ಮಿರ ಮಿರ ಮಿಂಚುತ್ತ ಸುಪುಷ್ಟವಾಗಿದ್ದ ನನ್ನ ಮಾಂಸ ಕಂಡೊಡನೆ ಜೊಲ್ಲು ಸುರಿಸುತ್ತಿದ್ದ. ಆ ಕಣ್ಣುಗಳಲ್ಲಿ ಕೊಳ್ಳಿ ಬೆಂಕಿ ಉರಿಯುತ್ತಿತ್ತು." (ವಿಜಯ ಸುಬ್ಬರಾಜ್, ಮಾನಿಷಾದ, ೧೯೮೬, ಪುಟ ೭) ಇದು ಪುರುಷನ ಕಾಮದಾಹವನ್ನು ಸ್ಪಷ್ಟವಾಗಿ ಅಭಿವ್ಯಕ್ತಿಸುತ್ತದೆ. ಆತನ ಲೈಂಗಿಕತೆ, ಸ್ವಚ್ಛಂದ ನಡೆ ಹೇಳುವ ಈ ಮಾತುಗಳು ತನ್ನ ಹೆಂಡತಿ ಮೇಲೆ ನಡೆಸುವ ದೈಹಿಕ ಮತ್ತು ಮಾನಸಿಕ ಶೋಷಣೆಯನ್ನು ಅಕ್ಷರಗಳಲ್ಲಿ ಸಮರ್ಪಕವಾಗಿ ತೋರಿಸುತ್ತದೆ. ನವ್ಯ ಕಾಲಘಟ್ಟದ ಲೇಖಕರಲ್ಲಿ ಇಂತಹ ನಡೆಯನ್ನು ನಾವು ಕಾಣಲು ಸಾಧ್ಯವಿಲ್ಲ. ಹಸಿಹಸಿ ಲೈಂಗಿಕ ಚಿತ್ರಣಕ್ಕಾಗಿ ಪದಗಳನ್ನು ಖರ್ಚು ಮಾಡುವ ಅವರು ಮಹಿಳೆಯ ಅಸಹಾಯಕತೆ ಶೋಷಣೆಯನ್ನು ಅಷ್ಟೇ ಮುಕ್ತವಾಗಿ ಚರ್ಚಿಸಿಲ್ಲ.

"ನನ್ನ ಬಾಯ ಬಡಿದು ನಿರ್ಬಂಧಿಸ ಬೇಡ. ನಿನ್ನಷ್ಟೇ ಸ್ವಾತಂತ್ರ್ಯ ನನಗಿದೆ." (ವಿಜಯ ಸುಬ್ಬರಾಜ್, ಮಾನಿಷಾದ, ೧೯೮೬, ಪುಟ ೮) ಎನ್ನುವಂತಹ ಈ ಕಾಲಘಟ್ಟದ ಮಾತುಗಳು ನವ್ಯ ಕಥನ ಸಾಹಿತ್ಯದಲ್ಲಿ ಕೇಳಿಸುವುದೇ ಇಲ್ಲ. ಮಹಿಳೆಯ ಸ್ವತಂತ್ರವನ್ನು ಪುರುಷರು ಹತ್ತಿಕ್ಕುವ ಪ್ರಕ್ರಿಯೆ ನಿನ್ನೆ ಮೊನ್ನೆಯದ್ದಲ್ಲ, ಸಾಹಿತ್ಯ ಕೃತಿಗಳಲ್ಲೂ ಪುರುಷರು ಮಹಿಳೆಯ ಸ್ವಾತಂತ್ರ್ಯವನ್ನು ಹತ್ತಿಕ್ಕುವಂತೆಯೇ ಲೇಖಕರು ಸೃಷ್ಟಿಸಿದ್ದಾರೆ. ಇದಕ್ಕೆ ನವ್ಯಲೇಖಕರು ಹೊರತಾಗಿಲ್ಲ. ಮಹಿಳೆಯ ಬಾಯಿಂದ ನಿನ್ನಷ್ಟೇ ಸ್ವಾತಂತ್ರ್ಯ ನನಗಿದೆ

ಎಂದು ಹೇಳಿಸುವಷ್ಟು ನವ್ಯ ಲೇಖಕರು ನವ್ಯರಾಗಿಲ್ಲ. ಇಲ್ಲಿನ ಮಹಿಳೆ ತನ್ನ ಸ್ವಾತಂತ್ರ್ಯವನ್ನು ಪುರುಷನಿಗೆ ಬಿಟ್ಟು ಕೊಡುತ್ತಲೇ ತನ್ನ ಬದುಕನ್ನು ನಡೆಸುತ್ತಾಳೆ. ಮಹಿಳೆಯ ಸ್ವಾತಂತ್ರ್ಯವನ್ನು ಪುರುಷ ಹತ್ತಿಕ್ಕುವ ಬಗೆಗಾಗಲೀ ತನ್ನ ಸ್ವಾತಂತ್ರ್ಯದ ವಂಚಿತಳಾದ ಮಹಿಳೆಯ ಬಗೆಗಾಗಲೀ ಯಾವುದೇ ಗಮನವನ್ನು ನವ್ಯ ಕಥನ ಸಾಹಿತ್ಯ ನೀಡುವುದಿಲ್ಲ. ಮಹಿಳೆಯ ಮೇಲಿನ ಶೋಷಣೆಯನ್ನು ನವ್ಯೋತ್ತರ ಸಾಹಿತ್ಯ ಅನಾವರಣ ಮಾಡುವ ರೀತಿಯಲ್ಲಿ ನವ್ಯ ಕಥನ ಸಾಹಿತ್ಯ ಅನಾವರಣ ಮಾಡುವುದಿಲ್ಲ. ಜೊತೆಗೆ ನವ್ಯೋತ್ತರ ಸಾಹಿತ್ಯದಂತೆ ನವ್ಯ ಕಥನ ಸಾಹಿತ್ಯವು ಶೋಷಣೆಗೆ ಒಳಗಾದ ಮಹಿಳೆಯರಲ್ಲಿ ಜಾಗೃತಿ ಮೂಡಿಸಿ ಶೋಷಣೆಯ ವಿರುದ್ಧ ಪ್ರತಿಭಟಿಸುವ ಧ್ವನಿಯನ್ನು ಮಹಿಳೆಗೆ ನೀಡುವುದಿಲ್ಲ.

ನವ್ಯ ಕಥನ ಸಾಹಿತ್ಯವು ಪುರುಷರ ಪ್ರಪಂಚವನ್ನು ತೆರೆಯುತ್ತದೆ. ಇಲ್ಲಿ ಬರುವಂತಹ ನಾಯಕರು ದುರ್ಬಲ ಮನಸ್ಥಿತಿಯನ್ನು ಒಳಗೊಂಡು ಯಾವಾಗಲೂ ದ್ವಂದ್ವಗಳಲ್ಲಿಯೇ ಕಾಲಕಳೆಯುತ್ತಾರೆ. ಇಂತಹ ಸಂದರ್ಭಗಳಲ್ಲಿ ನಾಯಕರು ತಮ್ಮ ದುರ್ಬಲ ಮನಸ್ಥಿತಿಯನ್ನು ತೊಡೆದು ಹಾಕುವುದಕ್ಕಾಗಿ ಲೈಂಗಿಕತೆಯನ್ನು ಬಳಸಿಕೊಳ್ಳುತ್ತಾರೆ. ಇಲ್ಲಿ ಬರುವ ಮಹಿಳೆ ನಾಯಕನ ಭೋಗದ ವಸ್ತುವಾಗಿ ಬಳಕೆಯಾಗುತ್ತಾಳೆ. ಜೀವನಸತ್ಯ ಅರಿಯಲು ನವ್ಯದ ನಾಯಕರು ಲೈಂಗಿಕತೆಯನ್ನು ಬಳಸಿಕೊಳ್ಳುವ ಮೂಲಕ ಮಹಿಳೆಯನ್ನು ಭೋಗದ ವಸ್ತುವನ್ನಾಗಿಸಿದ್ದಾರೆ. ನವ್ಯ ಕಥನ ಸಾಹಿತ್ಯವು ಜೀವನ ಸತ್ಯ ತಿಳಿಯಲು ಲೈಂಗಿಕತೆಯನ್ನು ಮಾಧ್ಯಮವಾಗಿ ಬಳಸಿದ್ದು ಮಹಿಳೆಯ ಶೋಷಣೆಯ ಕಡೆಗೆ ಗಮನ ನೀಡದೆ ಇದ್ದುದ್ದಕ್ಕೆ ಮೊದಲ ಕಾರಣವಾಯಿತು. ಇದರ ಜೊತೆಗೆ ನವ್ಯ ಕಥನ ಸಾಹಿತ್ಯಕ್ಕೆ ಮಹಿಳಾ ಸುಧಾರಣಾವಾದಿ ಚಳುವಳಿಗಳ ಪ್ರಭಾವ ಆಗದೆ ಹೋಗಿರುವುದರಿಂದ ನವ್ಯ ಲೇಖಕರು ಮಹಿಳೆಯ ಶೋಷಣೆ, ಅಸಹಾಯಕತೆ, ಪ್ರತಿಭಟನೆ ಈ ಮೊದಲಾದವುಗಳ ಕಡೆ ಅವರ ಗಮನ ಹೋಗಿಲ್ಲ. ತಾತ್ವಿಕವಾಗಿ ಇಂತಹ ನೂರಾರು ಕಾರಣಗಳನ್ನು ನೀಡಬಹುದಾದರೂ ನವ್ಯ ಕಥನ ಸಾಹಿತ್ಯದಲ್ಲಿ ಮಹಿಳೆ ಅನಾವರಣವಾಗಬೇಕಿದ್ದ ರೀತಿಯಲ್ಲಿ ಆಗಿಲ್ಲ ಎಂದು ಹೇಳಬಹುದಾಗಿದೆ. ಮಹಿಳೆಯ ನಿಜವಾದ ರೂಪವನ್ನು ತೋರಿಸಲು ನವ್ಯಕಥನ ಸಾಹಿತ್ಯವು ವಿಫಲವಾಗಿದೆ. ಮಹಿಳೆ = ಲೈಂಗಿಕತೆ ಎನ್ನುವ ಸಮಾನಾಂತರ ನೆಲೆಯಲ್ಲಿ ಮಹಿಳೆ ಇಲ್ಲಿ ಬಳಕೆಯಾಗಿದ್ದಾಳೆ. ಸ್ವತಂತ್ರ ವ್ಯಕ್ತಿತ್ವದ ಪುರುಷನಿಗೆ ಸರಿಸಾಟಿಯಾದ, ಲಿಪ್‌ಸ್ಟಿಕ್, ಕಾಡಿಗೆಗಳಂತಹ ಕೃತಕ ಸೌಂದರ್ಯಗಳಲ್ಲಿ ಮುಳುಗಿ ಹೋಗಿರದ, ಸಂಘರ್ಷಗಳನ್ನು ಎದುರಿಸುವ ಮೂಲಕ ತಮ್ಮ ಅಸ್ತಿತ್ವ ಸ್ಥಾಪಿಸಿಕೊಳ್ಳುವ ಮಹಿಳೆಯರು ನವ್ಯ ಕಥನ ಸಾಹಿತ್ಯದಲ್ಲಿ ಬಹುತೇಕವಾಗಿ ಕಾಣಿಸುವುದು ಇಲ್ಲ.

ಕಿರಗೂರಿನ ಗಯ್ಯಾಳಿಗಳು, ಆಣೆಬಡ್ಡಿ ರಂಗವ್ವ, ಸಾವಿತ್ರಿ ಈ ಮೊದಲಾದ ಗಟ್ಟಿತನವಿರುವ ಮಹಿಳೆಯರು ನವ್ಯ ಕಾಲದ ಅವಸಾನದಲ್ಲಿ ಕಾಣಸಿಗುತ್ತಾರೆ. "ಆಣೆ ಬಡ್ಡಿ ರಂಗವ್ವ ಗಟ್ಟಿ ಹೆಂಗಸು; ಗಂಡ ಸತ್ತಾಗ ಕೇವಲ ಎರಡು ದಿನ ಅತ್ತು ಎಮ್ಮೆ, ಆಕಳುಗಳನ್ನು ನೋಡಿಕೊಂಡು ಆಗ ಚಿಕ್ಕವಳಿದ್ದ ಸಾವಂತ್ರಿಯನ್ನು ಮಡಿಲಲ್ಲಿಟ್ಟುಕೊಂಡು ಸಾಕಿ ದೊಡ್ಡವಳು ಮಾಡಿದಳು. ಊರ ಜನರೊಂದಿಗೆ ಬಡ್ಡಿಯ ವ್ಯವಹಾರ ಇಟ್ಟುಕೊಂಡ ರಂಗವ್ವ ಮೌನವಾಗಿ, ಗಟ್ಟಿಯಾಗಿ ಸುಖವಾಗಿ ಇದ್ದಳು". (ಪಿ.ಲಂಕೇಶ್, ಮುಸ್ಸಂಜೆ ಕಥಾ ಪ್ರಸಂಗ, ೨೦೦೭, ಪುಟ ೪) ಮಹಿಳೆಯೊಬ್ಬಳ ಬಗೆಗಿನ ಇಂತಹ ಮಾತುಗಳು ನವ್ಯ ಕಥನ ಸಾಹಿತ್ಯದಲ್ಲಿ ಕೇಳಿಸುವುದೇ ಇಲ್ಲ. ಬದುಕಿನಲ್ಲಿ ತನ್ನದೇ ಆದ ಅಸ್ತಿತ್ವ ಸ್ಥಾಪಿಸಿ ಕೊಂಡಿರುವ ಆಣೆ ಬಡ್ಡಿ ರಂಗವ್ವ ನವ್ಯೋತ್ತರ ಕಾಲದಲ್ಲಿ ಗುರ್ತಿಸಿಕೊಳ್ಳುತ್ತಾಳೆ. ಇಂತಹ ಸ್ವಾತಂತ್ರ ವ್ಯಕ್ತಿತ್ವ ಹೊಂದಿರುವ, ಅಸ್ತಿತ್ವ ಸ್ಥಾಪಿಸಿಕೊಂಡಿರುವ ಮತ್ತು ಅಂತಹ ಮಹಿಳೆಯ ಬಗೆಗೆ ಲೇಖಕರ ಆರೋಗ್ಯಪೂರ್ಣವಾದ ಮಾತುಗಳನ್ನು ನವ್ಯ ಕಥನ ಸಾಹಿತ್ಯದಲ್ಲಿ ಬಹುತೇಕವಾಗಿ ನಾವು ಕೇಳುವುದೇ ಇಲ್ಲ.

ಅನಾದಿ ಕಾಲದಿಂದಲೂ ಮಹಿಳೆಯರ ಮೇಲೆ ನಡೆಯುತ್ತಿರುವ ಶೋಷಣೆ ನವ್ಯ ಕಥನ ಸಾಹಿತ್ಯದಲ್ಲಿಯೂ ಮುಂದುವರೆದಿದೆ. ಮಹಿಳೆಯರಿಗಾಗಿಯೇ ರೂಪಿಸಿರುವ ಆದರ್ಶಗಳು ಮಹಿಳೆಯರನ್ನೇ ಶೋಷಿಸುತ್ತಿದೆ. ಮಹಿಳೆಯ ಮನಸ್ಸಿಗೆ ಪ್ರಾಮುಖ್ಯತೆ ನೀಡದ ನವ್ಯ ಲೇಖಕರು ಮಹಿಳೆಯನ್ನು ಅಕ್ಷರಗಳ ಮೂಲಕ ಲೋಕದ ಎದುರು ಬೆತ್ತಲಾಗಿಸಿದ್ದಾರೆ. ಸ್ವಾತಂತ್ರ್ಯ, ವ್ಯಕ್ತಿತ್ವ, ಅಸ್ತಿತ್ವಗಳೆಲ್ಲಾ ಪುರುಷನ ಪಾಲಾಗಿ ಮಹಿಳೆ ಮತ್ತದೇ ಅಸಹಾಯಕಳಂತೆ ನಿಂತಿದ್ದಾಳೆ. ವಸ್ತು, ಭಾಷೆ, ತಂತ್ರ ಎಲ್ಲದರಲ್ಲೂ ಹೊಸತನವನ್ನು ಮೈಗೂಡಿಸಿಕೊಂಡ ನವ್ಯದಲ್ಲಿ ಮಹಿಳೆಯ ಸ್ಥಿತಿ ಹಿಂದಿನದಿಕ್ಕಿಂತ ಭಿನ್ನವಾಗಿದೆಯೇನೋ ಎಂದು ಒಳಹೊಕ್ಕು ನೋಡಿದರೆ ಮತ್ತದೇ ಹಿಂದಿನ ಮಹಿಳೆಯ ಚಿತ್ರ ಕಣ್ಣಿಗೆ ರಾಚುತ್ತದೆ. ನವ್ಯ ಲೇಖಕರು ಈಗಾಗಲೇ ಶೋಷಣೆಗೆ ಒಳಗಾಗಿರುವ ಮಹಿಳೆಯನ್ನು ಕೈ ಹಿಡಿದು ಸಾಂತ್ವನ ಹೇಳುವ ಬದಲು, ಅಕ್ಷರದ ಮೂಲಕ ಆಕೆಯನ್ನು ಬೆತ್ತಲುಗೊಳಿಸಿ ಆಕೆಯನ್ನು ಮತ್ತಷ್ಟು ಶೋಷಣೆಗೆ ಒಳಪಡಿಸಿದ್ದಾರೆ. ಒಟ್ಟಾರೆಯಾಗಿ ನವ್ಯ ಕಥನ ಸಾಹಿತ್ಯ ಲೋಕದಲ್ಲಿ ಮಹಿಳೆಯ ಸ್ಥಿತಿ ಬದಲಾಗದೆ ಹಾಗೇ ಉಳಿದುಕೊಂಡು ಬಂದಿದೆ.

ಪುರುಷ ಪ್ರಧಾನ ವ್ಯವಸ್ಥೆಯು ಅಸ್ತಿತ್ವದಲ್ಲಿರುವ ಈ ಸಮಾಜದಲ್ಲಿ ಮಹಿಳೆಯ ಅಸ್ತಿತ್ವವನ್ನು ನಾಶಪಡಿಸಲು ಇಲ್ಲದ ಕಸರತ್ತುಗಳು ಪ್ರತಿದಿನ ನಡೆಯುತ್ತಲೇ ಇರುತ್ತವೆ.

೨೧ನೇ ಶತಮಾನದಲ್ಲಿರುವ ನಾವು ಅಭಿವೃದ್ಧಿಯ ಪರಕಾಷ್ಠೆಯ ಹಂತದಲ್ಲಿ ನಿಂತಿದ್ದರೂ ಮಹಿಳೆಯ ವಿಷಯದಲ್ಲಿ ಮಾತ್ರ ಅನಾಗರಿಕರಂತೆ ವರ್ತಿಸುತ್ತಿದ್ದೇವೆ. ಕಲೆ, ಸಾಹಿತ್ಯ, ವಿಜ್ಞಾನ, ತಂತ್ರಜ್ಞಾನ, ವೈದ್ಯಕೀಯ ಬಾಹ್ಯಕಾಶ ಈ ಮೊದಲಾದ ಕ್ಷೇತ್ರಗಳಲ್ಲಿ ಮಹಿಳೆಯ ಪ್ರವೇಶ ಇಂದು ಆಗಿದೆ. ಸಾಮಾಜಿಕವಾಗಿ ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಮಹಿಳೆ ತನ್ನನ್ನು ತಾನು ಗುರುತಿಸಿ ಕೊಳ್ಳುತ್ತಿದ್ದಾಳೆ. ಅಭಿವೃದ್ಧಿಯ ಹಾದಿಯಲ್ಲಿ ಪುರುಷನಷ್ಟೇ ಸರಿಸಮಾನವಾಗಿ ಮಹಿಳೆ ದಾಪುಗಾಲು ಹಾಕುತ್ತಿದ್ದಾಳೆ. ಈ ಎಲ್ಲಾ ಅಂಶಗಳನ್ನು ಕೇಂದ್ರವಾಗಿಟ್ಟುಕೊಂಡು ಮಹಿಳೆ ಈ ಸಮಾಜದಲ್ಲಿ ಶೋಷಣೆ ಮುಕ್ತಳು ಎಂದು ಭಾವಿಸಿದರೆ ತಪ್ಪಾದೀತು. ಹೊಸ ಹೊಸ ಅವಕಾಶಗಳಿಗೆ ತನ್ನನ್ನು ತಾನು ತೆರೆದುಕೊಳ್ಳುತ್ತಿರುವ ಮಹಿಳೆ, ಇಂದು ಹೊಸ ಹೊಸ ಸಮಸ್ಯೆಗಳಿಗೆ ತುತ್ತಾಗುತ್ತಿದ್ದಾಳೆ. ಮಹಿಳೆಯರ ಪಾಲಿಗೆ ಹೊಸ ಅವಕಾಶಗಳು ಇರುವಂತೆ ಇಂದು ಹೊಸ ಹೊಸ ಸಮಸ್ಯೆಗಳು ಮುನ್ನುಗ್ಗುವ ಆಕೆಯ ಕಾಲಿಗೆ ತೊಡರಾಗಿವೆ. ಹೊಸ ಅವಕಾಶಗಳನ್ನು ಬಳಸಿಕೊಳ್ಳುವ ಮಹಿಳೆ, ಇಂದು ತನ್ನ ಮೇಲೆರಗುವ ಹೊಸ ಸಮಸ್ಯೆಗಳನ್ನು ನಿಭಾಯಿಸುವ, ಅದರ ವಿರುದ್ಧ ಸೆಡ್ಡು ಹೊಡೆದು ನಿಲ್ಲುವ ಶಕ್ತಿ ಬೆಳೆಸಿಕೊಳ್ಳುವ ಅನಿವಾರ್ಯತೆಯಲ್ಲಿದ್ದಾಳೆ.

ಮಹಿಳಾ ವಿಮೋಚನಾ ಚಳುವಳಿಯಂತಹ ಈ ಸಂದರ್ಭದಲ್ಲಿ ನವ್ಯ ಸಾಹಿತ್ಯದ ಕೃತಿಗಳನ್ನು ಮರುಓದಿಗೆ ಒಳಪಡಿಸುವ ಜರೂರು ಇದೆ. ಆ ಮೂಲಕ ಹೊಸ ಪೀಳಿಗೆಗೆ ನಮ್ಮ ಹಿಂದಿನ ಸಾಹಿತ್ಯ ಕೃತಿಗಳಲ್ಲಿ ಪ್ರತಿಪಾದಿತವಾಗಿರುವ ಪುರುಷ ಪ್ರಧಾನ ದೃಷ್ಟಿಕೋನದಂತಹ ಲಿಂಗ ರಾಜಕಾರಣವನ್ನು ಅನಾವರಣ ಮಾಡಬೇಕಿದೆ. ಈ ನಿಟ್ಟಿನಲ್ಲಿ ಈ ಸಂಶೋಧನಾ ಮಹಾ ಪ್ರಬಂಧ ಒಂದು ಸಣ್ಣ ಪ್ರಯತ್ನ ಮಾತ್ರ. ಈ ಪ್ರಯತ್ನಗಳಲ್ಲಿ ಇನ್ನೂ ಅನೇಕ ಸಾಧ್ಯತೆಗಳಿವೆ. ಅಧ್ಯಯನದ ಕಾಲಮಿತಿಯಲ್ಲಿ ಎಲ್ಲಾ ಸಾಧ್ಯತೆಗಳ ಅಧ್ಯಯನ ಕಷ್ಟ ಸಾಧ್ಯ. ಹೀಗಾಗಿ ಮಹಿಳೆಯನ್ನು ಕುರಿತಂತೆ ಬೇರೆ ಬೇರೆ ಆಯಾಮಗಳಲ್ಲಿ ಅಧ್ಯಯನ ಮಾಡುವ ಮೂಲಕ ಗಂಭೀರ ಚರ್ಚೆಗೆ ಎಡೆಮಾಡಿಕೊಡಬೇಕಾಗಿದೆ. ಆದ್ದರಿಂದ ನವ್ಯ ಕಥನ ಸಾಹಿತ್ಯದಲ್ಲಿ ಮಹಿಳೆಯನ್ನು ಕುರಿತಂಥ ನನ್ನ ಸಂಶೋಧನಾ ಅಧ್ಯಯನ ಈ ದಿಸೆಯಲ್ಲಿ ಸಾಕಷ್ಟು ತೃಪ್ತಿಕರವಾಗಿ ನಡೆದಿದ್ದರೂ ಮುಂದಿನ ಅಧ್ಯಯನದ ಸಾಧ್ಯತೆಗಳನ್ನು ನನ್ನ ಈ ಪ್ರಬಂಧ ವಿಸ್ತರಿಸುತ್ತದೆ ಎಂದು ನಂಬಿದ್ದೇನೆ.

# ಅನುಬಂಧ – ೧

## ಪ್ರಾಥಮಿಕ ಆಕರ ಗ್ರಂಥಗಳು

೧. ಅನಂತಮೂರ್ತಿ ಯು.ಆರ್– ಭವ – ೨೦೦೯ – ಅಕ್ಷರ ಪ್ರಕಾಶನ, ಸಾಗರ

೨. ಅನಂತಮೂರ್ತಿ ಯು.ಆರ್– ಸಂಸ್ಕಾರ – ೧೯೬೫ –ಅಕ್ಷರ ಪ್ರಕಾಶನ, ಸಾಗರ

೩. ಅನಂತಮೂರ್ತಿ ಯು.ಆರ್– ಅವಸ್ಥೆ – ೧೯೭೮ – ಅಕ್ಷರ ಪ್ರಕಾಶನ, ಸಾಗರ

೪. ಅನಂತಮೂರ್ತಿ ಯು.ಆರ್ – ದಿವ್ಯ – ೨೦೦೮ – ಅಕ್ಷರ ಪ್ರಕಾಶನ, ಸಾಗರ

೫. ಅನಂತಮೂರ್ತಿ ಯು.ಆರ್ – ಐದು ದಶಕದ ಕಥೆಗಳು – ೨೦೦೭ – ಅಕ್ಷರ ಪ್ರಕಾಶನ, ಸಾಗರ

೬. ಅನಂತಮೂರ್ತಿ ಯು.ಆರ್ – ಭಾರತೀಪುರ – ೨೦೦೮ – ಅಕ್ಷರ ಪ್ರಕಾಶನ, ಸಾಗರ

೭. ಕುಸುಮಾಕರ ದೇವರಗೆಣ್ಣೂರು – ನಾಲ್ಕನೆಯ ಆಯಾಮ – ೨೦೧೩– ಮೈಸೂರು ವಿ.ವಿ. ಯ ಪಠ್ಯಪುಸ್ತಕ

೮. ಗಿರಿ – ಗತಿ, ಸ್ಥಿತಿ – ೧೯೯೯ – ಅಂಕಿತ ಪುಸ್ತಕ, ಬೆಂಗಳೂರು

೯. ಪೂರ್ಣಚಂದ್ರ ತೇಜಸ್ವಿ ಕೆ.ಪಿ. – ಕಿರಗೂರಿನ ಗಯ್ಯಾಳಿಗಳು – ೨೦೦೬ – ಪುಸ್ತಕ ಪ್ರಕಾಶನ , ಮೈಸೂರು

೧೦. ಪೂರ್ಣಚಂದ್ರ ತೇಜಸ್ವಿ ಕೆ.ಪಿ– ಹುಲಿಯೂರಿನ ಸರಹದ್ದು, ಸ್ವರೂಪ, ನಿಗೂಢ ಮನುಷ್ಯರು – ೨೦೧೩ – ಪುಸ್ತಕ ಪ್ರಕಾಶನ, ಮೈಸೂರು

೧೧. ಯಶವಂತ ಚಿತ್ತಾಲ – ಪುರುಷೋತ್ತಮ, ೨೦೦೬, – ಸಾಹಿತ್ಯ ಭಂಡಾರ, ಬೆಂಗಳೂರು

೧೨. ಯಶವಂತ ಚಿತ್ತಾಲ – ಛೇದ – ೨೦೦೮ – ಸಾಹಿತ್ಯ ಭಂಡಾರ, ಬೆಂಗಳೂರು

೧೩. ಯಶವಂತ ಚಿತ್ತಾಲ– ಶಿಕಾರಿ – ೨೦೦೭ – ಸಾಹಿತ್ಯ ಭಂಡಾರ, ಬೆಂಗಳೂರು

೧೪. ಯಶವಂತ ಚಿತ್ತಾಲ – ಚಿತ್ತಾಲರ ಕತೆಗಳು – ೧೯೮೩ – ಪ್ರಜಾ ಪ್ರಿಂಟರ್ಸ್ ಪ್ರೈ. ಲಿ., ಬೆಂಗಳೂರು

೧೫. ಯಶವಂತ ಚಿತ್ತಾಲ – ಮೂರು ದಾರಿಗಳು – ೨೦೦೦ – ಗೀತಾ ಬುಕ್ ಹೌಸ್ – ಮೈಸೂರು

೧೬. ರಾಘವ ಟಿ.ಜಿ – ಮನೆ – ೧೯೯೦ – ಗೀತಾ ಬುಕ್ ಹೌಸ್, ಮೈಸೂರು

೧೭. ಲಂಕೇಶ್ ಪಿ– ಮಂಜುಕವಿದ ಸಂಜೆ ಮತ್ತು ಇತರ ಕತೆಗಳು – ೨೦೦೪– ಲಂಕೇಶ್ ಪತ್ರಿಕೆ ಪ್ರಕಾಶನ – ಬೆಂಗಳೂರು

೧೮. ಲಂಕೇಶ್ ಪಿ –ಸಮಗ್ರ ಕಥೆಗಳು – ೧೯೯೨ – ಪತ್ರಿಕೆ ಪ್ರಕಾಶನ – ಬೆಂಗಳೂರು

೧೯. ಲಂಕೇಶ್ ಪಿ– ಮುಸ್ಸಂಜೆಯ ಕಥಾ ಪ್ರಸಂಗ ೨೦೦೭ – ಲಂಕೇಶ್ ಪ್ರಕಾಶನ, ಬೆಂಗಳೂರು

೨೦. ಲಂಕೇಶ್.ಪಿ – ಬಿರುಕು – ೨೦೦೭ – ಲಂಕೇಶ್ ಪ್ರಕಾಶನ, ಬೆಂಗಳೂರು

೨೧. ಲಂಕೇಶ್ ಪಿ – ಉಲ್ಲಂಘನೆ ಮತ್ತು ಇತರ ಕತೆಗಳು – ೨೦೦೮ – ಲಂಕೇಶ್ ಪ್ರಕಾಶನ, ಬೆಂಗಳೂರು

೨೨. ಲಂಕೇಶ್ ಪಿ – ಅಕ್ಕ – ೨೦೦೭ ಲಂಕೇಶ್ ಪ್ರಕಾಶನ, ಬೆಂಗಳೂರು

೨೩. ವೀಣಾಶಾಂತೇಶ್ವರ – ನಡೆದದ್ದೇ ದಾರಿ – ೨೦೦೬ – ಸುಂದರ ಪ್ರಕಾಶನ, ಧಾರವಾಡ.

೨೪. ಶಾಂತಿನಾಥ ದೇಸಾಯಿ – ವಿಕ್ಷೇಪ – ೨೦೦೨ – ಸ್ವಪ್ನ ಬುಕ್ ಹೌಸ್, ಬೆಂಗಳೂರು

೨೫. ಶಾಂತಿನಾಥ ದೇಸಾಯಿ – ಸೃಷ್ಟಿ – ೨೦೦೨ – ಸ್ವಪ್ನ ಬುಕ್ ಹೌಸ್, ಬೆಂಗಳೂರು

೨೬. ಶಾಂತಿನಾಥ ದೇಸಾಯಿ – ಮುಕ್ತಿ – ೨೦೦೨ – ಸ್ವಪ್ನ ಬುಕ್ ಹೌಸ್, ಬೆಂಗಳೂರು

೨೭. ಶಾಂತಿನಾಥ ದೇಸಾಯಿ – ಬೀಜ – ೨೦೦೨ – ಸ್ವಪ್ನ ಬುಕ್ ಹೌಸ್, ಬೆಂಗಳೂರು

೨೮. ಶಾಂತಿನಾಥ ದೇಸಾಯಿ – ಓಂಣಮೋ –– ೧೯೯೮ – ಎಸ್.ಬಿ.ಎಸ್. ಪಬ್ಲಿಕೇಷನ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು

೨೯. ಶಾಂತಿನಾಥ ದೇಸಾಯಿ – ಅಂತರಾಳ – ೨೦೦೨ – ಸ್ವಪ್ನ ಬುಕ್ ಹೌಸ್, ಬೆಂಗಳೂರು

೩೦. ಶಾಂತಿನಾಥ ದೇಸಾಯಿ – ಸಮಗ್ರ ಕಥೆಗಳು – ೨೦೦೧ – ಸ್ವಪ್ನ ಬುಕ್‌ಹೌಸ್,ಬೆಂಗಳೂರು

೩೧. ಶಾಂತಿನಾಥ ದೇಸಾಯಿ – ಸಂಬಂಧ – ೨೦೦೩ – ಸ್ವಪ್ನ ಬುಕ್‌ಹೌಸ್,ಬೆಂಗಳೂರು

# ಅನುಬಂಧ – ೨

## ಪರಾಮರ್ಶನ ಗ್ರಂಥಗಳು


೧. ಅಗ್ರಹಾರ ಕೃಷ್ಣಮೂರ್ತಿ (ಸಂ.) – ಸಂಸ್ಕೃತಿ ಕಥನ – ೨೦೦೬ – ಸುವರ್ಣ ಕರ್ನಾಟಕ ಉತ್ಸವ

೨. ಅನಸೂಯ ಕಾಂಬಳೆ – ವಿಚಾರ ಸಾಹಿತ್ಯ ಮತ್ತು ಹೆಣ್ಣು – ೧೯೯೯ – ವೈಚಾರಿಕ ಸಾಹಿತ್ಯ ಪ್ರಕಾಶನ, ಬೆಳಗಾವಿ

೩. ಅಶೋಕ ಟಿ.ಪಿ. – ತೇಜಸ್ವಿ ಕಥನ – ೨೦೧೦– ಅಕ್ಷರ ಪ್ರಕಾಶನ, ಸಾಗರ

೪. ಅನಂತಮೂರ್ತಿ ಯು.ಆರ್. – ಪ್ರಜ್ಞೆ ಮತ್ತು ಪರಿಸರ –– ೧೯೭೬ , ಅಕ್ಷರ ಪ್ರಕಾಶನ, ಸಾಗರ

೫. ಅನಂತಮೂರ್ತಿ ಯು.ಆರ್ ಒಂದು ಅಧ್ಯಯನ, ೧೯೯೫, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, –ಉಡುಪಿ

೬. ಅನಂತಮೂರ್ತಿ ಯು.ಆರ್ ––ಸನ್ನಿವೇಶ –೧೯೭೪, ಅಕ್ಷರ ಪ್ರಕಾಶನ, ಸಾಗರ

೭. ಅಶೋಕ ಟಿ.ಪಿ. – ನವ್ಯ ಕಾದಂಬರಿಯ ಪ್ರೇರಣೆಗಳು –೧೯೭೮, ಬಾಪ್ಕೊ ಪ್ರಕಾಶನ, ಬೆಂಗಳೂರು

೮. ಅಮೂರ ಜಿ.ಎಸ್– ಸಮಕಾಲೀನ ಕಥೆ ಕಾದಂಬರಿ ಹೊಸ ಪ್ರಯೋಗಗಳು – ೧೯೮೧ – ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೯. ಅಶೋಕ ಟಿ.ಪಿ. –ಯು.ಆರ್.ಅನಂತಮೂರ್ತಿ ಒಂದು ಅಧ್ಯಯನ –೨೦೦೭– ಅಕ್ಷರ ಪ್ರಕಾಶನ, ಸಾಗರ

೧೦. ಅಮೂರ ಜಿ.ಎಸ್– ಕನ್ನಡ ಕಥನ ಸಾಹಿತ್ಯ, ಕಾದಂಬರಿ –– ೨೦೦೬ – ಸ್ವಪ್ನ ಬುಕ್ ಹೌಸ್, ಬೆಂಗಳೂರು

೧೧. ಅಮರೇಶ ನುಗಡೋಣಿ – ಕನ್ನಡ ಸಂಶೋಧನೆಯ ವೈಧಾನಿಕತೆಗಳು – (ಸಂ.) ೨೦೦೮ – ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೨. ಉದ್ದಂಡಯ್ಯ –ಕುವೆಂಪು ಕಥನ –೨೦೦೪, ಅಧ್ಯಯನ ಮಂಡಲ, ಬೆಂಗಳೂರು

೧೩. ಕರೀಗೌಡ ಬೀಚನಹಳ್ಳಿ –ವ್ಯಷ್ಟಿ ಸಮಷ್ಟಿ – ೧೯೯೧ ಅಜಂತ ಪ್ರಕಾಶನ, ಬೆಂಗಳೂರು

೧೪. ಕೋದಂಡರಾಮ ಎನ್.ಕೆ – ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ –೧೯೯೬ ಡಾ. ಎನ್.ಕೆ.ಕೋದಂಡರಾಮ – ಗಾಯತ್ರಿ ಸ್ಮಾರಕ ಗ್ರಂಥ ಮಾಲೆ, ಮೈಸೂರು

೧೫. ಕುಲಶೇಖರಿ – ಈ ಶತಮಾನದ ಕನ್ನಡ ಕವಯತ್ರಿಯರು – ೧೯೮೮ – ಚಿನ್ಮಯಿ ಪ್ರಕಾಶನ, ಬೆಂಗಳೂರು

೧೬. ಗಿರಡ್ಡಿ ಗೋವಿಂದರಾಜ – ಸಮಗ್ರ ವಿಮರ್ಶೆ, – ಸಂಪುಟ ೨ – ೨೦೦೧ – ಸಂಪುಟ ೨ – ಸ್ವಪ್ನ ಬುಕ್‌ಹೌಸ್, ಬೆಂಗಳೂರು

೧೭. ಗಿರಡ್ಡಿ ಗೋವಿಂದರಾಜು – ಕಾದಂಬರಿ ವಸ್ತು ಮತ್ತು ತಂತ್ರ –– ೧೯೮೭, ಸ್ನೇಹ ಪ್ರಕಾಶನ

೧೮. ಗಿರಡ್ಡಿ ಗೋವಿಂದರಾಜು –ಸಣ್ಣಕತೆಯ ಒಲವುಗಳು –೧೯೭೮, ಸಾಹಿತ್ಯ ಭಂಡಾರ, ಹುಬ್ಬಳ್ಳಿ

೧೯. ಗಂಗಾನಾಯಕ್ ಕೆ.ಎನ್ – ಡಾ. ಶಾಂತಿನಾಥ ದೇಸಾಯಿ ಅವರ ಸಾಹಿತ್ಯ : ಒಂದು ಅಧ್ಯಯನ –– ೨೦೦೧ – ಬೂದಗುಪ್ಪೆ ಪ್ರಕಾಶನ, ಚಿಕ್ಕಮಗಳೂರು

೨೦. ಜಯಮ್ಮ ಕರಿಯಣ್ಣ.ಎಚ್ – ಹೆಣ್ಣಿನ ಸ್ಥಾನಮಾನ ಒಂದು ಪುನರವಲೋಕನ– ೨೦೦೦ –ಜಯಾ ಪ್ರಕಾಶನ, ಬೆಂಗಳೂರು

೨೧. ನೇಮಿಚಂದ್ರ – ಮಹಿಳಾ ಅಧ್ಯಯನ – ೨೦೦೦ – ಅಂಕಿತ ಪುಸ್ತಕ, ಬೆಂಗಳೂರು

೨೨. ಪೂರ್ಣಚಂದ್ರ ತೇಜಸ್ವಿ – ವಿಮರ್ಶೆಯ ವಿಮರ್ಶೆ –೨೦೦೯, ಪುಸ್ತಕ ಪ್ರಕಾಶನ, ಮೈಸೂರು

೨೩. ಪ್ರಸಾದಸ್ವಾಮಿ .ಎಸ್ – ಕಥೆ, ಕಥನ –– ೨೦೦೭ – ಧಾತ್ರಿ ಪುಸ್ತಕ, ಬೆಂಗಳೂರು

೨೪. ಪ್ರೀತಿ ಶುಭಚಂದ್ರ,( ಸಂ.)ಪ್ರಧಾನ್ ಗುರುದತ್ತ – – ಶಾಂತಿನಾಥ ದೇಸಾಯಿ –೨೦೦೬– ನವಕರ್ನಾಟಕ ಪ್ರಕಾಶನ, ಬೆಂಗಳೂರು

೨೫. ಬರಗೂರು ರಾಮಚಂದ್ರಪ್ಪ - ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ (ಸಂ.) - ೨೦೦೬ - ಕರ್ನಾಟಕ ಸಾಹಿತ್ಯ ಅಕಾಡೆಮಿ - ಬೆಂಗಳೂರು

೨೬. ಬಸವಣ್ಣ ಎಂ - ಯೂಂಗ್‌ನ ಮನೋವೈಜ್ಞಾನಿಕ ಸಿದ್ಧಾಂತಗಳು - ೧೯೭೪ -ಬೆಂ.ವಿ.ವಿ., ಬೆಂಗಳೂರು

೨೭. ಬಾಲಕೃಷ್ಣ.ಜೆ - ಕನಸೆಂಬ ಮಾಯಾಲೋಕ - ೧೯೯೬- ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಇಂಡಿಯನ್ ಇನ್ಸಿಟಿಟ್ಯೂಟ್ ಆಫ್ ಸೈನ್ಸ್ ಆವರಣ, ಬೆಂಗಳೂರು

೨೮. ಬೋರಲಿಂಗಯ್ಯ ಹಿ.ಚಿ. (ಸಂ) - ಕುವೆಂಪು ಮಹಿಳಾ ಮಂಥನ - ೨೦೦೬ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೯. ಮಹೇಶ್ವರಯ್ಯ. ಎಚ್.ಎಂ - ಪೂರ್ಣಚಂದ್ರ ತೇಜಸ್ವಿ - ೨೦೦೦ - ನವ ಕರ್ನಾಟಕ ಪಬ್ಲಿಕೇಷನ್, ಬೆಂಗಳೂರು

೩೦. ಮನುಚಕ್ರವರ್ತಿ .ಎನ್ - ಭಾರತೀಯ ಸ್ತ್ರೀವಾದ -೧೯೯೩ , ಅಕ್ಷರ ಪ್ರಕಾಶನ, ಸಾಗರ

೩೧. ಮಲ್ಲೇಪುರಂ. ಜಿ.ವೆಂಕಟೇಶ ( ಸಂ)- ತೌಲನಿಕ ಸಾಹಿತ್ಯಾಧ್ಯಯನ - ತತ್ವ - ವ್ಯಾಪ್ತಿ, ಜಿಜ್ಞಾಸೆ-೨೦೦೮ - ತ.ವೆಂ. ಸ್ಮಾರಕ, ಗ್ರಂಥ ಮಾಲೆ, ಗೋಕುಲಂ ೩ನೇ ಹಂತ, ಮೈಸೂರು

೩೨. ಮುಕ್ತಾಯಕ್ಕ ಹೆಚ್.ಎಸ್- ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ - ೧೯೯೭ - ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೩೩. ಮಂಗಳಾ ಪ್ರಿಯದರ್ಶಿನಿ.ಡಿ - ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ - ೨೦೦೭ - ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೪. ಮಂಗಳಾ ಚಿ.ನ., ಸುವರ್ಣ ಬಿ.ಜೆ. ಎನ್.ಬಿ.ಪರಿಮಳಾ ಬಾಯಿ ಮತ್ತು ಬಿ.ನಾಗೇಶ್ವರಿ - ಕರ್ನಾಟಕದ ಮಹಿಳೆಯರು, ಸಂಪುಟ ೧ - ಆಧುನಿಕ ಕನ್ನಡ ಲೇಖಕಿಯರು, - ೧೯೯೩- ಸಮನ್ವಿತಾ, ಮಹಿಳಾ ಅಧ್ಯಯನ ವಿಭಾಗ, ಎನ್.ಎಂ.ಕೆ.ಆರ್.ವಿ. ಮಹಿಳಾ ಕಾಲೇಜು ಜಯನಗರ, ಬೆಂಗಳೂರು

೩೫. ಮಾಲತಿ ಪಟ್ಟಣಶೆಟ್ಟಿ - ತಂದೆ ಬದುಕು ಗುಲಾಬಿ -- ೧೯೮೮ - ಕೃತಿ ಪ್ರಕಾಶನ, ಧಾರವಾಡ

೩೬. ರಾಜೇಂದ್ರ ಚೆನ್ನಿ (ಸಂ). - ಯಶವಂತ ಚಿತ್ತಾಲರ ಸಾಹಿತ್ಯ ಲೋಕ - ೨೦೧೧ ಪ್ರಿಸಮ್ ಬುಕ್ಸ್ ಪ್ರೈ.ಲಿ., ಬೆಂಗಳೂರು

೩೭. ರಾಘವೇಂದ್ರ ರಾವ್ ಎಚ್.ಎಸ್ - ಅವಗಾಹ - ೨೦೦೮ - (ಸಂ.) ಸಾಹಿತ್ಯ ಭಂಡಾರ, ಬೆಂಗಳೂರು

೩೮. ರಹಮತ್ ತರೀಕೆರೆ - ಕನ್ನಡ ಸಂಶೋಧನೆ ತಾತ್ವಿಕ ವಿಚಾರ - ೨೦೦೯ - ಪ್ರಸಾರಾಂಗ, ಹಂಪಿ

೩೯. ಲಲಿತಾ ನಾಯಕ್.ಬಿ.ಟಿ- ಬಿದಿರು ಮೆಳೆ ಕಂಟಿಯಲಿ. - ೧೯೯೭ - ಅಹಿತ ಪ್ರಕಾಶನ, ಬೆಂಗಳೂರು

೪೦. ಲಲಿತಾ ನಾಯಕ್.ಬಿ.ಟಿ- ಹಬ್ಬ ಮತ್ತು ಬಲಿ. - ೧೯೯೮ - ಅಂಕಿತ ಪ್ರಕಾಶನ, ಬೆಂಗಳೂರು

೪೧. ಲಲಿತಾ ನಾಯಕ್.ಬಿ.ಟಿ- ಗತಿ- ೧೯೯೧ - ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೪೨. ವೆಂಕಟೇಶ್ ಸಿ - ಲಂಕೇಶರ ಕಥನ ಸಾಹಿತ್ಯದಲ್ಲಿ ಗ್ರಾಮ ಸಮಾಜ - ೧೯೯೮ ಕನ್ನಡ ಸಂಘ ,ಕ್ರೈಸ್ಟ್ ಕಾಲೇಜು, ಬೆಂಗಳೂರು

೪೩. ವೀರಪ್ಪ ಜಿ.ಟಿ ,ಭೈರೇಗೌಡ. ಎಂ(ಸಂ.) - ತೇಜಸ್ವಿ ಸಾಹಿತ್ಯ ಕೃಷಿ - ೨೦೦೪
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೪೪. ವಿಜಯಾದಬ್ಬೆ (ಪ್ರ.ಸಂ) - ಬರಗೂರು ರಾಮಚಂದ್ರಪ್ಪ- ಸ್ತ್ರೀವಾದ ಮತ್ತು ಸ್ತ್ರೀವಾದಿ ವಿಮರ್ಶೆ -೧೯೯೩ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೪೫. ವಿಜಯಾದಬ್ಬೆ - ಮಹಿಳೆ ಮತ್ತು ಮಾನವತೆ -- ೨೦೦೩ - ಶ್ರೀಮತಿ ಯಶೋದಾರಾಗ್ ಟ್ರಸ್ಟ್ ,ಮೈಸೂರು

೪೬. ವಿಜಯಶ್ರೀ ಸಬರದ - ಸಾಹಿತ್ಯ ಮತ್ತು ಮಹಿಳೆ - - ೧೯೮೯ - ನವಕರ್ನಾಟಕ ಪ್ರಕಾಶನ, ಬೆಂಗಳೂರು

೪೭. ವಿಜಯಾದಬ್ಬೆ - ಇತಿಗೀತಿಗೆ - ೧೯೯೬- ರಚನಾ ಪ್ರಕಾಶನ, ಮೈಸೂರು

೪೮. ವಿಜಯಾದಬ್ಬೆ - ನಾರಿ - ದಾರಿ-ದಿಗಂತ -೧೯೯೭ - ರಚನಾ ಪ್ರಕಾಶನ, ಮೈಸೂರು

೪೯. ವಿಜಯಾದಬ್ಬೆ - ಮಹಿಳೆ ಸಾಹಿತ್ಯ ಸಮಾಜ - ೧೯೮೯ - ರಚನಾ ಪ್ರಕಾಶನ, ಮೈಸೂರು

೫೦. ವಿಜಯಶ್ರೀ ಸಬರದ (ಸಂ.) - ಸಾಹಿತ್ಯ ಮತ್ತು ಮಹಿಳೆ - ೧೯೮೯ ನವಕರ್ನಾಟಕ ಪ್ರಕಾಶನ, ಬೆಂಗಳೂರು

೫೧. ವಿಜಯಾ ಸುಬ್ಬರಾಜ್ – ೧೯೮೬ - ಮಾನಿಷಾದ – ಯೋಗಶ್ರೀ ಪ್ರಕಾಶನ, ಬೆಂಗಳೂರು

೫೨. ವಿಜಯಾ ಸುಬ್ಬರಾಜ್– ತ್ರಿಶಂಕು - ೧೯೮೨ - ಸತ್ಯಸಾಲ ಪ್ರಕಾಶನ, ಬೆಂಗಳೂರು

೫೩. ವಿಜಯಾ ಸುಬ್ಬರಾಜ್ - ಏನು ಹೇಳಲಿ ಗೆಳೆಯ - ೧೯೮೮ - ಲಿಪಿ ಮುದ್ರಣ, ಬಸವನಗುಡಿ, ಬೆಂಗಳೂರು

೫೪. ಶಿವರುದ್ರಪ್ಪ ಜಿ.ಎಸ್. – ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆ - ೧೯೭೭ ಪ್ರಸಾರಾಂಗ ಬೆಂಗಳೂರು ವಿ.ವಿ.

೫೫. ಶಿವಾನಂದ ಎಚ್.ಎಸ್ – ಹೆಣ್ಣು ಮತ್ತು ಭಾಷೆ - ೨೦೦೭ - ಮಹಿಳಾ ಅಧ್ಯಯನ ಕೇಂದ್ರ ಕನ್ನಡ ವಿ.ವಿ., ಹಂಪಿ

೫೬. ಶಿವಾನಂದ.ಎಸ್.ವಿರಕ್ತಮಠ - ಮಹಿಳೆ ಮತ್ತು ಧರ್ಮ - ೨೦೧೦ - ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೭. ಶಿರೂರ. ಬಿ.ವಿ - ಸಂಶೋಧನ ಸ್ವರೂಪ - - ೨೦೧೨ ಅನ್ನಪೂರ್ಣ ಪ್ರಕಾಶನ, ಹುಬ್ಬಳ್ಳಿ

೫೮. ಶ್ರೀಮತಿ ಎಚ್.ಎಚ್ (ಸಂ.) - ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ ೨೦೦೬, ಪ್ರಸಾರಾಂಗ, ಹಂಪಿ

೫೯. ಶ್ರೀಮತಿ ಎಚ್.ಎಸ್– ದ ಸೆಕೆಂಡ್ ಸೆಕ್ಸ್ ಒಂದು ಕನ್ನಡ ಓದು – ೨೦೦೭– ಅಧ್ಯಯನ ಮಂಡಲ, ಬೆಂಗಳೂರು

೬೦. ಶೇಷಗಿರಿರಾವ್ ಎಲ್.ಎಸ್ - ಸಮಗ್ರ ವಿಮರ್ಶಾ ಸಾಹಿತ್ಯ - ಸಂಪುಟ೭– ೨೦೧೦, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೬೧. ಶೇಷಗಿರಿರಾವ್ .ಎಲ್.ಎಸ್ - ಸಮಗ್ರ ವಿಮರ್ಶಾ ಸಾಹಿತ್ಯ, ಸಂಪುಟ ೧– ೨೦೧೦, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೬೨. ಶ್ರೀಮತಿ ಹೆಚ್.ಎಸ್.(ಅನು) – ಆಧುನಿಕ ಭಾರತದಲ್ಲಿ ಮಹಿಳೆ –– ೨೦೦೪ – ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ

೬೩. ಸುಮತೀಂದ್ರ ನಾಡಿಗ– ಎಂ.ಗೋಪಾಲಕೃಷ್ಣ ಅಡಿಗರ ಸಮಗ್ರ ಸಾಹಿತ್ಯ ವಿಮರ್ಶೆ ಮತ್ತು ವೈಚಾರಿಕ ಪ್ರಬಂಧಗಳು, ಸಂಪುಟ ೨, ೨೦೧೧ , ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೬೪. ಸವಿತಾ ನಾಗಭೂಷಣ–ಸ್ತ್ರೀಲೋಕ –೧೯೯೬ – ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ

೬೫. ಸಾರಾ ಅಬೂಬಕ್ಕರ್ – ವಜ್ರಗಳು –೧೯೯೦– ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೬೬. ಸಾರಾ ಅಬೂಬಕ್ಕರ್ – ಚಂದ್ರಗಿರಿಯ ತೀರದಲ್ಲಿ– ೧೯೯೧ – ಹೇಮಾಂಶು ಪ್ರಕಾಶನ, ಕಾಟಿಪಳ್ಳ, ದಕ್ಷಿಣ ಕನ್ನಡ

೬೭. ಸ್ತ್ರೀವಾದ – ೨೦೦೩– ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ

೬೮. ಹಾಲತಿ ಸೋಮಶೇಖರ್– ಪಿ.ಲಂಕೇಶ್ – ೨೦೦೮ – ನವಕರ್ನಾಟಕ ಪ್ರಕಾಶನ

೬೯. ಹಾಲತಿ ಸೋಮಶೇಖರ್ – ಮಹಿಳಾ ಚಳುವಳಿ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ –– ೨೦೦೭ – ವಿಸ್ಮಯ ಪ್ರಕಾಶನ, ಮೈಸೂರು

೭೦. ಹೇಮಪಟ್ಟಣಶೆಟ್ಟಿ –ಅನುಲೇಖ– ೧೯೯೯ – ಅನನ್ಯ ಪ್ರಕಾಶನ, ಧಾರವಾಡ